# ಹೊಸತು




ನೆಮ್ಮದಿಯ ನಾಳೆ ನಮ್ಮದು




**ಚಿತ್ರಗಳು :** ಕಮಲಂ ಅರಸು, ನಾಮದೇವ ಕಾಗದಗಾರ, ತನು, ವಿ. ಗೋಪಾಲ್, ಗೀತಾ ಶಾಸ್ತ್ರಿ

**ಮುಖಪುಟ :** ಶಿಕ್ಷಣ ಮಾಧ್ಯಮ ಕುರಿತ ಚಿತ್ರ

**ವಿನ್ಯಾಸ :** ನವಕರ್ನಾಟಕ ವಿನ್ಯಾಸ

**ಕಚೇರಿ ಸಹಕಾರ :** ಜಿ. ವಿ. ತೇಜೋವತಿ


## ಈ ತಿಂಗಳು

ಈಚೆಗೆ ಕೆಲವು ವರ್ಷಗಳಿಂದ ಇಂಡಿಯನ್ ಸೈನ್ಸ್ ಕಾಂಗ್ರೆಸ್ ನಾನ್ ಸೈನ್ಸ್ ಅಥವಾ ನಾನ್‌ಸೆನ್ಸ್ ಆಗುತ್ತಿದೆ. ಭಾಜಪ ನೇತೃತ್ವದ ಪ್ರಧಾನಿ ಮೋದಿ ಅಧಿಕಾರ ವಹಿಸಿಕೊಂಡ ಮೇಲೆ ವಿಜ್ಞಾನ ಸಮಾವೇಶ ಉದ್ಘಾಟಿಸಿದಾಗ ಹುಚ್ಚಾಪಟ್ಟೆ ಭಾರತದ ಪುರಾಣ ಕತೆಗಳನ್ನು ಉದಾಹರಿಸಿ ನಮ್ಮ ಪುರಾತನಿಗಳು ಸರ್ವಜ್ಞರಾಗಿದ್ದರು, ಆಗಲೇ ಆಧುನಿಕ ವಿಜ್ಞಾನದ ಸಾಧನೆಗಳೆಲ್ಲ ಅವರಿಗೆ ಕರಗತವಾಗಿತ್ತು ಎಂದು ಹೇಳಿದ ಮೇಲೆ ಅನಂತರದ ಸೈನ್ಸ್ ಕಾಂಗ್ರೆಸ್‌ಗಳಲ್ಲಿ ನಕಲಿ ಸಾಧನೆಗಳಿಗೆ, ಪ್ರತಾಪಗಳಿಗೆ ಸಾಕ್ಷಿಯಾಗುತ್ತಿದೆ. ವೇದಕಾಲಗಳಲ್ಲಿಯೇ ಭಾರತೀಯ ವಿಜ್ಞಾನದಲ್ಲಿ ಪ್ರಗತಿಯಾಗಿತ್ತು ಎಂದು ಬಡಾಯಿ ಕೊಚ್ಚುವುದು ಮಾಮೂಲಾಗಿಬಿಟ್ಟಿದೆ.

ಪಂಜಾಬ್‌ನಲ್ಲಿ ನಡೆದ ೧೦೬ನೇ ವಿಜ್ಞಾನ ಸಮಾವೇಶದಲ್ಲಿ ಅಂಥದ್ದೊಂದು ಪ್ರಬಂಧ ಮಂಡಿತವಾದದ್ದು ವಿವಾದಕ್ಕೆಡೆಕೊಟ್ಟಿದೆ. ಆಂಧ್ರ ವಿಶ್ವವಿದ್ಯಾನಿಲಯದ ವೈಸ್‌ಚಾನ್ಸೆಲರ್ ಜಿ. ನಾಗೇಶ್ವರ ರಾವ್ ಮತ್ತು ಡಾ॥ ಕಣ್ಣನ್ ಕೃಷ್ಣನ್ ಇವರುಗಳೇ ವೇದಕಾಲೀನ ವಿಜ್ಞಾನ ಸಾಧನೆಗಳನ್ನು ನುಸುಳಿಸಿದ್ದು. ಅವರು ಮಂಡಿಸಿದ ಅವೈಜ್ಞಾನಿಕ ವಿಚಾರಗಳು ಎಲ್ಲರಿಗೂ ತಿಳಿದಿರುವುದರಿಂದ ಇಲ್ಲಿ ಪ್ರಸ್ತಾಪಿಸುವುದು ಅನಗತ್ಯ. ಮೋದಿ ಅಧಿಕಾರಾವಧಿಯಲ್ಲಿ ವೇದಗಳ ಕಾಲದಲ್ಲಿಯೇ ಸ್ಟೆಮ್ ಸೆಲ್‌ಗಳ ವಿಚಾರ, ವಿಮಾನ ಹಾಗೂ ಅಂತರಿಕ್ಷ ಅನ್ವೇಷಣೆಗೆ ಕಳಿಸುವ ಉಪಗ್ರಹಗಳ ತಂತ್ರಜ್ಞಾನ, ತಳಿಶಾಸ್ತ್ರ ಮೊದಲಾದವೆಲ್ಲ ತಿಳಿದಿತ್ತು ಎಂದು ಹೇಳಿಕೊಳ್ಳುವುದು ಹೆಚ್ಚಾಗುತ್ತಿದೆ. ಸೈನ್ಸ್ ಕಾಂಗ್ರೆಸ್ಸಿನಲ್ಲಿ ಇಂಥ ಅವೈಜ್ಞಾನಿಕ ವಿಚಾರಗಳು ಮಂಡನೆಯಾಗುವುದನ್ನು ತಡೆಯಲು ಸಂಘಟಕರ ಬೇಜವಾಬ್ದಾರಿತನವೇ ಆಗಿದೆ. ಸರಕಾರದ ವೈಜ್ಞಾನಿಕ ಸಲಹೆಗಾರ ವಿಜಯರಾಘವನ್ ಇಂಥ ವಿಚಾರಗಳನ್ನು ಖಂಡಿಸಿದ್ದಾರೆ. ಸಮರ್ಪಕವಾಗಿ ಪ್ರಬಂಧಗಳನ್ನು ಪರಾಮರ್ಶಿಸದೆ ಇರುವುದೇ ಇಂಥ ವೈಜ್ಞಾನಿಕವಲ್ಲದ ವಿಷಯಗಳ ಪ್ರಸ್ತಾಪಕ್ಕೆ ಅವಕಾಶವಾಗುತ್ತಿದೆ ಎಂದಿದ್ದಾರೆ. ನೊಬೆಲ್ ಪುರಸ್ಕೃತ ವೆಂಕಟರಾಮನ್ ರಾಮಕೃಷ್ಣನ್ ಒಂದು ಹೆಜ್ಜೆ ಮುಂದೆ ಹೋಗಿ ರಾಜಕಾರಣಿಗಳನ್ನು, ಪ್ರಧಾನವಾಗಿ ಪ್ರಧಾನಮಂತ್ರಿಯನ್ನು ಉದ್ಘಾಟನೆಗೆ ಕರೆಸುವುದನ್ನೇ ನಿಲ್ಲಿಸಬೇಕೆಂದು ಹೇಳಿದ್ದಾರೆ; ಇಂಡಿಯನ್ ಸೈನ್ಸ್ ಕಾಂಗ್ರೆಸ್ಸನ್ನು ರಾಜಕೀಯ ಆಸಕ್ತಿಯಿಂದ ಮುಕ್ತಗೊಳಿಸಬೇಕು ಎಂದು ಹೇಳಿದ್ದಾರೆ. ಬಡಾಯಿಗೆ ಅವಕಾಶವಾಗದಂತೆ ಎಚ್ಚರ ವಹಿಸಬೇಕು ಎನ್ನುವುದು ಎಲ್ಲ ವಿಚಾರಶೀಲರ, ವಿಜ್ಞಾನಿಗಳ ಅಭಿಮತ. ಸೈನ್ಸ್ ಕಾಂಗ್ರೆಸ್ ಅವೈಜ್ಞಾನಿಕ ವಿಚಾರಗಳಿಗೆ ಅವಕಾಶವಾಗದಂತೆ ತಡೆಯಲು ವೈಜ್ಞಾನಿಕ ಮನೋಭಾವ ಅಗತ್ಯ. ಅದನ್ನು ಬೆಳೆಸಲು ಎಲ್ಲರೂ ಶ್ರಮಿಸಬೇಕು. ಇಲ್ಲದಿದ್ದರೆ ಸೈನ್ಸ್ ಕಾಂಗ್ರೆಸ್ ತಮಾಷೆಯ ಮೇಳವಾಗುತ್ತದೆ.

* * *

ಚುನಾವಣೆಗಳು ಸಮೀಪಿಸುತ್ತಿದ್ದ ಹಾಗೇ ಮೋದಿಯವರು ತಮ್ಮ ಬತ್ತಳಿಕೆಯಲ್ಲಿ ಇನ್ನೂ ಏನೇನು ಇರಿಸಿಕೊಂಡಿದ್ದಾರೋ. ಐದು ವರ್ಷಗಳ ಸಾಧನೆ ಏನು ಎನ್ನುವುದು ಎಲ್ಲ ಜನಸಾಮಾನ್ಯರಿಗೂ ಗೊತ್ತಿದೆ. ೨೦೧೪ರ ಲೋಕಸಭಾ ಚುನಾವಣೆಗಳ ಸಮಯದಲ್ಲಿ ಕೊಟ್ಟಿದ್ದ ಎಲ್ಲ ಭರವಸೆಗಳೂ ಕಸದ ಬುಟ್ಟಿ ಸೇರಿಯಾಗಿದೆ. ಪ್ರತಿ ನಾಗರಿಕನ ಬ್ಯಾಂಕ್ ಖಾತೆಗೂ ೧೫ ಲಕ್ಷ ರೂಪಾಯಿ ಜಮಾ ಮಾಡುವ ವಿಚಾರ ಗಾಳಿಯಲ್ಲಿ ತೇಲುತ್ತಿದೆ; ಹಾಗೆಯೇ ಸ್ವಿಸ್ ಬ್ಯಾಂಕ್‌ನಲ್ಲಿರುವ ಕಪ್ಪು ಹಣ ಕೂಡ ಬರಲಿಲ್ಲ. ಬದಲಾಗಿ ಸಾವಿರಗಟ್ಟಳೆ ಸಾಲ ಮಾಡಿ ಹಲವರು ಪರದೇಶದಲ್ಲಿ ತಲೆಮರೆಸಿಕೊಂಡಿದ್ದಾರೆ. 'ಉಪಯೋಗವಾಗದ ಹಣ' ಎನ್ನುವ ನುಡಿಗಟ್ಟು ಬ್ಯಾಂಕುಗಳಲ್ಲಿ ಚಾಲ್ತಿಗೆ ಬಂದಿದೆ. ಇದರ ಮೊತ್ತವೇ ಲಕ್ಷ ಲಕ್ಷ ಕೋಟಿ. ನೋಟು ರದ್ದತಿ ಜನರನ್ನು ತೊಂದರೆಗೀಡುಮಾಡಿತೇ ಹೊರತು ಕಪ್ಪು ಹಣವನ್ನೇನೂ ಕರಗಿಸಲಿಲ್ಲ, ಭಯೋತ್ಪಾದನೆಯನ್ನು ತಡೆಯಲಿಲ್ಲ. ಕಾಶ್ಮೀರದ ಪರಿಸ್ಥಿತಿಯೇ ಅದಕ್ಕೆ ಸಾಕ್ಷಿ. ಹೀಗೇ ಪಟ್ಟಿ ಬೆಳೆಸಬಹುದು ಮೋದಿ ಸರಕಾರದ ವೈಫಲ್ಯಗಳ ಕುರಿತು. ಮುಂಬರುವ ಲೋಕಸಭೆ ಚುನಾವಣೆಗೆ ಸಿದ್ಧಗೊಳ್ಳುತ್ತಿರುವ ಭಾಜಪ ಮತ್ತೆ ಮೋದಿ–ಷಾರನ್ನು ಅಧಿಕಾರಕ್ಕೆ ತರಲು ಲೆಕ್ಕಾಚಾರ ಹಾಕುತ್ತಿದೆ. ಇಷ್ಟೆಲ್ಲ ಪೀಠಿಕೆ, ಮೊನ್ನೆ ಮೊನ್ನೆ ಚಳಿಗಾಲದ ಲೋಕಸಭಾ ಅಧಿವೇಶನದಲ್ಲಿ

*(೭ನೇ ಪುಟಕ್ಕೆ)*




ತಿಂಗಳ ಪತ್ರಿಕೆ

**ಹೊಸತು**

ನೆಮ್ಮದಿಯ ನಾಳೆ ನಮ್ಮದು

ನವಕರ್ನಾಟಕ ಪ್ರಕಾಶನ

ಸಂಪುಟ–೨೦ ಸಂಚಿಕೆ–೭ ಫೆಬ್ರವರಿ ೨೦೧೯

■ ***ಗೌರವ ಸಂಪಾದಕ***

ಜಿ. ರಾಮಕೃಷ್ಣ

■ ***ಸಂಪಾದಕ-ಮುದ್ರಕ-ಪ್ರಕಾಶಕ***

ಸಿದ್ದನಗೌಡ ಪಾಟೀಲ

■ ***ಸಹಸಂಪಾದಕರು***

ಎಂ. ಅಬ್ದುಲ್ ರೆಹಮಾನ್ ಪಾಷ
ಇಂದಿರಾ ಕುಮಾರಿ
ಸಿ. ಆರ್. ಕೃಷ್ಣರಾವ್
ಎನ್. ಗಾಯತ್ರಿ
ಎಸ್. ಸುರೇಂದ್ರ

■ ***ವ್ಯವಸ್ಥಾಪಕ***

ಎ. ರಮೇಶ ಉಡುಪ

■ ***ಮುದ್ರಣ***

**ಶ್ರೀ ವಿನಾಯಕ ಪ್ರಿಂಟರ್ಸ್**
೭೩೮/೧೦, ೬೦ನೇ ಅಡ್ಡರಸ್ತೆ
೫ನೇ ಬ್ಲಾಕ್, ರಾಜಾಜಿನಗರ
ಬೆಂಗಳೂರು – ೫೬೦ ೦೧೦

■ ***ಹೊಸತು ಕಚೇರಿಯ ವಿಳಾಸ***





**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೇಟ್ ಲಿಮಿಟೆಡ್**
೧೫, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ , ಅಂ. ಪೆ. ೫೧೫೯
ಕುಮಾರ ಪಾರ್ಕ್ ಪೂರ್ವ, ಬೆಂಗಳೂರು – ೫೬೦ ೦೦೧
ದೂರವಾಣಿ : ೨೨೧೬೧೯೧೧, ೨೨೧೬೧೯೧೨
**e-mail : navakarnataka@gmail.com**
**hosathu@gmail.com**
**hosathu.nkp@gmail.com**
**URL : www.navakarnataka.com**
**http : //navakarnataka.blogspot.in**
**http : //hosathumonthly.blogspot.in**




# ಸಂಪಾದಕೀಯ

## ಜಾತ್ರೆಗೂ ಬೇಕು ಸಾಹಿತ್ಯ ಸಂದೇಶ

**ಕ**ನ್ನಡ ಸಾಹಿತ್ಯ ಪರಿಷತ್ತು ಸರಕಾರದ ಸಹಯೋಗದಲ್ಲಿ ನಡೆಸುವ ಸಾಹಿತ್ಯ ಸಮ್ಮೇಳನಗಳನ್ನು 'ಜಾತ್ರೆ' ಎಂದು ಮೂದಲಿಸುವುದು ಸಹಜವಾಗಿದೆ. ಮೊದಮೊದಲು ಕೇವಲ ಸಾಹಿತಿಗಳ ಸಮ್ಮೇಳನವಾಗಿದ್ದ, ಚಿಂತನ–ಮಂಥನಗಳಿಗೆ ವೇದಿಕೆಯಾಗಿದ್ದ ಈ ಕಾರ್ಯಕ್ರಮ ಬರಬರುತ್ತ ನಾಡಿನ ಜನತೆ ಪಾಲ್ಗೊಳ್ಳುವ ಮೂಲಕ 'ಜಾತ್ರೆ'ಯ ಸ್ವರೂಪ ಪಡೆದಿದೆ. ಸಾಹಿತ್ಯ ಸಮ್ಮೇಳನಗಳ ಉದ್ಘಾಟನೆ, ಸಮಾರೋಪ ಸಮಾರಂಭಗಳಲ್ಲಿ ಮುಖ್ಯಮಂತ್ರಿ, ಮಂತ್ರಿಗಳು, ವಿರೋಧ ಪಕ್ಷಗಳ ನಾಯಕರು ಭಾಗವಹಿಸುವುದರಿಂದ ಅಲ್ಲಿ ಸಾಹಿತ್ಯಕ್ಕಿಂತ ರಾಜಕೀಯ ಹಿತಾಸಕ್ತಿಗಳೇ ಪ್ರಮುಖವಾಗಿರುವುದರಿಂದಲೂ ಅದಕ್ಕೆ 'ಜಾತ್ರೆ' ಎಂಬ ಮೂದಲಿಕೆ ಅಂಟಿಕೊಂಡಿರಬಹುದು. ೧೯೧೫ರಿಂದ ೧೯೪೮ರವರೆಗೆ ನಡೆದ ಸಾಹಿತ್ಯ ಸಮ್ಮೇಳನಗಳನ್ನು ಸಾಹಿತಿಗಳು ಮತ್ತು ಚಿಂತಕರೇ ಉದ್ಘಾಟಿಸಿದ ದಾಖಲೆಗಳಿವೆ. ನಂತರ ಮುಖ್ಯಮಂತ್ರಿಗಳು, ರಾಜಕಾರಣಿಗಳು ಸಮ್ಮೇಳನಗಳನ್ನು ನಿರಂತರವಾಗಿ ಉದ್ಘಾಟಿಸುತ್ತ ಬರುವ ಪರಂಪರೆ ಬೆಳೆದು, ಸಾಹಿತ್ಯ ಪರಿಷತ್ತು ಮತ್ತು ಅದು ನಡೆಸುವ ಸಮ್ಮೇಳನಗಳು ಹಲವು ಬಾರಿ ರಾಜಕೀಯ ಹಿತಾಸಕ್ತಿಯ ವೇದಿಕೆಗಳಾಗಿವೆ. ಇತ್ತೀಚೆಗೆ ಶಿವಮೊಗ್ಗೆಯಲ್ಲಿ ನಡೆದ ಸಾಹಿತ್ಯ ಸಮ್ಮೇಳನದಲ್ಲಿ ಯಾವ ಸಾಹಿತಿಗಳು ಭಾಗವಹಿಸಬೇಕು, ಯಾರು ಭಾಗವಹಿಸಬಾರದು ಎಂದು ಅಂದಿನ ಆಡಳಿತ ಪಕ್ಷದ ಸದಸ್ಯರು ಮೂಗು ತೂರಿಸಿ, ಪರಿಷತ್ ಅಧ್ಯಕ್ಷರ ಹಾಗೂ ರಾಜಕಾರಣಿಗಳ ನಡುವೆ ಸಂಘರ್ಷವಾದದ್ದು ರಾಜಕೀಯ ಹಿತಾಸಕ್ತಿಗಾಗಿ ಸಮ್ಮೇಳನವನ್ನು ಬಳಸಿಕೊಳ್ಳುವ ಪರಿಗೆ ಒಂದು ಉದಾಹರಣೆಯಾಯಿತು.

ಇಂದು ಸಾಹಿತ್ಯ ಸಮ್ಮೇಳನ ಕೇವಲ ಸಾಹಿತಿಗಳ ಸಮ್ಮೇಳನವಾಗದೇ ನಾಡಿನ ಜನತೆಯ, ಭಾಷೆಯ, ಸಂಸ್ಕೃತಿಯ, ಅಸ್ಮಿತೆಯ ಸಂಕೇತವಾಗುತ್ತಿರುವುದೂ ಸ್ವಾಗತಾರ್ಹ ಸಂಗತಿಯೇ. ಕಳೆದ ಶತಮಾನದ ೮೦ರ ದಶಕದವರೆಗೆ ಸಾವಿರ ಸಂಖ್ಯೆಯಲ್ಲಿ ಸಮ್ಮೇಳನಗಳಿಗೆ ಬರುತ್ತಿದ್ದ ಸಾಹಿತ್ಯಾಸಕ್ತರ ಸಂಖ್ಯೆ ಇಂದು ಲಕ್ಷಗಳಿಗೇರಿದೆ. ಇದೂ ಸಹ ರಾಜಕಾರಣಿಗಳು ಈ ವೇದಿಕೆಯನ್ನು ಬಳಸಿಕೊಳ್ಳಲು ಕಾರಣವಾಗಿದೆ. ಇನ್ನೊಂದೆಡೆ ಸರಕಾರ ಇಂದು ಈ ಸಮ್ಮೇಳನಗಳಿಗೆ ೧೦ ಕೋಟಿಗೂ ಹೆಚ್ಚಿನ ಅನುದಾನ ಮತ್ತು ಆಡಳಿತ ಯಂತ್ರದ ಸಹಕಾರವನ್ನು ನೀಡುತ್ತಿರುವುದರಿಂದ ರಾಜ್ಯದ ಆಡಳಿತ ಮತ್ತು ವಿರೋಧ ಪಕ್ಷಗಳ ಸದಸ್ಯರು ತಮ್ಮ ಭಾಗವಹಿಸುವಿಕೆಯನ್ನು ಹಕ್ಕಾಗಿ ಪ್ರತಿಪಾದಿಸುತ್ತಾರೆ. ಮುಖ್ಯಮಂತ್ರಿಗಳು, ಮಂತ್ರಿಗಳು, ವಿರೋಧ ಪಕ್ಷದ ನಾಯಕರು ಭಾಗವಹಿಸುವ ಸಮಾರಂಭಗಳಲ್ಲಿ ಅವರು ನೀಡುವ ಭರವಸೆಗಳು ಬಹುತೇಕವಾಗಿ ಭರವಸೆಗಳಾಗಿಯೇ ಉಳಿದು, ಮುಂದಿನ ಸಮ್ಮೇಳನಕ್ಕೆ ಹೊಸ ಭರವಸೆಗಳಾಗಿ ಪರಿವರ್ತನೆಯಾಗುತ್ತವೆ. ಸಮ್ಮೇಳನದ ಅಧ್ಯಕ್ಷರಿಗೆ 'ಉತ್ಸವ ಮೂರ್ತಿ' ಎಂಬ ವಿಶೇಷಣ ಅಂಟಿಕೊಂಡಿರುವುದಕ್ಕೆ ಕಾರಣ ಅವರು ಸಮ್ಮೇಳನದ ಕೇಂದ್ರ ಬಿಂದುವಾಗಿ, ಕುಂಭಮೇಳ, ರಥಾಸೀನ ಮೆರವಣಿಗೆಗೆ ಸೀಮಿತರಾಗಿರುವುದು. ತಮ್ಮ ಅಧ್ಯಕ್ಷತೆಯಲ್ಲಿ ಸಾವಿರಾರು ಜನರ ಸಮ್ಮುಖದಲ್ಲಿ ತೆಗೆದುಕೊಂಡ ನಿರ್ಣಯಗಳ ಜಾರಿಗಾಗಿ ಸಮ್ಮೇಳನದ ನಂತರ, ಕ್ರಿಯಾಶೀಲರಾಗಿ, ಚಟುವಟಿಕೆ, ಚಳುವಳಿ ಮಾಡಿದ ಉದಾಹರಣೆ ಇದುವರೆವಿಗೂ ದಾಖಲಾಗಿಲ್ಲ. ಒಂದು ವರ್ಷದ ನಂತರ ನಡೆವ ಮತ್ತೊಂದು ಸಮ್ಮೇಳನದಲ್ಲಿ 'ನಿಕಟಪೂರ್ವ ಅಧ್ಯಕ್ಷರಾಗಿ' ವಿರಾಜಮಾನರಾಗಿ ತಮ್ಮ ಬದುಕಿನ 'ಸಾರ್ಥಕ' ಕ್ಷಣಗಳನ್ನು ಅನುಭವಿಸುವುದೇ ಅವರ 'ಸೃಜನಶೀಲತೆ'ಗೆ ಮೋಕ್ಷ ಪ್ರಾಪ್ತಿ.

ಮುಖ್ಯಮಂತ್ರಿಗಳನ್ನು, ರಾಜಕಾರಣಿಗಳನ್ನು ಕರೆಯಬಾರದೆಂದಲ್ಲ. ಅವರೂ ಸಾಹಿತಿಗಳಾಗಿದ್ದರೆ, ಸಂಸ್ಕೃತಿ ಚಿಂತಕರಾಗಿದ್ದರೆ, ಇಡೀ ಸಮ್ಮೇಳನದಲ್ಲಿ ಉದ್ಘಾಟನೆಯಿಂದ ಸಮಾರೋಪದವರೆಗೆ ಯಾವ ಗೋಷ್ಠಿಯಲ್ಲಾದರೂ ಭಾಗವಹಿಸಬಹುದು. ಆದರೆ ರಾಜ್ಯದ ಮುಖ್ಯಮಂತ್ರಿಗಳಾಗಿ, ವಿರೋಧಪಕ್ಷದ ನಾಯಕರಾಗಿ, ರಾಜಕಾರಣಿಗಳಾಗಿ ಅವರು ಸಮ್ಮೇಳನಗಳ ಸಮಾರೋಪ ಕಾರ್ಯಕ್ರಮದಲ್ಲಿ ಭಾಗವಹಿಸುವುದು ಒಳಿತು. ಸಾಧ್ಯವಾದರೆ, ಸಾಧ್ಯವಾದಷ್ಟು ತಾವು ಅಥವಾ ತಮ್ಮ ಪ್ರತಿನಿಧಿಗಳು ಸಮ್ಮೇಳನದ ಆರಂಭದಿಂದ ನಡೆವ ಚಟುವಟಿಕೆಗಳನ್ನು, ಅಲ್ಲಿನ ಚರ್ಚೆಗಳನ್ನು ಗಮನಿಸಿ, ಸಮಾರೋಪ ಸಮಾರಂಭದಲ್ಲಿ ಸಮ್ಮೇಳನದ ನಿರ್ಣಯಗಳ ಕುರಿತು, ಚರ್ಚೆಗಳ ಕುರಿತು ಸರಕಾರದ ಭಾಗವಾಗಿ ತಾವು ಹೇಗೆ ಸ್ಪಂದಿಸಬಹುದು ಎಂದು ಹೇಳಿದರೆ ಅದು ಅರ್ಥಪೂರ್ಣ ಭಾಗವಹಿಸುವಿಕೆಯಾಗುತ್ತದೆ. ಮುಖ್ಯಮಂತ್ರಿಗಳು ಸಮ್ಮೇಳನವನ್ನು ಉದ್ಘಾಟಿಸುವ ಬಹುತೇಕ ಸಂದರ್ಭಗಳಲ್ಲಿ 'ವಿಳಂಬ'ವಾಗುತ್ತದೆ. ಧಾರವಾಡದಲ್ಲಿ ನಡೆದ ೮೪ನೇ ಸಮ್ಮೇಳನ ಮಧ್ಯಾಹ್ನ ಉದ್ಘಾಟನೆಯಾಗಬೇಕಾಗಿದ್ದು ಸಾಯಂಕಾಲ ನಡೆಯಿತು. ಈ ಮಧ್ಯೆ ಟ್ರ್ಯಾಫಿಕ್ ಜಾಮ್, ಈ ಜನನಾಯಕರ 'ಸೆಕ್ಯೂರಿಟಿ'ಗಾಗಿ ರಸ್ತೆಗಳು ಬಂದ್, ವಾಹನ ಬಂದ್, ಅವರು ಹೋಗುವವರೆಗೂ ಒಂದು ರೀತಿಯ ತುರ್ತು ಪರಿಸ್ಥಿತಿ. ಹಿರಿಯ ಸಾಹಿತಿಗಳೂ, ಇತರೆ ಅತಿಥಿಗಳೂ ವೇದಿಕೆಗೆ ಹೋಗಲು ಪರದಾಡಬೇಕು. ಇದು ಒಂದು ಸಮಸ್ಯೆಯಾದರೆ ಉದ್ಘಾಟನಾ ಸಮಾರಂಭದಲ್ಲಿ ಮುಖ್ಯಮಂತ್ರಿಗಳು ಹೇಳಿದ ಹೇಳಿಕೆಗಳು ಇಡೀ ಸಮ್ಮೇಳನದಲ್ಲಿ ನಡೆವ ಚರ್ಚೆಗಳಲ್ಲಿ ನೇರವಾಗಿ, ಪರೋಕ್ಷವಾಗಿ, ಪರವಾಗಿ, ವಿರೋಧವಾಗಿ ಪ್ರಸ್ತಾಪಿಸಲ್ಪಡುತ್ತವೆ. ಆಗ ವಿಷಯ ವಿಮುಖವಾಗುವ ಸಂಭವವಿರುತ್ತದೆ. ಚರ್ಚಾಗೋಷ್ಠಿಗಳು ರಾಜಕೀಯ ಪಕ್ಷಗಳ ಗೋಷ್ಠಿಗಳಾಗಿ ಪರಿವರ್ತನೆಯಾಗುತ್ತವೆ. ಇವೆಲ್ಲವನ್ನು ತಪ್ಪಿಸಲು ಸಮ್ಮೇಳನಗಳ ಉದ್ಘಾಟನೆ ಸಾಹಿತಿ, ಸಾಂಸ್ಕೃತಿಕ,

ಶೈಕ್ಷಣಿಕ ಲೋಕದ ಚಿಂತಕರು, ಭಾಷಾತಜ್ಞರು ಇಂಥವರಿಂದ ಆಗಬೇಕು. ಸಮಾರೋಪದಲ್ಲಿ ರಾಜ್ಯದ ಮುಖ್ಯಮಂತ್ರಿಗಳೂ, ವಿರೋಧ ಪಕ್ಷಗಳ ನಾಯಕರೂ ಭಾಗವಹಿಸಿ ಸಮ್ಮೇಳನದ ಆಶಯಕ್ಕೆ ಪೂರಕವಾಗಿ, ಸರಕಾರವಾಗಿ ತಮ್ಮ ಜವಾಬ್ದಾರಿಗಳನ್ನು, ಅನಿಸಿಕೆ, ಆಶಯಗಳನ್ನು ವ್ಯಕ್ತಪಡಿಸುವುದು ಸೂಕ್ತ.

'ಜಾತ್ರೆ' ಎಂದು ಇಂಥ ಸಮ್ಮೇಳನಗಳನ್ನು ಮೂದಲಿಸುವುದು ಸರಿಯಲ್ಲ. ಜಾತ್ರೆ ನಮ್ಮ ಜನಪದರ ಒಂದು ಸುಂದರ ಸಾಂಸ್ಕೃತಿಕ ಬದುಕಿನ ಭಾಗ. ಜಾತ್ರೆಗಳು ದೇವರ ಹೆಸರಲ್ಲಿ ನಡೆದರೂ ಒಂದು 'ಜಾತ್ರೆ' ಹಲವಾರು ಚಟುವಟಿಕೆಗಳ ಸಂಗಮ. ಕಾಲ್ನಡಿಗೆ, ಬಂಡಿ, ವಿವಿಧ ವಾಹನಗಳ ಮೂಲಕ ಜಾತ್ರೆಗೆ ಹೋಗುವ ಲಕ್ಷಾಂತರ ಜನ, ಸರತಿ ಸಾಲಿನಲ್ಲಿ ದೇಗುಲಗಳ ಮುಂದೆ ನಿಂತು ಗರ್ಭಗುಡಿಯಲ್ಲಿರುವ ತಮ್ಮ ಆರಾಧ್ಯ ದೈವವನ್ನು ವೀಕ್ಷಿಸುವುದು ಕೇವಲ ಅರ್ಧ ನಿಮಿಷ, ಹೆಚ್ಚೆಂದರೆ ಒಂದು ನಿಮಿಷ, ಅಷ್ಟೆ. (ಅಲ್ಲಿಯೂ ಕೆಲವರು ಝೀರೋ ಟ್ರಾಫಿಕ್ ಮಾಡಿಕೊಂಡು ಹೋಗುವವರಿರುತ್ತಾರೆ, ಬಿಡಿ). ಇಂಥ ಜನಸಾಮಾನ್ಯರ ಆಸ್ತಿಕತೆಗೆ ದಕ್ಕುವುದು ಕೇವಲ ಒಂದು ನಿಮಿಷ. ಉಳಿದದ್ದೆಲ್ಲ ಅವರದು ಸಾಂಸ್ಕೃತಿಕ ಚಟುವಟಿಕೆಯೇ. ಮನುಷ್ಯನ ವ್ಯಷ್ಟಿ–ಸಮಷ್ಟಿ ಬದುಕಿನ ಒಂದು ಸಂತಸದ ಸಂದರ್ಭ ಈ ಜಾತ್ರೆ. ಹಾಗೇ ಇತ್ತೀಚಿನ ಕನ್ನಡ ಸಾಹಿತ್ಯ ಸಮ್ಮೇಳನಗಳು, ಕೇವಲ ಸಾಹಿತ್ಯ ಗೋಷ್ಠಿ, ಕವಿ ಗೋಷ್ಠಿ, ಉದ್ಘಾಟನೆ, ಸಮಾರೋಪಗಳಿಗೆ ಸೀಮಿತವಾಗದೆ ಈ ಯಾವ ಗೋಷ್ಠಿಗಳತ್ತಲೂ ಇಣುಕಿ ನೋಡದೆ ಸಾಹಿತ್ಯ ಸಮ್ಮೇಳನಕ್ಕೆ ಬಂದ ಜನ ಸಮ್ಮೇಳನದ ಆವರಣದಲ್ಲಿ ಸುತ್ತಾಡಿ ಹೋಗಿದ್ದಾರೆ, ಖುಷಿಪಟ್ಟಿದ್ದಾರೆ. ಒಂದೆಡೆ ಗೋಷ್ಠಿಗಳು ಅಲ್ಲಿಯೂ ಜನ. ಪುಸ್ತಕ ಮಳಿಗೆ ಅಲ್ಲಿಯೂ ಜನ. ದಾಸೋಹ ಕೇಂದ್ರಗಳು ಅಲ್ಲಿಯೂ ಜನ ಹೀಗೆ ಒಂದು ಸಾಹಿತ್ಯ ಸಮ್ಮೇಳನ ಸಾಹಿತಿಗಳನ್ನೂ, ಓದುಗರನ್ನೂ, ಸಾಮಾನ್ಯ ಸಾಹಿತ್ಯಾಸಕ್ತರನ್ನೂ, ಕನ್ನಡ ಭಾಷೆ, ನಾಡು–ನುಡಿಯ ಅಭಿಮಾನಿಗಳನ್ನೂ ಕುತೂಹಲಿಗರನ್ನೂ, ಒಟ್ಟಾರೆ ಸಾಹಿತ್ಯ, ಸಾಂಸ್ಕೃತಿಕ ಶೈಕ್ಷಣಿಕ ಲೋಕದ ಒಳಗಿನವರನ್ನೂ, ಅಂಚಿನವರನ್ನೂ, ಹಿತೈಷಿಗಳನ್ನೂ ಒಳಗೊಂಡು ಒಂದು ಜಾತ್ರೆ ಆಗುವುದು ಒಳ್ಳೆಯದೇ ಅಲ್ಲವೇ? ಎಲ್ಲ ಧರ್ಮ, ಜಾತಿ ಮಠ ಮಂದಿರಗಳಿಗೆ ಕೋಟಿ ಕೋಟಿ ದುಡ್ಡು ಕೊಡುವ ಸರಕಾರ ಇದಕ್ಕೂ ಕೊಡಬಾರದೇಕೆ? ಹಣ ಕೊಡುವುದು, ಇಂಥ ಸಾಂಸ್ಕೃತಿಕ ಲೋಕದ ಜಾತ್ರೆಗೆ ಬೆಂಬಲಿಸುವುದು ಸರಕಾರದ ಕರ್ತವ್ಯ ಮತ್ತು ಜವಾಬ್ದಾರಿ. ಅದೇ ಸಂದರ್ಭದಲ್ಲಿ ಸಮ್ಮೇಳನದಲ್ಲಿ ಮೂಗು ತೂರಿಸುವಿಕೆಯನ್ನು ತನ್ನ ಹಕ್ಕಾಗಿ ಪರಿಗಣಿಸಬಾರದು.

ಸರಕಾರದ, ಆಡಳಿತ ವ್ಯವಸ್ಥೆಯ, ಸಾರ್ವಜನಿಕರ ಹಣ, ಸಹಕಾರ ಪಡೆದ ಪರಿಷತ್ತು ಮತ್ತು ಸಮ್ಮೇಳನ ಸಂಘಟಕರು ಕೇವಲ ಸಾಹಿತ್ಯಾಗೋಷ್ಠಿಗಳನ್ನು ನಡೆಸಿ, ಊಟ, ವಸತಿ, ವ್ಯವಸ್ಥಿತವಾಗಿ ನಡೆಸಿ ಸಮ್ಮೇಳನ ಯಶಸ್ವಿಯಾಯಿತೆಂದು ಬೀಗದೆ ಸಾಹಿತಿಗಳು, ರಾಜಕಾರಣಿಗಳು, ಅತಿಥಿಗಳಲ್ಲದೇ ಇತ್ತೀಚೆಗೆ ಲಕ್ಷಾಂತರ ಜನ, ಜಾತ್ರೆಗೆ ಬಂದಂತೆ ಬರುವ ಜನ ತಮ್ಮ ಪಾಡಿಗೆ ತಾವು ಬಂದು, ತಮ್ಮ ಪಾಡಿಗೆ ಸುತ್ತಾಡಿ ಹೋಗುವಂತಾಗಬಾರದು. ಈ ಲಕ್ಷಾಂತರ ಜನರೂ ಒಂದಲ್ಲಾ ಒಂದು ರೀತಿಯಲ್ಲಿ, ಮುಖಾಮುಖಿಯಾಗಿ ಸಮ್ಮೇಳನದ ಸಂದೇಶ ಹೊತ್ತು ಹೋಗಬೇಕು. ಆ ರೀತಿಯ ಕಾರ್ಯಕ್ರಮಗಳನ್ನು ರೂಪಿಸುವ ದಿಶೆಯಲ್ಲಿ ಯೋಚಿಸಬೇಕಿದೆ. ಜನರು ಸಾಹಿತ್ಯ, ಸಂಸ್ಕೃತಿ, ಚಿಂತನೆಗಳಂಥ ಗಂಭೀರ ವಿಷಯಗಳಿಂದ ವಿಮುಖರಾಗಿದ್ದಾರೆ ಎಂದು ಆರೋಪಿಸುತ್ತ ಕೂರುವುದರಿಂದ ಪ್ರಯೋಜನವಿಲ್ಲ. ಸಮ್ಮೇಳನ ಸಂದರ್ಭಕ್ಕೆ ಬಂದ ಜನ ಬರುವಾಗ ಇದ್ದಂತೆ ಹೋಗುವಾಗ ಇರಬಾರದು. ನಾಡು, ನುಡಿ, ಸಾಹಿತ್ಯ, ಸಂಸ್ಕೃತಿ, ದೇಶ–ಭಾಷೆ, ಬದುಕು, ವಿಶ್ವ–ಸಮಾಜ ಇಂಥ ವಿಷಯಗಳ ಕುರಿತು ಹೊಸ ಸಂದೇಶ ಹೊತ್ತು ಹೋಗಬೇಕು. ಜಾತ್ರೆಯಿಂದ ಸಂತೃಪ್ತನಾಗಿ ಮತ್ತೆ ತನ್ನ ದಿನ ನಿತ್ಯದ ಬದುಕಿನೆಡೆಗೆ ಹೊಸ ಸ್ಫೂರ್ತಿಯಿಂದ ಹೋಗುವ ಭಕ್ತನ ಹಾಗೆ. ಸಾಹಿತ್ಯ ಸಮ್ಮೇಳನಗಳಿಗೆ ಬರುವ ಲಕ್ಷಾಂತರ ಜನರ ಕೇವಲ ವೀಕ್ಷಕರಾಗಬಾರದು. ಅವರಲ್ಲಿಯೂ ಒಂದು ಸಾಂಸ್ಕೃತಿಕ ಹಸಿವಿದೆ. ಅವರನ್ನೂ ಅವರ ನೆಲೆಯಿಂದಲೇ ಹೇಗೆ ಒಳಗೊಳ್ಳಬೇಕೆಂಬ ಚಿಂತನೆ ಇಂದು ಬೇಕಾಗಿದೆ.

## ಮುಟ್ಟಿನ ರಾಜಕೀಯ

**ಇಂದು** ಹೆಣ್ಣಿನ 'ಮುಟ್ಟು' ಸಾರ್ವಜನಿಕ ಚರ್ಚೆಯ ವಿಷಯವಾಗಿದೆ. ಮೂರು ವರ್ಷಗಳ ಹಿಂದೆ ೨೦೧೫ರ ನವೆಂಬರ್‌ನಲ್ಲಿ ದೇವಾಲಯದ ಆವರಣದೊಳಗೆ 'ಮುಟ್ಟು ಪತ್ತೆ' ಮಾಡುವ ಯಂತ್ರವನ್ನು ಸ್ಥಾಪಿಸಿದ ದಿನ ಎಲ್ಲ ಹೆಂಗಸರನ್ನು ದೇವಾಲಯ ಪ್ರವೇಶಕ್ಕೆ ಅನುಮತಿಸಬಹುದು ಎಂಬ ಬೇಜವಾಬ್ದಾರಿ ಮಾತುಗಳನ್ನು ಟ್ರಾವಂಕೂರ್ ದೇವಸ್ವಮ್ ಬೋರ್ಡಿನ ಅಧ್ಯಕ್ಷ ನುಡಿದಾಗಲೇ ಮುಟ್ಟನ್ನು ಕುರಿತ ಚಳುವಳಿ ಆರಂಭಗೊಂಡಿತ್ತು. ಹೆಣ್ಣನ್ನು ಅಪಮಾನಗೊಳಿಸುವ ದೇವಸ್ವಮ್ ಬೋರ್ಡಿನ ಅಧ್ಯಕ್ಷನ ಮಾತುಗಳನ್ನು ಪ್ರತಿಭಟಿಸಿ ಅಂದೇ ಪಂಜಾಬಿನ ಪಾಟಿಯಾಲದ ಕಾಲೇಜು ವಿದ್ಯಾರ್ಥಿನಿ ನಿಖಿತಾ ಆಜಾದ್ "ಯುವಧ್ವನಿ" ಎನ್ನುವ ಜಾಲತಾಣದ ಮೂಲಕ ದೇವಸ್ಥಾನದ ವರಿಷ್ಠರಿಗೆ ಬಹಿರಂಗ ಪತ್ರ ಬರೆದು "ಮುಟ್ಟಾಗಲು ನಾವು ಹರ್ಷಿಸುತ್ತೇವೆ" ಎಂಬ ಸಹಿ ಚಳುವಳಿಯನ್ನು ಆರಂಭಿಸಿದ್ದು ಈಗ ಇತಿಹಾಸವಾಗಿದೆ.

"ನನಗೆ ಶಬರಿ ಮಲೆ ದೇವಸ್ಥಾನದೊಳಗೆ ಹೆಣ್ಣು ಮಕ್ಕಳಿಗೆ ಪ್ರವೇಶ ಕೊಡಿಸಬೇಕೆಂಬುದು ಮುಖ್ಯವಲ್ಲ. ಆದರೆ ಮುಟ್ಟಿನ ಕಾರಣಕ್ಕಾಗಿ ಮಹಿಳೆಯರ ವಿರುದ್ಧದ ತಾರತಮ್ಯ ಪದ್ಧತಿಯನ್ನು ಆಚರಿಸುವುದನ್ನು ಕೊನೆಗಾಣಿಸಬೇಕು




ತಿಂಗಳ ಪತ್ರಿಕೆ
**ಹೊಸತು**
ನೆಮ್ಮದಿಯ ನಾಳೆ ನಮ್ಮದು
ನವಕರ್ನಾಟಕ ಪ್ರಕಾಶನ





■ **ಚಂದಾ ವಿವರಗಳು**

| | |
|---|---|
| **ಬಿಡಿ ಸಂಚಿಕೆ** | ₹ ೨೫/- |
| **ವಾರ್ಷಿಕ ಚಂದಾ** | ₹ ೩೦೦/- |
| **ಮೂರು ವರ್ಷಕ್ಕೆ** | ₹ ೬೦೦/- |

■ **ನವಕರ್ನಾಟಕ ಶಾಖೆಗಳು**

ಕೆಂಪೇಗೌಡ ರಸ್ತೆ
ಬೆಂಗಳೂರು – ೫೬೦ ೦೦೯
✆ : ೦೮೦–೨೨೨೦೩೧೦೬

ಕೆ. ಎಸ್. ಆರ್. ರಸ್ತೆ
ಮಂಗಳೂರು – ೫೭೫ ೦೦೧
✆ : ೦೮೨೪–೨೪೪೧೦೧೬

ಶರಾವತಿ ಕಟ್ಟಡ, ಬಲ್ಮಠ
ಮಂಗಳೂರು – ೫೭೫ ೦೦೧
✆ : ೦೮೨೪–೨೪೨೫೧೬೧

ರಾಮಸ್ವಾಮಿ ವೃತ್ತ
ಮೈಸೂರು – ೫೭೦ ೦೨೪
✆ : ೦೮೨೧–೨೪೨೪೯೪೪

ಸ್ಟೇಷನ್ ರಸ್ತೆ
ಕಲಬುರಗಿ – ೫೮೫ ೧೦೨
✆ : ೦೮೪೭೨–೨೨೪೩೦೨

ಮತ್ತು ಈ ದೇಶಾದ್ಯಂತ ಇರುವ ಎಲ್ಲ ಹೆಣ್ಣು ಮಕ್ಕಳಿಗೂ ಮುಟ್ಟಿನ ಸಂದರ್ಭದಲ್ಲಿ ಸರ್ಕಾರದಿಂದ ಆರೋಗ್ಯ ರಕ್ಷಣೆಯ ಸೌಲಭ್ಯಗಳು ದೊರಕುವಂತೆ ಮಾಡುವುದೇ ನನ್ನ ಕ್ರಿಯೆಯ ಹಿಂದಿನ ಉದ್ದೇಶ" ಎನ್ನುವ ವಿದ್ಯಾರ್ಥಿ ಚಳುವಳಿಯಲ್ಲಿ ಸಕ್ರಿಯವಾಗಿದ್ದ ನಿಖಿತಾ ಆಜಾದ್ ಮತ್ತು ಅವಳ ಸ್ನೇಹಿತೆ ಸುಖಜಿತ್ ಸಿಂಗ್ ಅವರ ಜಂಟಿ ಪ್ರಯತ್ನದ ಫಲವಾಗಿ ಈ ಪ್ರಕರಣ ಪ್ರಸಿದ್ಧ ಪತ್ರಕರ್ತೆ ಇಂದಿರಾ ಜೈಸಿಂಗ್ ಅವರಿಂದ ಉಚ್ಚ ನ್ಯಾಯಾಲಯದ ಮೆಟ್ಟಿಲು ಹತ್ತಿತು. "ದೇವಸ್ಥಾನಕ್ಕೆ ಮಹಿಳೆಯರ ಪ್ರವೇಶವನ್ನು ನಿಷೇಧಿಸುವುದು ಅವರ ಹೆಣ್ಣುತನವನ್ನೇ ನಿರಾಕರಿಸಿದಂತೆ. ಇದು ಆಳುವ ಕಾನೂನಿನ ಮೇಲೆ ಹೊರಿಸಿದ ಕಳಂಕ" ಎನ್ನುವ ಇಂದಿರಾ ಜೈಸಿಂಗ್ ಈ ಮೊಕದ್ದಮೆಯನ್ನು ಕೈಗೆತ್ತಿಕೊಂಡರು.

"ವೈಯಕ್ತಿಕವಾದದ್ದು ರಾಜಕೀಯವೇ" ಎಂದು ತಮ್ಮ ಚಳುವಳಿಯ ಅಜೆಂಡಾ ರೂಪಿಸಿಕೊಂಡು ಮಹಿಳೆಯರು ಹೋರಾಟಕ್ಕೆ ಬೀದಿಗಿಳಿದು ಹಲವಾರು ದಶಕಗಳೇ ಕಳೆದಿವೆ. ಹೆಣ್ಣಿನ ಜೈವಿಕ ಸಹಜವಾದ 'ಮುಟ್ಟ'ನ್ನು ಕುರಿತಂತೆ ಶಬರಿಮಲೆ ದೇವಸ್ಥಾನದ ಟ್ರಾವಂಕೂರ್ ದೇವಸ್ವಮ್ ಬೋರ್ಡಿನ ಅಧ್ಯಕ್ಷರ ಹಾಗೂ ಅಲ್ಲಿನ ಪೂಜಾರಿಗಳ  ಮಾತು ಮತ್ತು ವರ್ತನೆಗಳು ಹಾಗೂ ಅದಕ್ಕೆ ತಾಳ ಹಾಕುತ್ತಿರುವ, ಹಿನ್ನೆಲೆ ವಾದ್ಯ ನುಡಿಸುತ್ತಿರುವ ಭಾಜಪ ಮತ್ತು ರಾಷ್ಟ್ರೀಯ ಸ್ವಯಂ ಸೇವಾಸಂಘದ ಸದಸ್ಯಕೋಟಿಯ ಕ್ರಿಯೆಗಳು ಇಂದು ಪರಿಸ್ಥಿತಿಯನ್ನು ಹದಗೆಡಿಸುತ್ತಿವೆ. ಶಬರಿಮಲೆ ದೇವಸ್ಥಾನಕ್ಕೆ ಮಹಿಳೆಯರ ಪ್ರವೇಶ ಕುರಿತಂತೆ ಉಚ್ಚ ನ್ಯಾಯಾಲಯ ನೀಡಿದ ತೀರ್ಪನ್ನು ಧಿಕ್ಕರಿಸಿ ಕೇರಳದ ಒಂದು ಗುಂಪಿನ ಜನರು 'ಶಬರಿಮಲೆಯನ್ನು ರಕ್ಷಿಸಿ' ಎನ್ನುವ ಚಳುವಳಿ ಮುಟ್ಟಿನ ರಾಜಕಾರಣದ ಒಂದು ಮುಖವನ್ನು ಪ್ರದರ್ಶಿಸುತ್ತಿದ್ದರೆ, ಆ ತೀರ್ಪನ್ನು ಸ್ವಾಗತಿಸಿ, ತಮ್ಮ ಸಾಂವಿಧಾನಿಕ ಹಕ್ಕನ್ನು ಸ್ಥಾಪಿಸಹೊರಟ ಕನಕದುರ್ಗ ಮತ್ತು ಬಿಂದು ಅಮ್ಮಿನಿಯವರು ದೇವಾಲಯ ಪ್ರವೇಶಿಸಿದ್ದು ಮಹಿಳಾ ಹೋರಾಟದ ಚರಿತ್ರೆಯಲ್ಲಿ ಮೈಲಿಗಲ್ಲಾಗಲಿದೆ.

ಈ ದೇಶದಲ್ಲಿ 'ಅಸ್ಪೃಶ್ಯತೆ'ಯೆನ್ನುವುದು ಅತ್ಯಂತ ದೊಡ್ಡ ಹುಣ್ಣು. ಬೇರಾವ ದೇಶದಲ್ಲೂ ಕಾಣಸಿಗದ ವಿಚಿತ್ರ ಸಮಸ್ಯೆ. ಮಾನವ ಸಮಾನತೆಯನ್ನು ಸಾರುವ ಸಂವಿಧಾನ ನಮಗೆ ಬಂದು ೬೮ ವರ್ಷಗಳೇ ಸಂದರೂ 'ಅಸ್ಪೃಶ್ಯತೆ'ಯನ್ನು ಸಮಸ್ಯೆಯಾಗಿ ಕಾಣದೇ ಸಹಜ ಸ್ಥಿತಿಯಾಗಿಯೇ ಕಾಣುವ ಮನೋಭಾವ ಇಂದಿಗೂ ಉಳಿದಿರುವುದು ದುರಂತವೇ ಸರಿ. ಜಾತಿ ಅಸ್ಪೃಶ್ಯತೆಗೆ ಒಳಗಾಗಿ ನರಳುತ್ತಿರುವ ಈ ದೇಶದ ಅಸಂಖ್ಯ ಶ್ರಮಜೀವಿಗಳ ಜೊತೆ ಲಿಂಗ ಅಸ್ಪೃಶ್ಯತೆಗೆ ಒಳಗಾಗಿರುವ ಹೆಣ್ಣಿನ ಮೂಲಭೂತ ಅಸ್ತಿತ್ವಕ್ಕೆ ಪೆಟ್ಟುಕೊಡುತ್ತಿರುವ ಚಿಂತನೆಗಳು ಇಂದಿನ ಆಧುನಿಕ ಜಗತ್ತಿನಲ್ಲೂ ಗಾಬರಿ ಹುಟ್ಟಿಸುತ್ತಿವೆ. ಶತಮಾನಗಳಿಂದಲೂ ಸಮಾಜದಲ್ಲಿ ಹೆಣ್ಣಿನ ದೇಹದ ಬಗ್ಗೆ ಇರುವ ವಿಸ್ಮಯ, ಕೌತುಕ, ಹೆದರಿಕೆ, ಅಪನಂಬಿಕೆಗಳು ಕಡಿಮೆಯಾಗೇ ಇಲ್ಲ. ಇಂದು ವಿಜ್ಞಾನ ಎಷ್ಟೇ ಮುಂದುವರೆದಿದ್ದರೂ, ಹೆಣ್ಣಿನ ದೇಹದ ಬಗ್ಗೆ ಇರುವ ಮಡಿ ಮೈಲಿಗೆಯ ಪರಿಕಲ್ಪನೆಗಳನ್ನು ಗಟ್ಟಿ ಮಾಡುತ್ತಿರುವ ಬ್ರಾಹ್ಮಣಶಾಹಿಯ ಗಂಡಾಳ್ತನದ ಕಬಂಧ ಬಾಹುಗಳು ಹೆಣ್ಣಿನ ಉಸಿರು ಹಿಂಡುತ್ತಿವೆ.

"ಮುಟ್ಟಾದ ಹೊಲೆಯೊಳಗೆ। ಹುಟ್ಟಿಹುದು ಜಗವೆಲ್ಲ। ಮುಟ್ಟಬೇಡೆಂದು ತೊಲಗುವ ಹಾರುವನು। ಹುಟ್ಟಿದನು ಎಲ್ಲಿ? ಸರ್ವಜ್ಞ" ಎಂದು ಮುಟ್ಟನ್ನು ನೆಪಮಾಡಿಕೊಂಡು ಬ್ರಾಹ್ಮಣಶಾಹಿಗೆ ನೇರವಾಗಿ ಪ್ರಶ್ನಿಸುತ್ತಿರುವ ಪ್ರಗತಿಪರರ ಮಾತುಗಳು ಈ ಶಬರಿಮಲೆ ಪ್ರಕರಣದಲ್ಲಿ ತುಂಬಾ ಮುಖ್ಯವಾಗುತ್ತದೆ. ಮೂಲದಲ್ಲಿ ಮಲೆ ಕುಡಿಯರ ದೇವರಾಗಿದ್ದ ಶಬರಿಮಲೆಯ ಅಯ್ಯಪ್ಪನನ್ನು ಬ್ರಾಹ್ಮಣಶಾಹಿ ಶಕ್ತಿಗಳು ತಮ್ಮ ಕಬ್ಜದೊಳಗೆ ತೆಗೆದುಕೊಂಡು ಹೆಣ್ಣಿಗೆ ದೇವಾಲಯ ಪ್ರವೇಶ ನಿಷೇಧ ಹೇರುತ್ತಿರುವುದು ಇತ್ತೀಚಿನ ಬೆಳವಣಿಗೆಯಾಗಿದೆ. ಆದ್ದರಿಂದ ಹೆಣ್ಣಿನ ಮುಟ್ಟನ್ನು ನೆಪ ಮಾಡುತ್ತಾ ಅವಳಿಗೆ ಪ್ರವೇಶ ನಿರಾಕರಿಸಿ ಅಲಿಖಿತ ಕಾನೂನಿನ ಮೂಲಕ ಸಂಪ್ರದಾಯದ ಹೆಸರಲ್ಲಿ ಇಡೀ ಹೆಣ್ಣುಕುಲಕ್ಕೆ ಅಪಮಾನ ಮಾಡುತ್ತಿರುವುದು ಅಮಾನವೀಯ ನಡೆಯಾಗಿದೆ.

"ಮುಟ್ಟು ಕಂಡವಳನ್ನು ಮುಟ್ಟಲೊಲ್ಲರು,
ಮುಟ್ಟು ತಾ ತಡೆದು ಬಂದ ದೇಹವನ್ನು ಮುಟ್ಟುತಿಹರೇಕೆ ಸರ್ವಜ್ಞ"

ಎಂದ ನಮ್ಮ ಪುರಾತನರ ಮಾತುಗಳು ಅರ್ಥವಾಗದ ಸ್ಥಿತಿಯಲ್ಲಿ ಇಂದಿನ 'ಮತ ರಾಜಕಾರಣ' ನಡೆದಿದೆ. ಭಾಜಪ ಮತ್ತು ಕಾಂಗ್ರೆಸ್ ಪಕ್ಷಗಳು ಸುಪ್ರೀಂ ಕೋರ್ಟಿನ ತೀರ್ಪನ್ನು ವಿರೋಧಿಸುತ್ತಿರುವುದು ಇಡೀ ಸ್ತ್ರೀ ಕುಲಕ್ಕೆ ಮಾಡಿದ ಅವಮಾನವಷ್ಟೇ ಅಲ್ಲ, ನ್ಯಾಯಾಂಗ ನಿಂದನೆಯ ಘೋರ ಅಪರಾಧವೂ ಆಗಿದೆ. ಆದ್ದರಿಂದಲೇ 'ಮತ ರಾಜಕಾರಣ'ಕ್ಕೆ ಹೆಣ್ಣಿನ ಮುಟ್ಟು ಕೇವಲ ಒಂದು ನೆಪವಾಗಿದೆ.

ಹೊಸ ವರ್ಷದ ಉದಯದ ದಿನದಂದು 'ನವೋದನಮೂಲ್ಯ ಸಂರಕ್ಷಣ ಸಮಿತಿ'ಯ ಬ್ಯಾನರ್‌ನಡಿ ಕೇರಳದ ಎಲ್ಲ ವಯಸ್ಸಿನ, ವಿವಿಧ ಜಾತಿ, ಧರ್ಮ, ವರ್ಗಗಳಿಗೆ ಸೇರಿದ ಮಿಲಿಯನ್ನುಗಟ್ಟಳೆ ಹೆಣ್ಣುಮಕ್ಕಳು ೬೨೦ ಕಿಲೋ ಮೀಟರುಗಳ ಉದ್ದಕ್ಕೆ ನಿಂತು ಐಕ್ಯತೆಯ ಗೋಡೆಯನ್ನು ನಿರ್ಮಿಸಿ ತಮ್ಮ ಐಕ್ಯತೆಯನ್ನು ಪ್ರದರ್ಶಿಸಿದ್ದು ಅಭೂತಪೂರ್ವವಾದುದು. ಕೇರಳದ ನೆಲದಲ್ಲಿ ಹುಟ್ಟಿದ ಲಿಂಗ ಸಮಾನತೆ, ಜಾತ್ಯತೀತತೆ ಮತ್ತು ಸಮಾಜ ಸುಧಾರಣೆಯ ಮೌಲ್ಯಗಳನ್ನು ಎತ್ತಿ ಹಿಡಿಯುವ ಸಂಕಲ್ಪ ಕೈಗೊಂಡ ಈ ಪ್ರದರ್ಶನ ಇಡೀ ದೇಶಕ್ಕೆ ಮಾದರಿಯಾಗಿದೆ; 'ಮುಟ್ಟಿನ ರಾಜಕೀಯ'ಕ್ಕೆ ಕೊಟ್ಟ ಬಲವಾದ ಪೆಟ್ಟಾಗಿದೆ. ಸಮಾನತೆಗಾಗಿ ಮಹಿಳೆಯರು ನಡೆಸುವ ಹೋರಾಟ ದೇಶದ ಪ್ರಜಾಪ್ರಭುತ್ವಕ್ಕಾಗಿ ನಡೆಸುವ ಹೋರಾಟದೊಂದಿಗೆ ಗಟ್ಟಿಯಾಗಿ ಬೆಸೆದುಕೊಂಡಿದೆ. ಹಾಗಾಗಿ 'ಮುಟ್ಟ'ನ್ನು ಸುತ್ತುವರಿದಿರುವ ಬ್ರಾಹ್ಮಣ ಪುರುಷಶಾಹಿಯ ವಿರುದ್ಧ ನಡೆಸಿರುವ ಹೋರಾಟ ದೇಶದ ಪ್ರಜಾಪ್ರಭುತ್ವವನ್ನು ಸಂರಕ್ಷಿಸುವ ಹೋರಾಟವೂ ಆಗಿದೆ.

ಗಾಯತ್ರಿ. ಎನ್.

## ಶ್ರೀ ಶಿವಕುಮಾರ ಸ್ವಾಮೀಜಿಗಳಿಗೆ ನಮನ



ಪತ್ರಿಕೆ ಪ್ರಕಟನೆಗೆ ಹೋಗುವ ಕೊನೆಯ ಕ್ಷಣದಲ್ಲಿ ತುಮಕೂರಿನ ಮಾನ್ಯ ಶ್ರೀ ಸಿದ್ಧಗಂಗಾ ಶಿವಕುಮಾರ ಸ್ವಾಮೀಜಿಯವರು ನಿಧನರಾದ ಶೋಕವಾರ್ತೆ ಬಂದಿದೆ.

ಶತಾಯುಷಿಗಳಾಗಿದ್ದ ಶ್ರೀ ಶಿವಕುಮಾರ ಸ್ವಾಮೀಜಿಯವರು ಅನ್ನ ದಾಸೋಹ ಮತ್ತು ಅಕ್ಷರ ದಾಸೋಹದಿಂದ ಲಕ್ಷಾಂತರ ಬಡ ವಿದ್ಯಾರ್ಥಿಗಳಿಗೆ ಬದುಕು ಒದಗಿಸಿ ಕೊಟ್ಟವರು. ತಮ್ಮ ಕೊನೆಯುಸಿರಿನವರೆಗೂ ಇಂತಹ ಸಾಮಾಜಿಕ ಕಾರ್ಯದಲ್ಲಿ ಒಂದು ಮಠವನ್ನು, ಧಾರ್ಮಿಕ ಸಂಸ್ಥೆಯನ್ನು ತೊಡಗಿಸಿ ಸ್ವತಃ ತಾವೇ ಒಂದು ಮಾದರಿಯಾಗಿ ಮತ್ತು ದೇಶದ ಧಾರ್ಮಿಕ ವ್ಯವಸ್ಥೆಗೆ ಒಂದು ಮಾದರಿಯನ್ನು ಕೊಟ್ಟು ನಿರ್ಗಮಿಸಿದ್ದಾರೆ. ಒಂದು ಸರಕಾರ ಮಾಡಬಹುದಾದದ್ದಕ್ಕಿಂತಲೂ ಹೆಚ್ಚಾಗಿ ಮತ್ತು ಸರಕಾರಕ್ಕೆ ಮಾದರಿಯಾಗುವ ರೀತಿಯಲ್ಲಿ ಬಡಮಕ್ಕಳಿಗೆ ಶೈಕ್ಷಣಿಕ ವ್ಯವಸ್ಥೆಯನ್ನು ಒದಗಿಸಿದ ಕೀರ್ತಿ ಶ್ರೀ ಶಿವಕುಮಾರ ಸ್ವಾಮೀಜಿಯವರಿಗೆ ಸಲ್ಲುತ್ತದೆ.

ಅಕ್ಷರ ದಾಸೋಹದಂತಹ ಯೋಜನೆಗೆ ಸ್ಫೂರ್ತಿಯಾದ ಸ್ವಾಮೀಜಿಯವರ ಪರಿಕಲ್ಪನೆ ಸಮಾಜಮುಖಿಯಾದದ್ದು. ಜಾತಿ-ಧರ್ಮ, ಲಿಂಗಭೇದಗಳನ್ನು ಮೀರಿ ಎಲ್ಲ ಬಡಮಕ್ಕಳಿಗೆ ಅನ್ನ, ಅಕ್ಷರ ಕೊಟ್ಟ ಅವರ ಸೇವೆ ಸ್ಮರಣೀಯವಾದದ್ದು. ಇಂತಹ ಮಹಾನ್ ಚೇತನದ ನಿಧನಕ್ಕೆ 'ಹೊಸತು' ಮತ್ತು 'ನವಕರ್ನಾಟಕ'ದ ಬಳಗ ಅಂತಿಮ ನಮನಗಳನ್ನು ಸಲ್ಲಿಸಿ ಅವರ ಸೇವೆಯನ್ನು ಸ್ಮರಿಸುತ್ತದೆ.

– *ಸಂ.*

*(ಈ ತಿಂಗಳು ೩ನೇ ಪುಟದಿಂದ)*

ಆತುರಾತುರವಾಗಿ ತಂದಿರುವ ಶೇ. ೧೦ರಷ್ಟು ಮೀಸಲಾತಿ ಮಸೂದೆ, ಮೇಲ್ವರ್ಗದ ಜಾತಿಗಳಿಗೆ. ಈಗ ಅದು ಕಾನೂನಾಗಿಬಿಟ್ಟಿದೆ. ಆರ್ಥಿಕವಾಗಿ ಹಿಂದುಳಿದ ವರಿಗಾಗಿ ಮೀಸಲಾತಿ ಎಂದು ಹೇಳಿ ವಾರ್ಷಿಕ ಆದಾಯ ಮಿತಿಯನ್ನು ಎಂಟು ಲಕ್ಷ ರೂ.ಗಳು ಎಂಬುದಾಗಿ ನಿಗದಿ ಮಾಡಿದೆ. ಅಂದರೆ ದಿನಕ್ಕೆ ೨೨೦೦ ರೂ.ಗಳ ಆದಾಯ ಎಂದು ಬರಹಗಾರ ಬರಗೂರು ರಾಮಚಂದ್ರಪ್ಪ ಲೆಕ್ಕ ಹಾಕಿದ್ದಾರೆ. ಅಂಥ ಆದಾಯ ಇರುವವರು ಎಷ್ಟು ಮಂದಿ? ಎರಡೂ ಸದನಗಳಲ್ಲಿ ಈ ಮಸೂದೆ ಅಂಗೀಕಾರವಾಗಿ ರಾಷ್ಟ್ರಪತಿಗಳ ಅಂಕಿತವಾಗಿ ಕಾನೂನೇನೋ ಆಗಿಬಿಟ್ಟಿದೆ. ಆದರೆ ಇದನ್ನು ನ್ಯಾಯಾಲಯ ಎತ್ತಿ ಹಿಡಿದೀತೆ ಎಂಬುದೇ ಸಂಶಯ. ಸಂವಿಧಾನಕ್ಕೆ ಮಾಡಿರುವ ಈ ತಿದ್ದುಪಡಿ ಈಗಾಗಲೇ ನ್ಯಾಯಾಲಯದ ಮೆಟ್ಟಿಲೇರಿದೆ. ಇದು ಪ್ರಾಯಶಃ ಮೋದಿ–ಷಾ ಜೋಡಿಗೆ ತಿಳಿದಿರಲೇಬೇಕು. ಶೇ. ೫೦ಕ್ಕೆ ಮೀರಲಾಗದು ಎಂದು ಸುಪ್ರೀಂ ಕೋರ್ಟು ತಾಕೀತು ಮಾಡಿದೆ. ಕೆಲವು ರಾಜ್ಯಗಳು ನಡೆಸಿದ ಪ್ರಯತ್ನಗಳು ಈ ಮೊದಲೇ ನಿರರ್ಥಕವಾಗಿವೆ. ನ್ಯಾಯಾಂಗದ ಮೇಲೆ ಗೂಬೆ ಕೂರಿಸಿ ಮತ ಗಳಿಸುವ ತಂತ್ರವೇ ಈ ಹೊಸ ಮೀಸಲಾತಿ ಯೋಜನೆ. ಪಟೇಲರು, ಜಾಟರು ಮುಂತಾದವರನ್ನು ಒಲಿಸಿಕೊಳ್ಳುವುದೇ ತಂತ್ರ.

✶ ✶ ✶

ಭಾರತೀಯ ರಿಸರ್ವ್ ಬ್ಯಾಂಕಿನ ಸ್ವಾಯತ್ತತೆಗೆ ಬೆಂಕಿ ಹಾಕಿದ್ದಾಯಿತು. ಸರಕಾರಕ್ಕೆ ಅನುಕೂಲ ವಾಗಿರುವ ನಿವೃತ್ತ ಅಧಿಕಾರಿಯನ್ನು ಗವರ್ನರ್ ಆಗಿ ನೇಮಿಸಲಾಯಿತು. ಈಗ ಸರದಿ ಸಿಬಿಐ. ಒಂದೊಂದಾಗಿ ಸ್ವಾಯತ್ತ ಸಂವಿಧಾನಾತ್ಮಕ ಸಂಸ್ಥೆ ಗಳನ್ನು ಧ್ವಂಸ ಮಾಡಲಾಗುತ್ತಿದೆ. ಸಿಬಿಐ ಅಧಿಕಾರಿ ಗಳನ್ನು ಖಾಯಂ ರಜೆಯ ಮೇಲೆ ಕಳಿಸುವ ಸರಕಾರದ ನಿರ್ಧಾರವನ್ನು ಸುಪ್ರೀಂ ಕೋರ್ಟು ತಿರಸ್ಕರಿಸಿದೆ. ಸಿಬಿಐ ನಿರ್ದೇಶಕ ಅಲೋಕ್ ವರ್ಮಾ ಮತ್ತು ವಿಶೇಷ ನಿರ್ದೇಶಕ ರಾಕೇಶ್ ಆಸ್ಥಾನ ಇವರುಗಳ ಕಚ್ಚಾಟದ ಲಾಭ ಪಡೆದುಕೊಂಡು ಮೋದಿ ಸರಕಾರ ಸಿಬಿಐನ ಸ್ವಾಯತ್ತತೆಯನ್ನೇ ನಿರ್ನಾಮ ಮಾಡಲು ಸಂಚು ರೂಪಿಸಿತು. ನಿರ್ದೇಶಕ ಅಲೋಕ್ ವರ್ಮಾರ ಪದಚ್ಯುತಿಯನ್ನು ಸುಪ್ರೀಂ ಕೋರ್ಟು ರದ್ದುಗೊಳಿಸಿದೆ. ನಿರ್ದೇಶಕ ಸ್ಥಾನಕ್ಕೆ ನಾಗೇಶ್ವರ ರಾವ್ ನೇಮಕವನ್ನು ಅಕ್ರಮವೆಂದು ಸಾರಿ ವರ್ಮಾರನ್ನು ಪುನರ್ನೇಮಕ ಮಾಡಿತು. ವರ್ಮಾ ಅಧಿಕಾರ ವಹಿಸಿಕೊಂಡ ೪೮ ಗಂಟೆಗಳಲ್ಲಿಯೇ ಸರಕಾರ ಅವರನ್ನು ತೆಗೆದುಹಾಕಿತು. ಇದು ನೇಮಕಾತಿ ಸಮಿತಿಯ ತೀರ್ಮಾನ ಎಂದು ಪ್ರಕಟಿಸಿತು. ಈ ಬಗೆಯಲ್ಲಿ ಸಿಬಿಐನ ಸ್ವಾಯತ್ತತೆ ಸಂಪೂರ್ಣವಾಗಿ ಧ್ವಂಸಗೊಂಡಿದೆ. ಸರ್ವೋಚ್ಚ ನ್ಯಾಯಾಲಯದ ತೀರ್ಪುಗಳಿಗೆ ಸರಕಾರ ಯಾವ ರೀತಿ ಪ್ರತಿಕ್ರಿಯಿಸುತ್ತದೆ ಎನ್ನುವುದಕ್ಕೆ ಈ ಪ್ರಕರಣ ಒಂದು ನಿದರ್ಶನ. ಮೋದಿ ಅಧಿಕಾರ ವಹಿಸಿಕೊಂಡ ಮೇಲೆ ಸರ್ವೋಚ್ಚ ನ್ಯಾಯಾಲಯದ ಮೇಲೂ ಅಧಿಕಾರ ಚಲಾಯಿಸಲು ನೋಡಿದ್ದರು.

✶ ✶ ✶

ಜವಾಹರ್ ಲಾಲ್ ವಿಶ್ವವಿದ್ಯಾನಿಲಯದ ವಿದ್ಯಾರ್ಥಿಗಳ ಸಂಘವನ್ನು ಸಂಪೂರ್ಣವಾಗಿ ಹಾಳು ಮಾಡಲಾಗಿದೆ. ವಿದ್ಯಾರ್ಥಿ ಪರಿಷತ್ ಪುಂಡರು ಮೂರು ವರ್ಷಗಳ ಹಿಂದೆ ನಡೆಸಿದ ಪುಂಡಾಟಿಕೆ ಈಗಲೂ ನೆನಪಿನಲ್ಲಿದೆ. ವಿದ್ಯಾರ್ಥಿ ಫೆಡರೇಶನ್ನಿನ ನಾಯಕ ಕನ್ಹಯ್ಯ ಕುಮಾರ್, ಉಮರ್ ಖಲೀದ್ ಮೊದಲಾದವರ ಮೇಲೆ ಮೋದಿ ಸರಕಾರ ದೇಶದ್ರೋಹದ ಆಪಾದನೆ ಹೊರಿಸಿತ್ತು. ಪಾಕಿಸ್ತಾನದ ಪರ ಘೋಷಣೆ ಹಾಕಿದರು, ಪಾಕಿಸ್ತಾನದ ಧ್ವಜ ಹಾರಿಸಿದರು ಎಂಬುದೇ ಆಪಾದನೆ. ಭಾಜಪ ಸರಕಾರದ ಧೋರಣೆಗಳನ್ನು ವಿರೋಧಿಸುವವ ರೆಲ್ಲರಿಗೂ ದೇಶದ್ರೋಹಿಗಳ ಹಣೆಪಟ್ಟಿ ಶತಸ್ಸಿದ್ಧ. ೨೦೧೪ರಿಂದ ಅದನ್ನು ಕಾಣುತ್ತ ಬಂದಿದ್ದೇವೆ. ಲೇಖಕರು, ಕಲಾವಿದರು, ಬುದ್ಧಿಜೀವಿಗಳು ಇಂಥದೇ ಆಪಾದನೆಗಳನ್ನು ಎದುರಿಸುತ್ತಿದ್ದಾರೆ. ಮೂರು ವರ್ಷಗಳಾದ ಮೇಲೆ ಜೆಎನ್‌ಯು ವಿದ್ಯಾರ್ಥಿಗಳಾದ ಕನ್ಹಯ್ಯ ಕುಮಾರ್ ಮತ್ತಿತರರ ಮೇಲೆ ಎಫ್.ಐ.ಆರ್. ದಾಖಲಾಗಿದೆ. ಇದು ರಾಜಕೀಯ ಪ್ರೇರಿತ ಎಂದು ಕನ್ಹಯ್ಯ ಕುಮಾರ್ ಬಣ್ಣಿಸಿದ್ದಾರೆ. ೨೦೧೬ರಲ್ಲಿ ಪ್ರಕರಣ ದಾಖಲಾಗಿತ್ತು. ಮೂರು ವರ್ಷಗಳು ತನಿಖೆ ನಡೆಸಿದ ನಂತರ ೨೦೧೯ರಲ್ಲಿ ಚಾರ್ಜ್‌ಷೀಟ್ ದಾಖಲಾಗಿದೆ. ಲೋಕಸಭಾ ಚುನಾವಣೆಗಳಲ್ಲಿ ಕನ್ಹಯ್ಯ ಕುಮಾರ್ ಅಭ್ಯರ್ಥಿಯಾಗುವ ನಿರೀಕ್ಷೆ ಇತ್ತು. ಅದನ್ನು ಗಮನಿಸಿಯೇ ಕೇಂದ್ರ ಸರಕಾರ ಈಗ ದೇಶದ್ರೋಹದ ಮೊಕದ್ದಮೆ ಹೂಡಲು ಹವಣಿಸಿದೆ. ಅದು ನ್ಯಾಯಾಲಯದಲ್ಲಿ ಏಳುತ್ತೋ ಬೀಳುತ್ತೋ ಗೊತ್ತಿಲ್ಲ. ಬ್ರಿಟಿಷರ ಕಾಲದಲ್ಲಿ ಇಂಥ ಆಪಾದನೆಗಳನ್ನು ಸ್ವಾತಂತ್ರ್ಯ ಹೋರಾಟಗಾರರ ಮೇಲೆ ಹೊರಿಸ ಲಾಗುತ್ತಿತ್ತು. ಸ್ವಾತಂತ್ರ್ಯಾನಂತರದ ಕಾಲದಲ್ಲಿಯೂ ಇದು ಮುಂದುವರಿಯುತ್ತಿರುವುದೀಗ ಖಂಡನೀಯ.

✶ ✶ ✶

ಉತ್ತರ ಪ್ರದೇಶದಲ್ಲಿ ಕಾನೂನು ಸುವ್ಯವಸ್ಥೆ ಕಿಂಚಿತ್ತೂ ಇಲ್ಲ. ಮೋದಿ ಶಿಷ್ಯ ಯೋಗಿ ಆದಿತ್ಯನಾಥ ಮುಖ್ಯಮಂತ್ರಿಯಾಗಿ ಅಧಿಕಾರಕ್ಕೇರಿದ ನಂತರ ದುಂಡಾವೃತ್ತಿಗೆ ಪ್ರಾಮುಖ್ಯತೆ. ಅಯೋಧ್ಯೆಯಲ್ಲಿ ರಾಮ ಮಂದಿರ ಕಟ್ಟಿಯೇ ತೀರುವುದಾಗಿ ಪಣತೊಟ್ಟಿರುವ ಭಾಜಪ ಗೋರಕ್ಷಣೆಯ ಹೆಸರಿನಲ್ಲಿ ಹಲ್ಲೆ ನಡೆಸುತ್ತಿದೆ. ಯೋಗಿ ಸರಕಾರ ಉಪ ಚುನಾವಣೆಗಳಲ್ಲಿ ಮಣ್ಣು ಮುಕ್ಕಿ ಯದ್ವಾ ತದ್ವಾ ಮುಸ್ಲಿಮರ ಮೇಲೆ ದೌರ್ಜನ್ಯ ಎಸಗುತ್ತಿದೆ. ಕಾನೂನು ಸುವ್ಯವಸ್ಥೆ ಹದಗೆಟ್ಟಿದ್ದು ಗೂಂಡಾಗಿರಿಗೇ ಪ್ರಾಧಾನ್ಯ ದೊರೆತಿದೆ. ಪೊಲೀಸರಿಗೆ ದಬ್ಬಾಳಿಕೆ ನಡೆಸಲು ಹುಕುಂ ನೀಡಿರುವಂತಿದೆ. ಒಂದು ಕೋಮನ್ನು ಗುರಿಯಾಗಿಸಿಕೊಂಡು ಮನಸ್ಸಿಗೆ ಬಂದಂತೆ ಪೊಲೀಸರು 'ಎನ್‌ಕೌಂಟರ್' ನಡೆಸು ತ್ತಿದ್ದಾರೆ. 'ಎನ್‌ಕೌಂಟರ್' ಎನ್ನುವುದು ಈಗ ಎಲ್ಲರಿಗೂ ಪರಿಚಿತ, ಭಯೋತ್ಪಾದಕ ಎಂದು ಹೆಸರಿಸಿ ಗುಂಡು ಹಾರಿಸಿ ಕೊಲೆಗೈಯ್ಯುವುದು ದೇಶದಲ್ಲಿ ಮಾಮೂಲಾಗಿ ಬಿಟ್ಟಿದೆ. ಕಾಶ್ಮೀರದಲ್ಲಂತೂ ಎನ್‌ಕೌಂಟರ್ ಎನ್ನುವುದು ದಿನ ನಿತ್ಯದ ಸುದ್ದಿಯಾಗಿಬಿಟ್ಟಿದೆ. ಯೋಗಿ ಆದಿತ್ಯನಾಥ್ ಸರಕಾರ ಅಧಿಕಾರ ವಹಿಸಿಕೊಂಡ ಮೇಲೆ ೧,೧೦೦ ಪೊಲೀಸ್ ಎನ್‌ಕೌಂಟರ್‌ಗಳು ನಡೆದಿವೆ ಉತ್ತರ ಪ್ರದೇಶದಲ್ಲಿ. ಸುಪ್ರೀಂ ಕೋರ್ಟು ಇದು ಗಂಭೀರವಾದ ವಿಷಯ ಎಂದು ಪರಿಗಣಿಸಿದೆ. ಸರಕಾರಿಯೇತರ ಸಂಘಟನೆ ಗಳು ಹಾಗೂ ನಾಗರಿಕ ಹಕ್ಕುಗಳನ್ನು ಎತ್ತಿಹಿಡಿಯಲು ಸ್ಥಾಪನೆಗೊಂಡಿರುವ ಜನತಾ ಸಂಘಟನೆ (ಪಿಯುಸಿಎಲ್) ಎನ್‌ಕೌಂಟರ್ ಹತ್ಯೆಗಳನ್ನು ಕುರಿತು ಸಲ್ಲಿಸಿರುವ ಮೊಕದ್ದಮೆಯ ಸಂದರ್ಭದಲ್ಲಿ ಸರಕಾರಕ್ಕೆ ನೋಟೀಸ್ ಜಾರಿ ಮಾಡಿದೆ. ೧–೧–೨೦೧೭ರಿಂದ ೩೧–೩–೨೦೧೮ರ ಕಾಲಾವಧಿಯಲ್ಲಿ ಎನ್‌ಕೌಂಟರ್‌ಗೆ ಬಲಿಯಾಗಿರುವವರ ಸಂಖ್ಯೆ ೪೫ ಎಂದು ಸರಕಾರ ವರದಿ ಮಾಡಿದೆ. ಈ ಪ್ರಕರಣಗಳೆಲ್ಲ ಈಗ ಮ್ಯಾಜಿಸ್ಟ್ರೇಟರಿಂದ ತನಿಖೆಗೆ ಒಳಪಟ್ಟಿವೆ. ಎನ್‌ಕೌಂಟರ್ ವಿಚಾರದಲ್ಲಿ ಉತ್ತರ ಪ್ರದೇಶ ಸರಕಾರ ದಾಖಲೆ ನಿರ್ಮಿಸುತ್ತಿದೆ.

✶ ✶ ✶

ಮಾಧ್ಯಮಗಳ ವರದಿ ಪ್ರಕಾರ ಕರ್ನಾಟಕದ 'ದೋಸ್ತಿ ಸರಕಾರ' ಯಾವ ಕ್ಷಣದಲ್ಲಾದರೂ ಪತನ ಗೊಳ್ಳುವುದು. ಈಚೆಗೆ ಜರುಗಿದ ಸಂಪುಟ ವಿಸ್ತರಣೆ, ನಿಗಮ ಮಂಡಳಿಗಳ ನೇಮಕಾತಿ ಕಾಂಗ್ರೆಸ್–ಜೆಡಿಎಸ್ ಸಮ್ಮಿಶ್ರ ಸರಕಾರದ ಬುಡವನ್ನೇ ಅಲುಗಾಡಿ ಸುತ್ತಿದೆ. ಭಾಜಪವನ್ನು ದೂರ ಇರಿಸಿ ತರಾತುರಿಯಲ್ಲಿ ಕಾಂಗ್ರೆಸ್–ಜೆಡಿಎಸ್ ಸಮ್ಮಿಶ್ರ ಸರಕಾರ ಅಸ್ತಿತ್ವಕ್ಕೆ ಬಂದ ವಿಚಾರ ನಾಡಿನ ಜನರಿಗೆ ತಿಳಿದಿದೆ. ಕನಿಷ್ಠ ಕಾರ್ಯಕ್ರಮವನ್ನು ಅಂಗೀಕರಿಸದೆ ಅಧಿಕಾರಕ್ಕೇರಿರುವ ಜಾತ್ಯತೀತ ಜನತಾದಳದ ನಾಯಕ ಕುಮಾರಸ್ವಾಮಿ ಆಕಸ್ಮಿಕವಾಗಿ ಎರಡನೇ ಸಲ ಮುಖ್ಯಮಂತ್ರಿ ಯಾಗಿದ್ದಾರೆ. ಅದರ ಪೀಕಲಾಟ ಅನುಭವಿಸುತ್ತಿದ್ದಾರೆ. ಮಾಜಿ ಮುಖ್ಯಮಂತ್ರಿ ಸಿದ್ದರಾಮಯ್ಯ ದೇವೇಗೌಡರ ಜನತಾದಳ ಗರಡಿಯಲ್ಲಿ ತಯಾರಾದವರು, ಈಗ ಸಮನ್ವಯ ಸಮಿತಿಯ ಅಧ್ಯಕ್ಷ. ಇವರು ಸಮನ್ವಯ ಸಾಧಿಸುವುದಕ್ಕೆ ಪ್ರತಿಯಾಗಿ ಕುಮಾರಸ್ವಾಮಿ ಸರಕಾರಕ್ಕೆ ಕಿರುಕುಳ ನೀಡುತ್ತಿರುವುದೇ ಜಾಸ್ತಿ. ತಮ್ಮ ಕಾಲದಲ್ಲಿ ಅನುಮೋದಿಸಿದ್ದ ಕಾರ್ಯಕ್ರಮ ಅನುಷ್ಠಾನ ಮುಖ್ಯ ಅವರಿಗೆ. ಸಂಪುಟ ರಚನೆಯಾದಾಗಲೇ ಕಾಂಗ್ರೆಸ್ಸಿನಲ್ಲಿ ಹುಟ್ಟಿಕೊಂಡ ಅತೃಪ್ತಿಯ ಹೊಗೆ ವಿಸ್ತರಣೆಯಾದ ಮೇಲೆ ದೊಡ್ಡ ಜ್ವಾಲೆಯಾಗಿ ಹರಡಿದೆ. ರೆಸಾರ್ಟ್ ರಾಜಕಾರಣ ಈ ರಾಜ್ಯಕ್ಕೆ ಹೊಸದೇನಲ್ಲ. ಒಂದು ಬಗೆಯಲ್ಲಿ ಅದರಲ್ಲೇ ಅದ್ದಿ ಮುಳುಗಿರುವ ಕಾಂಗ್ರೆಸ್ ರಾಜಕಾರಣಿಗಳಿದ್ದಾರೆ. ಉದಾಹರಣೆಗೆ ಎಚ್. ಡಿ. ಕುಮಾರಸ್ವಾಮಿ. ಇತ್ತೀಚಿನ ವರದಿಗಳ ಪ್ರಕಾರ ಪಕ್ಷೇತರರು ಎಚ್‌ಡಿಕೆಗೆ ನೀಡಿದ್ದ ಬೆಂಬಲವನ್ನು ಹಿಂದಕ್ಕೆ ಪಡೆದಿದ್ದಾರೆ. ಇದರಿಂದ ರಾಜ್ಯದಲ್ಲಿ ರಾಜಕೀಯ ಸಂಚಲನವುಂಟಾಗಿದೆ. ದೆಹಲಿಗೆ ಪ್ರಯಾಣ ಬೆಳೆಸಿದ್ದ ಭಾಜಪ ಸದಸ್ಯರುಗಳು ಮುಂಬರುವ ಲೋಕಸಭಾ ಚುನಾವಣೆಗಳ ಸಿದ್ಧತೆಗಾಗಿ ಜಮಾಯಿಸಿದ್ದರು. ಈಗ ಅವರು ರೆಸಾರ್ಟ್‌ಗಳಲ್ಲಿ ಗುರು ಗ್ರಾಮ ವಾಸಿಗಳಾಗಿದ್ದಾರೆ. ಯಡಿಯೂರಪ್ಪ ಕಂಪೆನಿಯು ಕಾಂಗ್ರೆಸ್– ಜೆಡಿಎಸ್‌ನ ಅತೃಪ್ತರನ್ನು ಎಳೆದುಕೊಳ್ಳಲು ಹದ್ದಿನಂತೆ

ಹೊಂಚುಹಾಕುತ್ತಿದೆ. ಉತ್ತರ ಕರ್ನಾಟಕದ ಶಾಸಕರನ್ನು ಭ್ರಷ್ಟರಾಗಿಸಲು ಬಲೆ ಬೀಸಿದ್ದಾರೆ. ಆದರೆ ಇವೆಲ್ಲ ಪ್ರಯತ್ನಗಳೂ ವಿಫಲವಾಗುವುದು ಖಚಿತ. ಅಭಿವೃದ್ಧಿ ಕಾರ್ಯಗಳಲ್ಲಿ ತೊಡಗಿಕೊಳ್ಳುವುದಕ್ಕೆ ಪ್ರತಿಯಾಗಿ ಸಮ್ಮಿಶ್ರ ಸರಕಾರವನ್ನು ಉಳಿಸಿ ಕೊಳ್ಳುವುದೇ ಹರ ಸಾಹಸವಾಗಿ ಪರಿಣಮಿಸುತ್ತಿದೆ. ಲೋಕಸಭಾ ಚುನಾವಣೆಗಳಲ್ಲಿ ದೋಸ್ತಿಗಳು ಯಾವ ರೀತಿ ಹಂಚಿಕೆ ಮಾಡಿಕೊಳ್ಳುತ್ತಾರೆ ಎನ್ನುವುದರ ಮೇಲೆ ಮುಂದಿನ ಭವಿಷ್ಯ ಅವಲಂಬಿಸಿದೆ. ಅಲ್ಲಿಯವರೆಗೂ ಉಳಿಯುತ್ತೆ ಸರಕಾರ.

✶ ✶ ✶

ಈಗಾಗಲೆ ಎಲ್ಲರಿಗೂ ತಿಳಿದಿರುವಂತೆ ಭೀಮಾ–ಕೋರೆಗಾಂವ್ ಒಂದು ರೀತಿಯ ಮಹಾನ್ ನೆನಪಿನ ದ್ಯೋತಕವಾಗಿರುವ ಸ್ಥಳ, ಪುಣೆಯ ಬಳಿಯ ಚಿಕ್ಕ ಊರು. ಮಹಾರರು ಅಧಿಕ ಸಂಖ್ಯೆಯಲ್ಲಿದ್ದ ಸೇನೆಯು ಅಲ್ಲಿ ಶತಮಾನಕ್ಕೂ ಹಿಂದೆ ವಸಾಹತುಶಾಹಿ ಬ್ರಿಟಿಷರ ಪರವಾಗಿ ನಿಂತು 'ಉಚ್ಚ' ವರ್ಣದ ಪೇಶ್ವೆಗಳ ಸೈನ್ಯವನ್ನು ಮಣಿಸಿತ್ತು. ಅದಾದ ಕೆಲವು ದಶಕಗಳ ತರುವಾಯದಲ್ಲಿ ಮಹಾರರನ್ನು ಹೆಚ್ಚು ಸಂಖ್ಯೆಯಲ್ಲಿ ಸೈನ್ಯಕ್ಕೆ ಭರ್ತಿ ಮಾಡಿಕೊಳ್ಳುವುದನ್ನು ಬ್ರಿಟಿಷರು ನಿಲ್ಲಿಸಿದರು. ಆದರೆ ಮಹಾರ್ ರೆಜಿಮೆಂಟ್ ಎಂಬುದು ಪ್ರಸಿದ್ಧಗೊಂಡಿತು. ಮಹಾರರು ಮತ್ತು ಇತರೆ ದಲಿತ ವರ್ಗದ ಮಂದಿ ಪ್ರತಿವರ್ಷ ಭೀಮಾ–ಕೋರೆಗಾಂವ್‌ನಲ್ಲಿ ಸಂಭ್ರಮದ ದಿನವನ್ನು ಆಚರಿಸುತ್ತಾರೆ. ಅದು ಜನವರಿ ಮೊದಲ ವಾರದಲ್ಲಿ ಜರುಗುತ್ತದೆ. ಈಚಿನ ವರ್ಷಗಳಲ್ಲಿ ದಲಿತೇತರರೂ ಅದರಲ್ಲಿ ಭಾಗಿಗಳಾಗುತ್ತಾ ಬಂದಿದ್ದಾರೆ. ದಲಿತರ ಸಂಭ್ರಮವನ್ನು ಸಹಿಸದವರು ಎರಡು ಕಾರಣಗಳನ್ನು ಮುಂದಿಡುತ್ತಾರೆ: (ಅ) ಅದು ಬ್ರಿಟಿಷರ ಪರವಾದ ಮತ್ತು ಉಚ್ಚ ವರ್ಣದವರ ವಿರುದ್ಧದ ಆಚರಣೆ, ಮತ್ತು (ಆ) ಲಕ್ಷಗಟ್ಟಲೆ ಜನ ಅಲ್ಲಿ ಸೇರಲು ಮುಂಬೈ ಮುಂತಾದ ನಗರಗಳಿಂದ ರೈಲುಗಳಲ್ಲಿ ಪ್ರಯಾಣ ಮಾಡುತ್ತಾರಾದ್ದರಿಂದ ಬೇರೆ ಪ್ರಯಾಣಿಕರಿಗೆ ವಿನಾಕಾರಣ ತೊಂದರೆಯಾಗುತ್ತದೆ. ಅಲಹಾಬಾದ್‌ನಲ್ಲಿ ನಡೆಯುವ ಕುಂಭಮೇಳದಲ್ಲಿ ಭಾಗವಹಿಸಲು ಲಕ್ಷಾಂತರ ಮಂದಿ ಪ್ರಯಾಣಿಸುತ್ತಾರೆ. ಅವರಲ್ಲಿ ಟಿಕೆಟ್ ಖರೀದಿಸದವರ ಸಂಖ್ಯೆಯೂ ಸಾಕಷ್ಟಿರುತ್ತದೆ. ಜನರು ಅದನ್ನೇಕೆ ವಿರೋಧಿಸುವುದಿಲ್ಲವೆಂಬ ಪ್ರಶ್ನೆ ಎತ್ತಿದ್ದೇ ಇಲ್ಲ. ಕಳೆದ ವರ್ಷ ಭೀಮಾ–ಕೋರೆಗಾಂವ್ ಸಂಭ್ರಮಾಚರಣೆಯಲ್ಲಿ ಕೆಲವು ಘರ್ಷಣೆಗಳಾದವು, ಅದಕ್ಕೆ ಕಾರಣರಾದವರು ಇಂದಿನ ಆಳುವ ಪಕ್ಷದ ಕಾರ್ಯಕರ್ತರೆಂದು ತಿಳಿದುಬಂದಿದೆ. "ಉಗ್ರವಾದ ಪ್ರಚೋದನಕಾರಿ ಭಾಷಣಗಳನ್ನು ಸಂಭ್ರಮದಲ್ಲಿ ಪಾಲ್ಗೊಂಡ ಕೆಲವು ದಲಿತ ಮುಖಂಡರು ಮಾಡಿದ್ದರಿಂದ ಸನ್ನಿವೇಶವು ಬಿಗಡಾಯಿಸಿತು" ಎಂದ ಸರ್ಕಾರವು ಹಲವು ನಾಯಕರ ಮೇಲೆ ಆರೋಪ ಗಳನ್ನು ಹೊರಿಸಿದ್ದು ಈಗ ಇತಿಹಾಸ. ದಲಿತರ ಅಸ್ಮಿತೆ ಮತ್ತು ಆಕಾಂಕ್ಷೆಗಳ ಅಭಿವ್ಯಕ್ತಿಯನ್ನು ಭಾಜಪ ಸರ್ಕಾರವು "ಉಗ್ರ"ವೆಂದು ನಾಮಕರಣ ಮಾಡಿದಂತೆ ಆಗಿದೆ. ಈ ಹಿನ್ನೆಲೆಯಲ್ಲಿ ೨೦೧೯ರ ಸಂಭ್ರಮಾಚರಣೆ ಏರ್ಪಟ್ಟಿತ್ತು. ಎಂದಿನಂತೆ ಈ ವರ್ಷವೂ ಲಕ್ಷಗಟ್ಟಲೆ ಜನರು ಭಾಗವಹಿಸಿದ್ದರು. ಆದರೆ ಮಹಾರಾಷ್ಟ್ರ ಸರ್ಕಾರವು 'ಕಬೀರ್ ಮಂಚ್' ಸಂಘಟನೆಯವರು ಭೀಮಾ–ಕೋರೆಗಾಂವ್‌ಗೆ ಪ್ರವೇಶಿಸುವಂತಿಲ್ಲವೆಂದು ಈ ವರ್ಷ ಆಜ್ಞೆ ಹೊರಡಿಸಿತು. ಜಿಜ್ಞೇಶ್ ಮೇವಾನಿ ಮುಂತಾದ ದಲಿತ ನಾಯಕರನ್ನು ಸಹ ಪ್ರತಿಬಂಧಿಸಿತು. ಸಾವಿರಾರು ಮಂದಿ ಪೊಲೀಸರನ್ನು ನೇಮಿಸಿ ಇಡೀ ಸಂಭ್ರಮವನ್ನು ಪೊಲೀಸ್ ಉಸ್ತುವಾರಿಯಲ್ಲಿ ನಡೆಯುವಂತೆ ನಿಯಂತ್ರಣವನ್ನು ಹೇರಿತು. ಇದು ನಾಗರಿಕರ ಪ್ರಾಥಮಿಕ ಹಕ್ಕನ್ನು ದಮನ ಮಾಡಿದ್ದಕ್ಕೆ ಒಂದು ಹೇಸಿಗೆಯ ನಿದರ್ಶನವಾಯಿತು. "ಕಬೀರ್ ಮಂಚ್" ಕಾರ್ಯಕರ್ತರನ್ನು ಸರ್ಕಾರವು "ನಕ್ಸಲರು" ಎಂದು ಪ್ರಚಾರ ಮಾಡಿ ಮಹಾರಾಷ್ಟ್ರ ಸರ್ಕಾರವು ಭಾರತೀಯ ಜನತಾ ಪಕ್ಷದ ಬೆಂಬಲಿಗರಾದ ಅಠಾವಲೆಯನ್ನು ಪ್ರಮುಖ ದಲಿತ ನಾಯಕನೆಂದು ಬಿಂಬಿಸಿತು. ಪೊಲೀಸರ ದಂಡು ಆ ನಾಯಕನನ್ನು ಪುರಸ್ಕರಿಸಿದ್ದು ವಿಚಿತ್ರ ಬಗೆಯದಾಗಿತ್ತು. ಶ್ರೀ. ಪ್ರಕಾಶ ಅಂಬೇಡ್ಕರ್ ಅವರು ಖಾಸಗಿಯಾಗಿ ಸಂಭ್ರಮದಲ್ಲಿ ಪಾಲ್ಗೊಂಡರು. ಒಟ್ಟಿನಲ್ಲಿ ಮಹಾರಾಷ್ಟ್ರ ಸರ್ಕಾರವು ಭೀಮಾ–ಕೋರೆಗಾಂವ್ ಸಂಭ್ರಮವನ್ನು ತನ್ನ ರಾಜಕೀಯ ಉದ್ದೇಶಕ್ಕೆ ತಕ್ಕಂತೆ ಬಳಸಿಕೊಂಡು ಕಬೀರ್ ಮಂಚ್‌ದಂತಹ ದಲಿತ ಸಂಘಟನೆಗಳನ್ನು ದೂರವಿಟ್ಟಿತು. ಪುಣೆ ಬಳಿಯ ಲೋನಾವ್ಲಾದಿಂದ ಶ್ರೀ ದೇವು ಟೆಂಬೆಯವರ ನೇತೃತ್ವದಲ್ಲಿ ಸಹಸ್ರಾರು ದಲಿತರು ಭೀಮಾ–ಕೋರೆಗಾಂವ್‌ಗೆ ಹೋಗಿಬಂದರು. ಮಾನ್ಯ ಟೆಂಬೆಯವರನ್ನು 'ಹೊಸತು' ಪ್ರತಿನಿಧಿ ಯೊಬ್ಬರು ಮಾತನಾಡಿಸಿದಾಗ ಅವರು ತಮ್ಮ ಅಸಮಾಧಾನವನ್ನು ತೋಡಿಕೊಂಡು "ಭೀಮಾ–ಕೋರೆಗಾಂವ್ ಸಂಭ್ರಮವು ಪೊಲೀಸ್ ನಿಯಂತ್ರಿತ ಆಚರಣೆಯಾಗಿಹೋಯಿತು, ಇಂತಹ ಆಚರಣೆ ನಮಗೆ ಬೇಕಿಲ್ಲ" ಎಂದು ಸಿಡಿದರು. ಪುಣೆಯಿಂದ ಭೀಮಾ–ಕೋರೆಗಾಂವ್‌ವರೆಗೆ ಉದ್ದಕ್ಕೂ ಪೊಲೀಸರು ದಲಿತ ಸಮುದಾಯದವರನ್ನು ತಪಾಸಣೆ ಮಾಡುತ್ತಿದ್ದದ್ದು ಮತ್ತು ಇಂಥದೇ ಮಾರ್ಗದಲ್ಲಿ ಹೀಗೇ ನಡೆದುಕೊಂಡು ಹೋಗಬೇಕೆಂದು ನಿಯಂತ್ರಿಸುತ್ತಿದ್ದದ್ದು ಉತ್ಸವದ ವಾತಾವರಣವನ್ನು ಹಾಳುಗೆಡವಿತೆಂದು ಕೆಲವು ಪತ್ರಿಕೆಗಳೂ ವರದಿ ಮಾಡಿದುವು. ಜನವರಿ ೧೧ರಂದು ಸರ್ವೋಚ್ಚ ನ್ಯಾಯಾಲಯದ ನಿವೃತ್ತ ನ್ಯಾಯಾಧೀಶ ಶ್ರೀ ಪಿ. ಬಿ. ಸಾವಂತ್ ಮತ್ತಿತರ ದಲಿತ ಗಣ್ಯರು ಪುಣೆಯಲ್ಲಿ ಸಭೆ ಸೇರಿ ಈ ವರ್ಷ ಭೀಮಾ–ಕೋರೆಗಾಂವ್‌ನ ಸಂಭ್ರಮವನ್ನು ಒಂದು ರೀತಿ ದಲಿತರಿಗೆ ಕಳಂಕ ತರುವ ರೀತಿಯಲ್ಲಿ ಆಯೋಜಿಸಿದ ಮಹಾರಾಷ್ಟ್ರ ಸರ್ಕಾರವನ್ನು ತೀವ್ರವಾಗಿ ಟೀಕಿಸಿ, ಬರುವ ವರ್ಷಗಳಲ್ಲಿ ಹೀಗೆ ಅಪಮಾನಕರ ಪ್ರಸಂಗಗಳು ಜರುಗ ಕೂಡದೆಂದು ಆಗ್ರಹಿಸಿದರು. ದಲಿತರ ಸ್ವಾಭಿಮಾನಕ್ಕೆ ಇಷ್ಟು ಧಕ್ಕೆಯುಂಟುಮಾಡುತ್ತಿರುವ ಅಮಿತ್ ಶಾ – ನರೇಂದ್ರ ಮೋದಿ ಪಕ್ಷಕ್ಕೆ ಬೆಂಬಲಿಗರಾಗಿ ಪಾಸ್ವಾನ್, ಅಠಾವಲೆ ನಿಂತು ಮಂತ್ರಿ ಪದವಿಗಳ ಸುಖ ಅನುಭವಿ ಸುತ್ತಿರುವುದು ದಲಿತ–ವಿರೋಧಿ ನಡೆಯೇ ಸರಿ. ಈಗ ಡಾ॥ ಆನಂದ ತೇಲ್‌ತುಂಬ್ಡೆ ಅವರನ್ನು ಸುಳ್ಳು ಆರೋಪಗಳ ಆಧಾರದ ಮೇಲೆ ದಸ್ತಗಿರಿ ಮಾಡುವ ಯೋಜನೆಗೆ ಸೊಪ್ಪು ಹಾಕಲಾಗುತ್ತಿದೆ. ಅದು ಸರ್ವಥಾ ಖಂಡನೀಯ. ಅವರ ಮೇಲಿನ ನಿಜವಾದ ಆರೋಪವೆಂದರೆ ಅವರು ಮೋದಿ ಸರ್ಕಾರದ ಕೆಲವು ಪ್ರಕ್ರಿಯೆಗಳನ್ನು ಪ್ರಶ್ನಿಸುತ್ತಿದ್ದಾರೆ ಎಂಬುದು, ಅಷ್ಟೆ.

✶ ✶ ✶

ರಫೇಲ್ ಹಗರಣದಲ್ಲಿ ಏನೂ ಹುಳುಕಿಲ್ಲ ವೆಂಬಂತೆ ಸರ್ವೋಚ್ಚ ನ್ಯಾಯಾಲಯವು ತೀರ್ಪು ಕೊಟ್ಟಿದೆಯೆಂದು ಸಚಿವರಾದ ಅರುಣ್ ಜೇಟ್ಲಿ ಮತ್ತು ಭಾಜಪ ಅಧ್ಯಕ್ಷ ಅಮಿತ್ ಶಾ ಹೇಳುತ್ತಿದ್ದಾರೆ. ಮುಚ್ಚಿದ ಲಕೋಟೆಯಲ್ಲಿ ಕೇಂದ್ರ ಸರ್ಕಾರವು ಏನು ಬರೆದು ಕೊಟ್ಟಿದ್ದಿತೆಂದು ಸರ್ವೋಚ್ಚ ನ್ಯಾಯಾಲಯವು ತಿಳಿಸಿಲ್ಲ. ಎಷ್ಟು ಹಣ ಕೊಡಬೇಕೆಂದು ಡಸೋಲ್ ಕಂಪನಿ ಜೊತೆ ಒಪ್ಪಂದ ಮಾಡಿಕೊಂಡಿದ್ದರೆ ಅದು ದೇಶಕ್ಕೆ ತಿಳಿದರೆ ಅಪಾಯವೇನಿದ್ದೀತು? ಇದೇ ಜನವರಿ ೧೮ರಂದು 'ದಿ ಹಿಂದು' ಪತ್ರಿಕೆಯಲ್ಲಿ ಎನ್. ರಾಮ್ ಅವರು ಸುದೀರ್ಘ ವಿಶ್ಲೇಷಣಾ ಲೇಖನವನ್ನು ಪ್ರಕಟಿಸಿ ಕೇಂದ್ರ ಸರ್ಕಾರವು ಸಾರ್ವಜನಿಕರಿಗೆ ತಿಳಿಸಿಲ್ಲದ ಅನೇಕ ಸಂಗತಿಗಳನ್ನು ಆಧಾರಸಹಿತವಾಗಿ ಬಹಿರಂಗ ಗೊಳಿಸಿದ್ದಾರೆ. ಈ ಹಗರಣದಲ್ಲಿ ಯಾರು ಎಷ್ಟು ಹಣ ನುಂಗಿದರೆಂಬುದು ತಿಳಿದಿಲ್ಲ ಮತ್ತು ಅದೇ ಮುಖ್ಯ ವಿಷಯವೂ ಅಲ್ಲ. ಆದರೆ ಮೊದಲು ನಿಗದಿಯಾಗಿದ್ದ ಮೊತ್ತಕ್ಕಿಂತಲೂ ಶೇ. ೪೧ರಷ್ಟು ಹೆಚ್ಚು ಹಣ ನೀಡುತ್ತಿ ರುವುದು ಮತ್ತು ಎಚ್.ಎ.ಎಲ್.ನ ಭಾಗವಹಿಸುವಿಕೆಗೆ ಅಡ್ಡಗಾಲು ಹಾಕಿರುವುದು ಇಂದಿನ ಕೇಂದ್ರ ಸರ್ಕಾರದ ಘೋರಕೃತ್ಯವೆಂಬುದನ್ನು ರಾಮ್ ಅಧಿಕೃತ ದಾಖಲೆ ಗಳ ಸಮೇತ ದೇಶದ ಜನತೆಯ ಮುಂದೆ ಇರಿಸಿದ್ದಾರೆ. ಇನ್ನೂ ಎಷ್ಟೋ ವಿವರಗಳನ್ನವರು ಪ್ರಕಟಿಸಿಲ್ಲ. ರಫೇಲ್ ಸಂಬಂಧ ನಮ್ಮ ದೇಶದಲ್ಲಿ ಜರುಗಿರುವ ಅಕ್ರಮಗಳನ್ನು ಸಾರ್ವಜನಿಕರು ತಿಳಿದುಕೊಳ್ಳುವ ಅವಶ್ಯಕತೆ ಇದೆ. ಶ್ರೀ ಎನ್. ರಾಮ್ ಅವರ ಲೇಖನವು ಅದಕ್ಕೆ ಅತ್ಯಂತ ಉಪಯುಕ್ತ.

✶ ✶ ✶

ರಾಷ್ಟ್ರೀಯ ಶಿಕ್ಷಣ ನೀತಿಯು ಪ್ರಕಟವಾಗಿದೆ ಎಂಬ ಸಮಾಚಾರ ಬಂದಿದೆ. ಅದನ್ನು ಸಾರ್ವಜನಿಕ ಚರ್ಚೆಗೆ ಒಡ್ಡುವ ನಿರೀಕ್ಷೆಯೇನಿಲ್ಲ, ಏಕೆಂದರೆ ಜಾವಡೇಕರ ಮಹಾಶಯರಿಗೆ ಅದರಲ್ಲಿ ಆಸಕ್ತಿ ಇಲ್ಲ. ಶಿಕ್ಷಣವು ದೇಶಪ್ರೇಮಕ್ಕೆ ಪ್ರೇರಣೆ ನೀಡಬೇಕೆಂಬುದಷ್ಟೇ ಅವರ ನೀತಿಯಂತೆ. ಅದರ ಭಾಗವಾಗಿ ಹಿಂದಿಯನ್ನು ಒಂದನೇ ತರಗತಿಯಿಂದ ಎಂಟನೇ ತರಗತಿಯವರೆಗೆ ಎಲ್ಲ ರಾಜ್ಯಗಳಲ್ಲೂ ಕಲಿಸುವ ಆಜ್ಞೆ ಜಾರಿಗೆ ಬರಲಿದೆ ಎಂದು ಹೇಳುತ್ತಾರೆ. ಮಾನ್ಯ ಡಾ॥ ಕೆ. ಕಸ್ತೂರಿರಂಗನ್ ಅಧ್ಯಕ್ಷರಾಗಿದ್ದು ಇಂತಹ ಭಾಷಾದ್ರೋಹದ ನೀತಿಗೆ ಒಪ್ಪಿಗೆ ಕೊಟ್ಟಿರುವುದು ಖೇದನೀಯ. ಇದನ್ನು ಸರ್ವಥಾ ಅಂಗೀಕರಿಸಕೂಡದು. ಕನ್ನಡವನ್ನು ಕಲಿಯದ ಮಕ್ಕಳಿರ ಬಹುದು, ಆದರೆ ಹಿಂದಿ ಮತ್ತು ಇಂಗ್ಲಿಷ್ ಕಲಿಯಲೇ ಬೇಕೆನ್ನುವುದು ಮರ್ಯಾದೆ ಇರುವ ಯಾವ ಹಿಂದೆಯೇತರ ರಾಜ್ಯವೂ ಅಂಗೀಕರಿಸಬಾರದ ವಿಷಯ. ನೀತಿಯ ಪೂರ್ಣ ಪಾಠವು ಪ್ರಕಟವಾದ ನಂತರ ಆಮೂಲಾಗ್ರ ಚರ್ಚೆಗೆ ನಮ್ಮ ರಾಜ್ಯವು ಸಿದ್ಧವಾಗಬೇಕು. ●




**ನನಸಾದ ಕನ್ನಡದಲ್ಲಿ ವಾದದ ಕನಸು!**

✉ ಕ್ರಿ. ಶ. ೧೯೭೯ರಿಂದ ಹುನಗುಂದದಲ್ಲಿ ನ್ಯಾಯವಾದಿಯಾಗಿ ವೃತ್ತಿಯನ್ನು ಆರಂಭಿಸಿದ ಸಂದರ್ಭದಲ್ಲಿ ವೃತ್ತಿಯಲ್ಲಿ ಕನ್ನಡ ಬಳಸಲು ನಿರ್ಧರಿಸಿ ನ್ಯಾಯಾಲಯದಲ್ಲಿ ದಾಖಲಿಸುವ ಅರ್ಜಿಗಳನ್ನು ಕನ್ನಡದಲ್ಲಿ ಕೈಬರಹದಲ್ಲಿ ತಯಾರಿಸಿ ಸಲ್ಲಿಸುತ್ತಿದ್ದೆ. ನನ್ನ ಬರಹಕ್ಕೆ ಆ ಅವಧಿಯಲ್ಲಿ ನ್ಯಾಯಾಧೀಶರಾಗಿದ್ದ ಮಾನ್ಯ ಶ್ರೀ ಜೆ. ಸಿ. ನೀರಲಗಿಯವರು ನೈತಿಕ ಬೆಂಬಲ ನೀಡುತ್ತಿದ್ದರು.

ಕರ್ನಾಟಕ ಉಚ್ಚ ನ್ಯಾಯಾಲಯದಲ್ಲಿ ಕನ್ನಡದಲ್ಲಿ ವಾದವನ್ನು ಮಂಡಿಸುವ ಆಸೆ ಹೊಂದಿದ್ದೆ. ತಾಲೂಕು ಮಟ್ಟದಲ್ಲಿ ವೃತ್ತಿ ಮಾಡುತ್ತಿದ್ದ ನಾವು ನಮ್ಮ ಪ್ರಕರಣಗಳಲ್ಲಿ ಮೇಲ್ಮನವಿ ಸಲ್ಲಿಸುವ ಹಾಗೂ ಎದುರುದಾರರ ಪರವಾಗಿ ಹಾಜರಾಗಲು ಮಾನ್ಯ ಉಚ್ಚ ನ್ಯಾಯಾಲಯದಲ್ಲಿ ವೃತ್ತಿ ಮಾಡುವ ನ್ಯಾಯವಾದಿಗಳಿಗೆ ಒಪ್ಪಿಸಿ ಬರುತ್ತಿದ್ದುದರಿಂದ ವಾದ ಮಂಡಿಸಲು ಸಾಧ್ಯವಾಗುತ್ತಿರಲಿಲ್ಲ.

೧೯೮೯ರಲ್ಲಿ ಸರಕಾರಿ ಅಭಿಯೋಜಕನಾಗಿ ನೇಮಕವಾದ ನಂತರ ಮಾನ್ಯ ಕರ್ನಾಟಕ ಉಚ್ಚ ನ್ಯಾಯಾಲಯದ ನೇರ ಸಂಪರ್ಕ ತಪ್ಪಿ ಮಾನ್ಯ ನ್ಯಾಯಾಲಯದಲ್ಲಿ ಕನ್ನಡದಲ್ಲಿ ವಾದ ಮಂಡಿಸುವಾಸೆ ಕನಸಾಗಿಯೇ ಉಳಿಯಿತು.

೨೦೧೦ರಿಂದ ೨೦೧೪ರ ನವೆಂಬರ್‌ವರೆಗೆ ಚಾಮರಾಜನಗರ ಮತ್ತು ಬೆಂಗಳೂರು ತ್ವರಿತ ವಿಲೇವಾರಿ ನ್ಯಾಯಾಲಯದ ಅಭಿಯೋಜಕನಾಗಿ ಕಾರ್ಯ ನಿರ್ವಹಿಸಿ ೨೦೧೪ರ ನವೆಂಬರ್‌ನಲ್ಲಿ ನಿವೃತ್ತಿ ಹೊಂದಿದ ನಂತರ ಮಗ ಮತ್ತು ಮಗಳು ಬೆಂಗಳೂರಿನಲ್ಲಿ ನೌಕರಿ ಮಾಡುತ್ತಿದ್ದುದರಿಂದಾಗಿ ನಾನು ಬೆಂಗಳೂರಿನಲ್ಲಿ ಉಳಿಯಬೇಕಾಯಿತು.

ಇದರಿಂದಾಗಿ ಮಾನ್ಯ ಕರ್ನಾಟಕ ಉಚ್ಚ ನ್ಯಾಯಾಲಯದಲ್ಲಿ ನ್ಯಾಯವಾದಿ ವೃತ್ತಿಯನ್ನು ಮಾಡಲು ಅವಕಾಶ ದೊರೆತು ಮಾನ್ಯ ನ್ಯಾಯಾಲಯದಲ್ಲಿ ಕನ್ನಡದಲ್ಲಿ ವಾದವನ್ನು ಮಂಡಿಸುವ ಕನಸು ನನಸಾಗಬಹುದಾದ ಸಾಧ್ಯತೆ ಮನದಲ್ಲಿ ಮೂಡಿತು.

೨೦೧೫ರ ನವೆಂಬರ್ ತಿಂಗಳಲ್ಲಿ ಮಾನ್ಯ ಕರ್ನಾಟಕ ಉಚ್ಚ ನ್ಯಾಯಾಲಯದಲ್ಲಿ ಆರೋಪಿತರ ಪರವಾಗಿ ಜಾಮೀನು ಕೋರಿ ಸಲ್ಲಿಸಿದ ಅರ್ಜಿಯಲ್ಲಿ ವಾದವನ್ನು ಮಂಡಿಸುವ ಅವಕಾಶ ದೊರಕಿತು.

ಮಾನ್ಯ ನ್ಯಾಯಮೂರ್ತಿ ಶ್ರೀ ಎ. ವಿ. ಚಂದ್ರಶೇಖರರವರ ಮುಂದೆ ವಾದ ಮಂಡಿಸುವ ಸಂದರ್ಭದಲ್ಲಿ ನನ್ನ ೩೫ ವರ್ಷಗಳ ಕನಸು ನನಸಾಗುತ್ತಿರುವದನ್ನು ನೆನೆದು ಕನ್ನಡದಲ್ಲಿ ಮಾನ್ಯ ನ್ಯಾಯಾಧೀಶರ ಮುಂದೆ "ಮಾನ್ಯ ನ್ಯಾಯಮೂರ್ತಿಗಳ ಅವಗಾಹನೆಗೆ"ಯಂದು ವಾದವನ್ನು ಪ್ರಾರಂಭಿಸಿ ಪ್ರಕರಣದ ವಿವರಗಳನ್ನು ಹಾಗೂ ಜಾಮೀನು ನೀಡಲು ಇರುವ ಕಾರಣಗಳನ್ನು ತಿಳಿಸಿ ಮಾನ್ಯ ನ್ಯಾಯಾಲಯ ಜಾಮೀನು ನೀಡುವಂತೆ ಕೋರುವ ವಾದವನ್ನು ಮುಕ್ತಾಯ ಮಾಡಿದಾಗ ಬಹು ವರ್ಷಗಳ ಕನಸು ನವೆಂಬರ್ ತಿಂಗಳಿನಲ್ಲಿ ನನಸಾದ ಖುಷಿ ಮನದಲ್ಲಿ ಮೂಡಿತು.

*ಬೆಂಗಳೂರು* **ಬಸವರಾಜ ಹುಡೇದಗಡ್ಡಿ**




✉ ಎರಡು ದಶಕ ಪೂರೈಸಿ ಕನ್ನಡ ಪತ್ರಿಕೋದ್ಯಮದಲ್ಲಿ ಹೊಸ ಅಲೆ ಸೃಷ್ಟಿಸಿರುವ 'ಹೊಸತು' ಹೆಸರಿಗೆ ತಕ್ಕಂತೆ ತಿಂಗಳಿನಿಂದ ತಿಂಗಳಿಗೆ ಸದಾ ವೈಚಾರಿಕ ಲೇಖನಗಳು, ಸಮಯೋಚಿತ ಲೇಖನಗಳು, ವ್ಯಕ್ತಿಚಿತ್ರಗಳು, ಕಥೆ, ಚುಟುಕು, ಕವನ, ಇವೆಲ್ಲದರ ಮೂಲಕ ಅಕ್ಷರ ಕ್ರಾಂತಿಯನ್ನುಂಟುಮಾಡುತ್ತಾ, ತಾನೂ ಬೆಳೆದು ಓದುಗ ವರ್ಗದವರನ್ನು ಸಹಾ ಸೃಷ್ಟಿಸುತ್ತಾ ಹೋಗುತ್ತಿರುವುದು ಹೆಮ್ಮೆಯ ಸಂಗತಿ. ಈ ಬಾರಿ (ಡಿಸೆಂಬರ್–೨೦೧೮) ದೇವಿಪ್ರಸಾದ್ ಚಟ್ಟೋಪಾಧ್ಯಾಯರವರ ಆಕರ್ಷಕ ಮುಖಪುಟದೊಂದಿಗೆ ಮಾಹಿತಿಗಳ ಮಹಾಪೂರವನ್ನೇ ಹರಿಸಿತು. 'ಸುದ್ದಿಯಾಗದ ಸುದ್ದಿಗಳು' – ಸಂಪಾದಕೀಯ ಗಮನ ಸೆಳೆಯಿತು. ಪ್ರತೀ ಮಾಹೆಯ ಮುಖಪುಟದ ಚಿತ್ರಗಳು ಒಂದಲ್ಲಾ ಒಂದು ರೀತಿಯಲ್ಲಿ ಮುದನೀಡುತ್ತದೆ. ಡಾ॥ ಜಿ. ರಾಮಕೃಷ್ಣರವರು ದೇವಿಪ್ರಸಾದ್‌ರವರ ಬಗ್ಗೆ ಅರ್ಥವತ್ತಾಗಿ ಬರೆದಿದ್ದಾರೆ.

ಇವರ ಬದುಕು–ಬರೆಹದ ಬಗ್ಗೆ ಬೆಳಕು ಚೆಲ್ಲಿದ ಮತ್ತೊಂದು ಲೇಖನ (ಅನುವಾದ ಡಾ॥ ಬಿ. ಆರ್. ಮಂಜುನಾಥ್) ಚೆನ್ನಾಗಿತ್ತು.

ಹೊಸ ಓದು ಅಂಕಣ ಪುಸ್ತಕ ಪ್ರಿಯರಾದ ನಮಗೆ ಇಷ್ಟವಾದ ಅಂಕಣ. ಪ್ರತೀ ವರ್ಷದ ಜನವರಿ ಸಂಚಿಕೆ ಸಂಗ್ರಹಯೋಗ್ಯ ವಿಶೇಷಾಂಕದೊಂದಿಗೆ ಬರುತ್ತಾ ಓದುಗರ ಮನೆ–ಮನ ತಲುಪುತ್ತಿದೆ. ವರ್ಣಗಳೊಂದಿಗೆ ಅನುಸಂಧಾನಿಸುವ ಕಲಾವಿದ ಡಾ॥ ಸಿ. ಡಿ. ಜಟ್ಟಣ್ಣವರ ಬಗ್ಗೆ ಓದಿದೆ. ಚಿತ್ರಗಳು ಹೃದಯಸ್ಪರ್ಶಿಯಾಗಿದ್ದವು. ಒಟ್ಟಿನಲ್ಲಿ **'ಹೊಸತು'** ನಮಗೆ ಸದಾ ಹೊಸತನ್ನು ಉಣಬಡಿಸುತ್ತಿದೆ. ಅಭಿನಂದನೆಗಳು.

ಮೈಸೂರು **ಕಾಳೀಹುಂಡಿ ಶಿವಕುಮಾರ್**

**ಸಾರ್ವಜನಿಕ ಬ್ಯಾಂಕ್‌ಗಳು ಯಾರ ಸ್ವಾಯತ್ತ...?!**

✉ ಇತ್ತೀಚೆಗೆ ಆಂಗ್ಲ ಪತ್ರಿಕೆಯೊಂದರಲ್ಲಿ ಬಂದಿದ್ದ ವರದಿಯನ್ನು ನೋಡಿ ನನಗೆ ಆಶ್ಚರ್ಯ! ಹಾಗೂ ಆಘಾತವಾಯಿತು. ಅದೇನೆಂದರೆ ನಮ್ಮ ದೇಶದ ಹೆಸರಿನಲ್ಲಿ ಬಡ ಸಾರ್ವಜನಿಕರ ಠೇವಣಿಯ ಮೇಲೆ ದಂಡ ವಿಧಿಸಿ ೪೯೮೮ ಕೋಟಿ ರೂ.ಗಳನ್ನು ಸಂಗ್ರಹಿಸಿವೆ. ಅದರಲ್ಲೂ ಸಾರ್ವಜನಿಕ ಸ್ವಾಯತ್ತ ಬ್ಯಾಂಕ್‌ಗಳಲ್ಲಿ ಪ್ರಸಿದ್ಧಿ ಪಡೆದ ಎಸ್.ಬಿ.ಐ. ೨೪೩೪ ಕೋಟಿ ರೂ. ಹಾಗೂ ಪಿ.ಎನ್.ಬಿ. (ಪಂಜಾಬ್ ನ್ಯಾಷನಲ್ ಬ್ಯಾಂಕ್) ೨೧೧ ಕೋಟಿ. ರೂ.ಗಳನ್ನು ಸಾರ್ವಜನಿಕರ ಖಾತೆಯಿಂದ ದೋಚಿವೆ. (ಖಾಸಗಿ ಬ್ಯಾಂಕ್‌ಗಳಾದ ಎಚ್.ಡಿ.ಎಫ್.ಸಿ. ೫೯೦ ಕೋಟಿ ರೂ., ಎಕ್ಸಿಸ್ ಬ್ಯಾಂಕ್ ೫೩೦ ಕೋಟಿ ರೂ., ಐಸಿಐಸಿಐ ೩೧೭ ಕೋಟಿ ರೂ.ಗಳನ್ನು ದೋಚಿವೆ) ಈ ರೀತಿ 'ಪಬ್ಲಿಕ್ ಅಂಡರ್‌ಟೇಕಿಂಗ್' ಎಂದು ರಾಷ್ಟ್ರೀಕರಣಗೊಂಡ ಬ್ಯಾಂಕ್‌ಗಳು ಬಡಖಾತೆ ದಾರರಿಗೆ ಬಹಿರಂಗವಾಗಿಯೇ ಆರ್ಥಿಕ ಕಾರ್ಪೊರೇಟರ್ ತೀಟೆಗೆ ಬಳಸಲು ಕೊಡುತ್ತಿರು ವುದನ್ನು ನೋಡಿದರೆ ಮಾನ್ಯ ನಮ್ಮ ಪ್ರಧಾನ ಮಂತ್ರಿಗಳು ಈ ರೀತಿಯ ಬ್ಯಾಂಕುಗಳನ್ನು ಕೋಆಪರೇಟ್ ಅಂಡರ್‌ಟೇಕಿಂಗ್ ಎಂದು ಮರುನಾಮಕರಣ ಮಾಡಿ ಖಾಸಗೀ ರಾಷ್ಟ್ರೀಕರಣ ಮಾಡುವುದು ಉತ್ತಮವೇನೋ...

ನಗದು ರಹಿತ ವ್ಯವಹಾರ, ಡಿಜಿಟಲ್ ಇಂಡಿಯಾ, ಎಲ್ಲರಿಗೂ ಬ್ಯಾಂಕ್ ಖಾತೆ ಎಂದು ಗಂಟೆಗಟ್ಟಲೆ ಜೊಳ್ಳು ಭಾಷಣ ಬಿಗಿಯುವ ನಮ್ಮ ರಾಜಕೀಯ ನಾಯಕರು ಮೊದಲು ಅಲ್ಲಿರುವ ಬಡಸಾರ್ವಜನಿಕ ಖಾತೆದಾರರ ಶೋಷಣ ನೀತಿಗಳನ್ನು ಸರಿಪಡಿಸಿ ಕೊಡಬೇಕು ಎಂದು ನಾಚಿಕೆ ಬಿಟ್ಟು ಕೇಳ ಬಯಸುತ್ತೇನೆ...

*(ಇತ್ತೀಚೆಗೆ ನನ್ನ ಕರ್ಣಾಟಕ ಬ್ಯಾಂಕ್ ಖಾತೆಯಲ್ಲಿ ಮೂರು ಬಾರಿ ೧೧೮ ರೂ.ಗಳನ್ನು ಮಿನಿಮಮ್ ಬ್ಯಾಲೆನ್ಸ್ ಹೆಸರಿನಲ್ಲಿ ದೋಚಿದ್ದಾರೆ.)*

*ಬೆಂಗಳೂರು* **ಪ್ರದೀಪ ಆರ್. ಎನ್.**

# ಹಾಯ್ಕುಗಳ ದಾರಿ ಹಿಡಿದು

ಕನ್ನಡ ಸಾಹಿತ್ಯ ಸಂದರ್ಭದಲ್ಲಿ ನಿಂತು ಅವಲೋಕಿಸಿದಾಗ, ಕನ್ನಡ ಸಾಹಿತ್ಯದಲ್ಲಿ ಅನೇಕ ಪ್ರಕಾರಗಳನ್ನು ಕಾಣಬಹುದು. ಅವುಗಳೆಂದರೆ: ಕನ್ನಡ ಕಾವ್ಯ, ಕತೆ, ಕಾದಂಬರಿ, ನಾಟಕ, ಲೇಖನ, ಪ್ರಬಂಧಗಳ ರಚನೆ ಬಲು ಹುಲುಸಾಗಿ ಬೆಳೆದು ಕನ್ನಡ ಸಾಹಿತ್ಯವನ್ನು ಶ್ರೀಮಂತಗೊಳಿಸಿದೆ. ಅದರ ಬಿಳಲುಗಳು ದೇಶೀಯವನ್ನೂ ಮೀರಿ ಸಾಗರದಾಚೆಗೂ ಹಬ್ಬಿರುವುದು ಇತ್ತೀಚಿನ ಅನೇಕ ವಿದ್ಯಮಾನಗಳನ್ನು ನಾವುಗಳು ಗಮನಿಸಬಹುದು. ಪಾಶ್ಚಿಮಾತ್ಯದ ಅನೇಕ ದೇಶಗಳಲ್ಲಿ ಕನ್ನಡಿಗರು ಸಂಘಟಿತರಾಗಿ ಕನ್ನಡ ಸಮಾವೇಶ, ಕನ್ನಡ ಸಾಹಿತ್ಯ ಸಮ್ಮೇಳನವನ್ನು ಏರ್ಪಡಿಸಿ ಸಾಹಿತ್ಯದ ಬೆಳವಣಿಗೆಗೆ ಪೂರಕ ವಾತಾವರಣವನ್ನು ಕಲ್ಪಿಸಿ, ಕೆಲಸ ಮಾಡುತ್ತಿರುವುದು ಗಮನಾರ್ಹವಾದದ್ದು.

ಇಷ್ಟೆಲ್ಲಾ ಹೇಳಲು ಕಾರಣ ಜಪಾನಿನಿಂದ ಆಮದಾದ ಸಾಹಿತ್ಯದ ಸರಕು ಪುಟ್ಟ ಪುಟಾಣಿ ಪದ್ಯ ಹಾಯ್ಕುವಿನ ಬಗ್ಗೆ ತಿಳಿಯಲು. ಕಾವ್ಯದ ಪ್ರಕಾರದಲ್ಲಿ 'ಕಿರುತಾರೆ'ಯಂತೆ ಮಿನುಗುತ್ತಿರುವ ಈ ಹಾಯ್ಕುಗಳ ಮೊದಲು ಚೀನೀಯವರಿಂದ ಪ್ರೇರಣೆ ಪಡೆದದ್ದು ಎಂದು ಹೇಳಲಾಗಿದೆ. ನಂತರ ಇದು ಜಪಾನಿನಲ್ಲಿ ಜನ್ಮ ತಾಳಿ ಹೆಚ್ಚು ಪ್ರಕಾಶಮಾನವಾಗಿ ಜನಜೀವನದಲ್ಲಿ ಹಾಸುಹೊಕ್ಕು ಮುಂದೆ ಇಂಗ್ಲಿಷ್ ಮುಖಾಂತರ ಪ್ರಪಂಚದ ಹಲವು ಭಾಷೆಗಳಿಗೆ ಪಯಣ ಬೆಳೆಸಿದಂತೆ ನಮ್ಮ ಕನ್ನಡ ಸಾಹಿತ್ಯಕ್ಕೂ ದಾಂಗುಡಿ ಇಟ್ಟಿರುವುದು ಸೋಜಿಗವೇನಲ್ಲ. ಕನ್ನಡದಲ್ಲಿ ಈ ಹಾಯ್ಕುಗಳ ಬಗ್ಗೆ ಕೃಷಿ ಮಾಡಿರುವವರ ಸಂಖ್ಯೆ ತೀರ ಬೆರಳಣಿಕೆಯ ಕವಿಗಳಿದ್ದಾರೆ. ಕನ್ನಡ ಹೈಕು ರಚಕರ ಪೈಕಿ ಚಂದ್ರಕಾಂತ ಕುಸನೂರು, ದ್ವಾರಕನಾಥ ಕಬಾಡಿ. ಶ್ರೀಮತಿ ಪ್ರೇಮಾಭಟ್ ಮತ್ತು ಡಾ॥ ಸಿ. ರವೀಂದ್ರನಾಥ್ ಮುಂತಾದವರನ್ನು ಹೆಸರಿಸಬಹುದು.

ಈ ಹಾಯ್ಕುಗಳು ಪ್ರಾಚೀನ ಜಪಾನಿನಲ್ಲಿ ಆಧ್ಯಾತ್ಮಿಕತೆಯ ಮಟ್ಟದಲ್ಲಿ ಶಿಂಟೋಧರ್ಮ, ಬೌದ್ಧ ಧರ್ಮ ಮತ್ತು ಝೆನ್ ಧರ್ಮಗಳಿಂದ ನೇರ ಪ್ರಭಾವಿತಗೊಂಡು ರಚನೆಯಾದವು. ಅಲ್ಲಿ ಆಧುನಿಕತೆ ಬೆಳೆದಂತೆ ಅದಕ್ಕನುಗುಣವಾಗಿ, ಆ ಹೊತ್ತಿನ ಅನೇಕ ವಿಷಯಾಧಾರಿತ ಸಂಗತಿಗಳನ್ನ ತೆಗೆದುಕೊಂಡು ಬರೆಯಲು ಪ್ರಾರಂಭಿಸಿದರು. ಬದಲಾವಣೆ ಅನಿವಾರ್ಯ ಎಂಬುದನ್ನು ಮನಗಂಡರು. ಅದು ಬದಲಾವಣೆಯೊಂದಿಗೆ ತೆರೆದುಕೊಂಡು, ಬದಲಾದ ತನ್ನ ಆಕಾರ, ಸ್ಥಿತಿ, ಕಾಲಗಳನ್ನು ಬದಲಾಯಿಸುತ್ತಾ ಬರೆಯಲು ಪ್ರಾರಂಭಿಸಿದರು.

ಲೊಯೆನ್‌ಸ್ಟಿನ್ ಅವರ ಹೇಳಿಕೆಯಂತೆ ಜಪಾನಿನ ಹೈಕುಗಳ ಬರೆಹ ತನ್ನ ಮೂರೇ ಮೂರು ಪಾದಗಳಲ್ಲಿ ಅನುಕ್ರಮವಾಗಿ ೫–೭–೫ ಒಟ್ಟು ೧೭ ಉಚ್ಚಾರಾಂಶ ಇರುತ್ತದೆ. ಪ್ರಕೃತಿ, ಹವಾಗುಣ, ಋತುಚಲನ ವೈಭವ, ಕವಿಯ ಏಕಾಂತ ಧ್ಯಾನ, ಸಮಾಧಿ ಸ್ಥಿತಿ ಹಾಗೂ ದೈನಂದಿನ ಚಟುವಟಿಕೆಗಳೇ ಇದರ ವಸ್ತುಗಳು. ಹೈಕುಗಳನ್ನು ರಚನೆ ಮಾಡುವಾಗ 'ಮಜ್ಜಿಗೆಯೊಳಗಣ ಬೆಣ್ಣೆಯಂತೆ' ಇರುವಂತಿರಬೇಕು. ಅದನ್ನು ಆಸ್ವಾದಿಸುವಂತಿರಬೇಕು. ಈ ಹಾಯ್ಕುಗಳ ಬಗ್ಗೆ ಕವಿಗಳೂ, ವಿದ್ವಾಂಸರೂ ಆದ ಸಾ. ಶಿ. ಮರುಳಯ್ಯನವರು ಹೀಗೆ ವ್ಯಾಖ್ಯಾನಿಸುತ್ತಾರೆ: 'ಈ ಹೈಕುವಿನಲ್ಲಿ ವರದಿ ರೂಪದ ಹೇಳಿಕೆಯಾಗಲಿ, ಅಗತ್ಯಕ್ಕೆ ಮೀರಿದ ವರ್ಣನೆಗಳಿಗಾಗಲಿ, ಪ್ರಾಸಾನುಪ್ರಾಸದ ಕೃತಕ ಜೋಡಣೆಯಾಗಲಿ, ಅದರ ಲಯದಲ್ಲಿ ಏಕತಾನತೆಯ ಕುಂಟು ಕುದುರೆಯ ನಡಿಗೆಯಾಗಲಿ, ಸಂಕೀರ್ಣ ಸ್ವಭಾವದ ಸಮಸ್ಯೆಗಳಿಗೆ ಪರಿಹಾರ ನೀಡುವುದಕ್ಕಾಗಲಿ ಅವಕಾಶವಿಲ್ಲ. ಅವೆಲ್ಲವೂ ಸಹೃದಯನ ಜವಾಬ್ದಾರಿಗೆ ಬಿಟ್ಟಿದ್ದು. ವಾಸ್ತವವಾಗಿ ಹೈಕು ಒಂದು ನಿಗೂಢ ನಿಕ್ಷೇಪ. ಅದನ್ನು ಹುಡುಕಿ ಹೊರತೆಗೆದು ಪ್ರಕಾಶಪಡಿಸುವುದು ಭವ್ಯ ಭಾವುಕ ಸಹೃದಯನಿಗೆ ಮೀಸಲಾದ ಹೊಣೆಗಾರಿಕೆ. ವಿನೂತನ, ವಿಸ್ಮಯಕಾರಿ ಪ್ರತಿಮೆಗಳ ಮೂಲಕ ಶೋತೃ ಚೇತರಸ ಚಿಂತನೆಗೆ ಆಧಾರ ಒದಗಿಸುವುದು, ಜಗಿದು ಚಪ್ಪರಿಸಿದಷ್ಟೂ ರಸವೊಸರುವಂತೆ ಸಿಗುವುದು ಹೈಕುವಿನ ಪ್ರಧಾನ ಕಾಯಕ! ಮತ್ತು ಹೈಕು 'ನಮ್ಮ ಜಾನಪದ ಒಗಟುವಿನ ಓರಗಿತ್ತಿ! ಕಷ್ಟಪಟ್ಟು ಹೊರಮೈ ಜಜ್ಜಿದರೆ ಒಳ ತಿರುಳು ಲಭ್ಯ! ನಮ್ಮ ಭಾರತೀಯ ಕಾವ್ಯ ಮೀಮಾಂಸಕರಿತ್ತ 'ಧ್ವನಿ' ತತ್ವದಂತೆ. ಧ್ವನಿ ಬಿಚ್ಚಿದ್ದಲ್ಲ ಮುಚ್ಚಿದ್ದು. ಅದು ವಾಚ್ಯದಲ್ಲಿ ಸೂಚ್ಯ, ಒಂದು ಶಬ್ದ ಸ್ಫೋಟಗೊಂಡ ಕೂಡಲೇ 'ಧ್ವನಿ'ಯಲ್ಲಿ ಹೇಗೆ ಅನೇಕಾರ್ಥಗಳು ತೆರೆದು ಕೊಳ್ಳುತ್ತವೋ, ಪ್ರತೀಯಮಾನವಾಗುತ್ತವೋ, ಹಾಗೆ ಹೈಕುವಿನ ಹೊಸ ಹೊಸ ಬೆಳಕಿನ ಕಿಡಿಗಳು ಸ್ಫುರಿಸುತ್ತವೆ ಎಂದಿದ್ದಾರೆ. ಅವರೇ ಅನುವಾದಿಸಿದ ಹಾಯ್ಕು ಬಯಲಿಗಡ್ಡಲಾಗಿ ಕುದುರೆ, ಕತ್ತನೆತ್ತಿ ನೋಡು ಒಂದು ಬಾನಾಡಿ ಮತ್ತು ವೀಣೆ ಮೇಳದ ಮೇಲೆ ಬಿದ್ದ ದ್ವೀಪದ್ರಾಕ್ಷಿ ಹಣ್ಣು, ಹೂವು ಮುಂತಾದವುಗಳನ್ನು ಹೆಸರಿಸಬಹುದಾಗಿದೆ.

ಒಟ್ಟಿನಲ್ಲಿ ಹೇಳುವುದಾದರೆ, ಕನ್ನಡ ನೆಲಕ್ಕೆ ಇದು ಹೊಸ ಬೆಳೆ. ಕೇವಲ ಜಪಾನಿನ ಮಾದರಿಯನ್ನೇ ಇಟ್ಟುಕೊಂಡು ಈ ನೆಲದ, ಈ ಭಾಷೆಯ ಓಘದ ಪರಿಭಾಷೆಯಲ್ಲಿ ನಿರ್ದಿಷ್ಟ ಸೂತ್ರಬದ್ಧ ವನ್ನರಸಿಯೇ ಬರೆಯಬಹುದಾಗಿದೆ. ಈ ಹಾಯ್ಕುಗಳು ಕಾಲಾತೀತವಾಗಿ ಉಳಿದು ಅದರ ಮೆರುಗನ್ನು ಮೆರೆಸುವಲ್ಲಿ ಸಫಲತೆಯನ್ನು ಕಾಣಬಹುದು.

ಈ ಹಿನ್ನೆಲೆಯಲ್ಲಿ ನನಗೆ ಹಾಯ್ಕುಗಳನ್ನು ಬರೆಯುವ ಯಾವ ಘನ ಉದ್ದೇಶವೇನೂ ಇರಲಿಲ್ಲ. ಪತ್ರಿಕೆಗಳಲ್ಲಿ ಪ್ರಕಟವಾಗುತ್ತಿದ್ದ ಹಾಯ್ಕುಗಳನ್ನು ಓದುತ್ತಿದ್ದಾಗ, ನನ್ನೊಳಗೆ ಅದು ಜಾಗೃತಗೊಂಡು ಬರೆಯಲು ಪ್ರೇರೇಪಿಸಿತು. ಆಗ ಬರೆಯಲು ಮುಂದಾದೆ, ಬರೆದದ್ದನ್ನು ಪತ್ರಿಕೆಗಳಿಗೆ ಕಳುಹಿಸಿದೆ. ಅವುಗಳು ಪ್ರಕಟಗೊಂಡವು. ಅದರಿಂದ ಉತ್ತೇಜಿತನಾಗಿ ಮತ್ತೆ ಮತ್ತೆ ಬರೆಯಲು ಮುಂದಾದೆ. 'ಬಿತ್ತುವ ಮುನ್ನ ಮಾಡಿರಿ ಬೀಜೋಪಚಾರ ಹೋರಿಗೆ ದಿಗಿಲು' ಇಲ್ಲಿ ಎರಡರ ಅರ್ಥ ಧ್ವನಿಸುತ್ತದೆ. 'ಕುಡಿದು ಬರ್ತಾನೆ ಮನೆಗೆ ಮಗನ ಜೊತೆಯಲಿ' ತಾನೂ ಕೆಡುವುದಲ್ಲದೆ ಮಗನನ್ನೂ ಕೆಡಿಸುವ ಪರಿ ಇದು. 'ದ್ರಾವಿಡನ ಕೈಗೆ ಬ್ಯಾಟು, ಏನಿದು ಕಲ್ಲಿನ ಗೋಡೆ' ಗೋಡೆ ಎಂದೇ ಪ್ರಖ್ಯಾತನಾಗಿರುವ ದ್ರಾವಿಡನು ಗೋಡೆಯಂತಿರುವ ಸಂಗತಿಯಿದು. 'ಕುಡುಕರಿಲ್ಲದೆ ಸೊರಗಿತು ಸಾಹಿತ್ಯಲೋಕ, ಅದ ಕೇಳಿ ನಕ್ಕ ಚಂಪಾ' ಇಲ್ಲಿ ಚಂಪಾರನ್ನೇ ಕುಟುಕುವ ಮಾದರಿಯಾಗಿ ಹೊಮ್ಮಿರುವುದು. ರಕ್ತದ ಸ್ಯಾಂಪಲ್ ಟ್ಯೂಬಿನಲ್ಲಿ 'ಯಾವ ಜಾತಿ ಧರ್ಮದ್ದು' ರಕ್ತಕ್ಕೆ ಜಾತಿ ಧರ್ಮದ ಸೋಂಕಿಲ್ಲ. ಎಲ್ಲರ ಮೈಯಲ್ಲೂ ಹರಿಯುವುದೇ ರಕ್ತವಾಗಿರುತ್ತದೆ ಎನ್ನುವ ಕಟು ಸತ್ಯ ನಮಗರ್ಥವಾಗಬೇಕಲ್ಲವೆ?

ಹೀಗೆಯೇ ಹಾಯ್ಕುಗಳು ದೇಶಾಂತರದಿಂದ ವಲಸೆ ಬಂದು ಕರ್ನಾಟಕದಲ್ಲಿ ತನ್ನ ಕಾವ್ಯದ ಇನ್ನೊಂದು ಪ್ರಕಾರವಾಗಿ ನೆಲೆ ನಿಲ್ಲಲು ಹವಣಿಸುತ್ತಿವೆ. ಈ ದಿಕ್ಕಿನಲ್ಲಿ ಹಲವರು ಈ ಹಾಯ್ಕುವಿನ ಕೃಷಿಯಲ್ಲಿ ತೊಡಗಿರುವುದು ಸಹ ಸಮಾಧಾನಕರ ಸಂಗತಿ. ಕನ್ನಡಕ್ಕೆ ಯಾವ ಕಿಟಕಿ ಬಾಗಿಲಿಂದ ಬಂದರೂ ಕನ್ನಡತನವನ್ನೇ ಉಳಿಸಿಕೊಂಡು ಬೆಳೆಯುವುದು ಕೂಡ ಈ ನೆಲದ ಗುಣವಾಗಿದೆ.

**ದ್ವಾರನಕುಂಟೆ ಪಾತಣ್ಣ**
ನಂ. ೧೧೮, 'ಹೊಂಬೆಳಕು', ಹೆಚ್.ಎಂ.ಟಿ. ಲೇಔಟ್, ನಾಗಸಂದ್ರ
ಅಂಚೆ, ಬೆಂಗಳೂರು – ೫೬೦ ೦೭೩




# ಮನುಸ್ಮೃತಿಯ ಪರಿಚಯ – ೨

ಮನುವಿಗೆ ಹಲವು ಆಕರಗಳಿವೆ : ವೇದ, ವೇದಾಂಗಗಳು ಮತ್ತು ಅವನ ಮುಂಚಿನ ಧರ್ಮಶಾಸ್ತ್ರ ಗ್ರಂಥಗಳು. ವೇದಬಾಹ್ಯವಾದ ಕೆಲವು ಸ್ಮೃತಿಗಳೂ ಅವನಿಗೆ ಪರಿಚಯವಿದ್ದಂತೆ ತೋರುತ್ತದೆ. ಬಹುಶಃ ಬೌದ್ಧ ಗ್ರಂಥಗಳನ್ನು ಅವನು ಹಾಗೆ ಕರೆದಿದ್ದಿರಬಹುದು. ಅವು "ತುಚ್ಛ ವಿಚಾರಗಳನ್ನುಳ್ಳ" ಸ್ಮೃತಿಗಳೆಂದು ಅವನು ಜರಿಯುತ್ತಾನೆ. ಅವನ ಪ್ರಕಾರ ಅವು ವಿಕೃತ ಸ್ಮೃತಿಗಳು ಮತ್ತು ದುರ್ಗತಿಯನ್ನುಂಟುಮಾಡುವಂಥವು (೧೨.೯೫ : ಯಾ ವೇದಬಾಹ್ಯಾಃ ಸ್ಮೃತಯೋ ಯಾಶ್ಚ ಕಾಶ್ಚ ಕುದೃಷ್ಟಯಃ। ಸರ್ವಾಸ್ತಾ ನಿಷ್ಫಲಾಃ ಪ್ರೇತ್ಯ ತಮೋನಿಷ್ಠಾ ಹಿ ತಾಃ ಸ್ಮೃತಾಃ॥). ಬ್ರಾಹ್ಮಣನ ಜೀವನೋಪಾಯ, ಆಚಾರ–ವಿಚಾರಗಳನ್ನು ತಿಳಿಸುವಾಗ ಅವರಲ್ಲಿ ನಾಸ್ತಿಕ್ಯ ಭಾವನೆ, ವೇದನಿಂದನೆ, ದೇವತೆಗಳ ತೆಗಳುವಿಕೆ, ಇತ್ಯಾದಿಗಳು ಕೂಡದೆಂದು ಆಗ್ರಹಿಸುತ್ತಾನೆ. ನಾಸ್ತಿಕರ ಉಪಟಳ ಅವನನ್ನು ಬಾಧಿಸುವುದು ಸ್ಪಷ್ಟವಾಗಿದೆ. ಯಾವ ನೆಲೆಯಲ್ಲಿ ಮನುಸ್ಮೃತಿ ರಚನೆಗೊಂಡಿದೆಯೆಂಬುದನ್ನು ಇದರಿಂದ ತರ್ಕಿಸಲಡ್ಡಿಯಿಲ್ಲ.

**ಮೊ**ದಲನೆಯ ಅಧ್ಯಾಯದ ಉತ್ತರಾರ್ಧದಲ್ಲಿ ಗ್ರಂಥದಲ್ಲಿ ನಿರೂಪಿಸಲಾಗುವ ವಿಷಯಗಳನ್ನು ಪಟ್ಟಿ ಮಾಡಿದ ನಂತರ ಎರಡನೆಯ ಅಧ್ಯಾಯದಿಂದ ಮುಂದಕ್ಕೆ ಮನುಸ್ಮೃತಿಯು ಕ್ರಮವಾಗಿ ಆ ವಿಷಯಗಳನ್ನು ವಿಸ್ತರಿಸುತ್ತಾ ಸಾಗುತ್ತದೆ. ಆರಂಭದಲ್ಲಿ ಒಂದು ದ್ವಂದ್ವವನ್ನು ಪ್ರಸ್ತಾಪಿಸಿರುವುದು ಗಮನಾರ್ಹವಾಗಿದೆ; ಏಕೆಂದರೆ, ಗೀತೆಯು ನಿಷ್ಕಾಮ ಕರ್ಮವನ್ನು ಬೋಧಿಸುತ್ತದೆಯೆಂಬ ಪ್ರತೀತಿಯು ನಮ್ಮಲ್ಲಿ ಚರ್ಚೆಗೆ ಬಂದಿದೆ. ಈ ಬಗ್ಗೆ ಮನುಸ್ಮೃತಿಯು ಅಡ್ಡಗೋಡೆಯ ಮೇಲೆ ದೀಪವನ್ನಿಡುವ ಕೆಲಸ ಮಾಡಿದೆ. ಕಾಮನೆಯಿಂದ ಕರ್ಮ ಮಾಡುವುದು ಪ್ರಶಸ್ತವಲ್ಲ, ಆದರೆ ಕಾಮನೆ ಇಲ್ಲದಿರುವುದು ಅಸಂಭವವಾದ್ದರಿಂದ ಜೀವನಾವಶ್ಯಕವಾದ ಕಾಮನೆಯು ಸೂಕ್ತವೆಂಬುದು ಮನುಸ್ಮೃತಿಯ ನಿಲುವು (೨.೨ : ಕಾಮಾತ್ಮತಾ ನ ಪ್ರಶಸ್ತಾ ನ ಚೈವ ಇಹಾಸ್ತಿ ಅಕಾಮ್ಯತಾ). ಪ್ರತಿಯೊಂದು ಕ್ರಿಯೆಯೂ ಕಾಮನೆಯಿಂದಲೇ ಪ್ರೇರಿತವಾಗಿರುತ್ತದೆ (೨.೪ : ...ಯದ್ಯದ್ಧಿ ಕುರುತೇ ಕಿಂಚಿತ್ ತತ್ತತ್ಕಾಮಸ್ಯ ಚೇಷ್ಟಿತಂ).

ಧರ್ಮಶಾಸ್ತ್ರಗಳೆಲ್ಲಾ ವೇದದ ಆಧಾರವನ್ನು ಹೊಂದಿವೆಯೆಂಬ ಮಾತು ರೂಢಿಯಲ್ಲಿದೆ. ಅದನ್ನು ಮನುವೂ ಉದ್ಗರಿಸಿದ್ದಾನೆ (೨.೬) : ವೇದವನ್ನು ತಿಳಿದವರ ನಡವಳಿಕೆಯು ಮೂಲ ಪ್ರಮಾಣ; ಆದರೆ ಸ್ವಯಂತೃಪ್ತಿಯೂ ಒಂದು ಮಾಪಕವೇ (ಆತ್ಮನಃ ತುಷ್ಟಿರೇವ ಚ). ವೇದವನ್ನು ಶ್ರುತಿಯೆಂದೂ ಧರ್ಮಶಾಸ್ತ್ರವನ್ನು ಸ್ಮೃತಿಯೆಂದೂ ಕರೆಯಲಾಗಿದೆ; ಅವನ್ನು ತಾರ್ಕಿಕ ವಿಶ್ಲೇಷಣೆಗೆ ಒಳಪಡಿಸುವಂತಿಲ್ಲ, ಏಕೆಂದರೆ ಅವು ಪ್ರಾಮಾಣಿಕ ಗ್ರಂಥಗಳು, ಎನ್ನುತ್ತದೆ ಮನುಸ್ಮೃತಿ (೨.೧೦: ...ತೇ ಸರ್ವಾರ್ಥೇಷು ಅಮೀಮಾಂಸ್ಯೇ). ಪ್ರಶ್ನೆ ಮಾಡಿದರೆ ಅವುಗಳ ಸೂಚನೆಗಳು ಮಾನ್ಯವಾಗದೆ ಹೋಗಬಹುದು ಎಂಬ ಅಳುಕಿರಬಹುದು. ವೈಚಾರಿಕತೆಯನ್ನು ಬಹಿಷ್ಕರಿಸುವುದು ಎಲ್ಲ ಧರ್ಮಗಳ ನಿರ್ದೇಶಕ ಸೂತ್ರವೂ ಆಗಿರುತ್ತದೆ. ಮನುಸ್ಮೃತಿಯು ಒಂದು ಹೆಜ್ಜೆ ಮುಂದೆ ಹೋಗಿ ವೈಚಾರಿಕತೆಯ ಜೊತೆಗೆ ವಿಚಾರ ಮಾಡುವವನನ್ನೂ ಬಹಿಷ್ಕರಿಸಬೇಕೆಂದು ಆಗ್ರಹಿಸುತ್ತದೆ (೨.೧೧ : ಯೋಽವಮನ್ಯೇತ ತೇ ಮೂಲೇ ಹೇತುಶಾಸ್ತ್ರಾಶ್ರಯಾತ್ ದ್ವಿಜಃ। ಸ ಸಾಧುಭಿಃ ಬಹಿಷ್ಕಾರ್ಯೋ ನಾಸ್ತಿಕೋ ವೇದನಿಂದಕಃ). ತರ್ಕವೆಂದರೆ ಶ್ರುತಿ–ಸ್ಮೃತಿಗಳಿಗೆ ಪರಮಭೀತಿ, ಆದ್ದರಿಂದಲೇ ಅವು ಯಜಮಾನ ಸ್ಥಾನದಲ್ಲಿ ನಿಂತು ನಿರ್ದೇಶನ ನೀಡುತ್ತವೆ. ಆದಾಗ್ಯೂ ಧರ್ಮದ ಲಕ್ಷಣವನ್ನು ಹೇಳುವಾಗ 'ತನಗೆ ಪ್ರಿಯವಾಗುವಂಥದು' (ಸ್ವಸ್ಯ ಚ ಪ್ರಿಯಮಾತ್ಮನಃ) ಎಂಬುದನ್ನು ಮನು ಸೇರಿಸಿದ್ದಾನೆ (೨.೧೨). ಇತರ ಧರ್ಮಶಾಸ್ತ್ರಕಾರರಂತೆ ಮತ್ತು ಭಗವದ್ಗೀತೆಯಂತೆ 'ಸ್ವ–ಧರ್ಮ' ಎಂಬ ಹೆಸರಿನಲ್ಲಿ ಶ್ರೇಣೀಕೃತ ಸಮಾಜವನ್ನು ಸ್ಥಿರಗೊಳಿಸಲು ಮನುಸ್ಮೃತಿ ಸಹ ತನ್ನ ಕಟ್ಟ ಕಾಣಿಕೆ ನೀಡಿದೆ. ಶೂದ್ರನು ತನ್ನ ಬವಣೆಯನ್ನು 'ಪ್ರಿಯವಾದುದು' ಎಂದು ಭಾವಿಸಬೇಕೆಂಬುದು ಈ ಗ್ರಂಥಕರ್ತೃಗಳ ನಿರೀಕ್ಷೆ. ಗೌತಮ ಧರ್ಮಸೂತ್ರವು ಹೇಳುತ್ತದೆ, "ವರ್ಣಾಶ್ರಮ ಧರ್ಮವನ್ನು ಚೆನ್ನಾಗಿ ರಕ್ಷಿಸಬೇಕು, ಯಾರಾದರೂ ಅದಕ್ಕೆ ವಿಮುಖರಾಗುವುದಿದ್ದರೆ ಅವರನ್ನು ಇದಕ್ಕೆ ಒಗ್ಗಿಸಬೇಕು" ಎಂದು

**ಜಿ. ರಾಮಕೃಷ್ಣ**

(೧೧.೯–೧೦ : ವರ್ಣಾನಾಂ ಆಶ್ರಮಾಂಶ್ಚ ನ್ಯಾಯತೋಽಭಿರಕ್ಷಿತಾ। ಚಲತಶ್ಚ ಏತಾನ್ ಸ್ವಧರ್ಮೇ ಸ್ಥಾಪಯೇತ್॥). ಒಂದೇ ವಿಷಯದಲ್ಲಿ ಪರಸ್ಪರ ವಿರೋಧವಿರುವ ಎರಡು ಸೂಚನೆಗಳನ್ನೇನಾದರೂ ವೇದವಾಕ್ಯವು ನೀಡಿದ್ದರೆ ಆ ಎರಡನ್ನೂ ಧರ್ಮವೆಂದು ಮಾನ್ಯ ಮಾಡಬೇಕು (೨.೧೪)! ಋಗ್ವೇದವಂತೂ ಈ ಗ್ರಂಥಗಳು ಪ್ರತಿಪಾದಿಸುವಂತಹ ಯಾವ ಧರ್ಮಪ್ರಕ್ರಿಯೆಯನ್ನೂ ಬೋಧಿಸುವುದಿಲ್ಲ, ಪೋಷಿಸುವುದಿಲ್ಲ. ಅಂದಿನ ಸಮಾಜದಲ್ಲಿ ಅದಕ್ಕೆ ಅವಕಾಶವೇ ಇರಲಿಲ್ಲ. ಉತ್ಪಾದನಾ ಸಂಬಂಧಗಳು ಬದಲಾದ ನಂತರದ ಕಾಲದ ಸಾಮಾಜಿಕ ಸಂಬಂಧಗಳನ್ನು ಧರ್ಮಶಾಸ್ತ್ರವು 'ವೇದವಾಕ್ಯಾಧಾರಿತ'ವೆಂದು ಹೇಳುವುದರಲ್ಲಿ ಸುತರಾಂ ಅರ್ಥವಿಲ್ಲ.

ಧರ್ಮಾನುಷ್ಠಾನಕ್ಕೆ ಯೋಗ್ಯವಾದ ಪ್ರದೇಶವೆಂದು ಮನುಸ್ಮೃತಿಯು ಗುರುತಿಸುವುದು ಬ್ರಹ್ಮಾವರ್ತ ಮತ್ತು ಆರ್ಯಾವರ್ತಗಳನ್ನು, ಅಂದರೆ ವರ್ಣ ವಿಭಜನೆ, ಇತ್ಯಾದಿ ಸಂರಚನೆಗಳು ಹುಟ್ಟಿಕೊಂಡಿದ್ದು ಆ ಪ್ರದೇಶದಲ್ಲಿ. ದ್ರಾವಿಡ ಪ್ರದೇಶಗಳಲ್ಲಿ ಅದು ಅನುಷ್ಠಾನಕ್ಕೆ ಯೋಗ್ಯವಿರಲಿಲ್ಲ, ಆದರೆ ಕ್ರಮೇಣ ಆ ಪ್ರದೇಶಗಳನ್ನೂ ಆಕ್ರಮಿಸಿ ನಿಂತಿದೆ. ಸರಸ್ವತಿ ಮತ್ತು ದೃಷದ್ವತಿ ನದಿಗಳ ಮಧ್ಯದೇಶವು ಬ್ರಹ್ಮಾವರ್ತ (೨.೧೭). ಸರಸ್ವತಿ ನದಿಯ ಬಗ್ಗೆ ಋಗ್ವೇದದಲ್ಲಿ ಪ್ರಸ್ತಾಪವಿದೆ, ಆದರೆ ಆ ನದಿಯು ಈಗ ಕಣ್ಮರೆಯಾಗಿದೆ. ಇಂದಿನ ವಾಯವ್ಯ ಭಾರತದ ಭಾಗವು ಇದರಂತೆ ಬ್ರಹ್ಮಾವರ್ತವೆನಿಸಿಕೊಂಡಿತ್ತು. ಅಲ್ಲಿಯ ಚಾತುರ್ವರ್ಣ್ಯ ಪದ್ಧತಿಯೇ 'ಸದಾಚಾರ'ವೆಂದು ಮನು ನುಡಿಯುತ್ತಾನೆ (೨.೧೮: ...ವರ್ಣಾನಾಂ ಸಾಂತರಾಲಾನಾಂ ಸ ಸದಾಚಾರ ಉಚ್ಯತೇ). ಆ ಭಾಗಕ್ಕಿಂತಲೂ ಕಡಿಮೆ ದರ್ಜೆಯ ಪ್ರದೇಶಗಳು ಕುರುಕ್ಷೇತ್ರ, ಮತ್ಸ್ಯ, ಪಾಂಚಾಲ ಹಾಗೂ ಶೂರಸೇನ (೨.೧೯). ಇವಲ್ಲದೆ ಮನುವಿನ ಭೂಗೋಳದಲ್ಲಿ ಮಧ್ಯದೇಶ ಮತ್ತು ಆರ್ಯಾವರ್ತಗಳಿವೆ. ಹಿಮಾಲಯ ಮತ್ತು ವಿಂಧ್ಯ ಪರ್ವತಗಳ ನಡುವಿನ ಪ್ರದೇಶಕ್ಕೆ ಪೂರ್ವದಲ್ಲಿರುವ ಹಾಗೂ ಪ್ರಯಾಗದಿಂದ (ಅಲಹಾಬಾದ್‌ನಿಂದ) ಪಶ್ಚಿಮಕ್ಕಿರುವ ಭಾಗಗಳು ಮಧ್ಯದೇಶ (ಅಂದರೆ, ಗುಜರಾತ್–ಬಿಹಾರ ಇತ್ಯಾದಿ). ಆರ್ಯಾವರ್ತವೆಂದರೆ ಪೂರ್ವಸಮುದ್ರ (ಬಂಗಾಳಕೊಲ್ಲಿ), ಪಶ್ಚಿಮ ಸಮುದ್ರ (ಅರೇಬಿಯನ್ ಸಮುದ್ರ), ಹಿಮಾಲಯ ಮತ್ತು ವಿಂಧ್ಯಾದ್ರಿಗಳ ನಡುವಣ ಭಾಗ (೨.೨೨: ಆ ಸಮುದ್ರಾತ್ತು ವೈ ಪೂರ್ವಾತ್ ಆ ಸಮುದ್ರಾತ್ತು ಪಶ್ಚಿಮಾತ್। ತಯೋರೇವಾಂತರಂ ಗಿರ್ಯೋಃ ಆರ್ಯಾವರ್ತಂ ವಿದುರ್ಬುಧಾಃ॥). ಅಂದರೆ, ವಿಂಧ್ಯದ ದಕ್ಷಿಣಕ್ಕಿರುವ ದ್ರಾವಿಡ ಭಾಗಗಳು ಆರ್ಯಾವರ್ತದಲ್ಲಿ ಸೇರಿಲ್ಲ. ಆದರೆ ಇಲ್ಲೂ ಮನುವಿನ ಕರಾಳ ನ್ಯಾಯವು ಚರಿತ್ರೆಯಲ್ಲಿ ಎಂದೋ ಬೀಡುಬಿಟ್ಟಿದೆ ಎಂದರ್ಥ. ಕೃಷ್ಣಸಾರ ಮೃಗವು ಹುಟ್ಟಿ ಬೆಳೆಯುವ ಪ್ರದೇಶವು ಯಜ್ಞಾದಿ ಆಚರಣೆಗಳಿಗೆ ಯೋಗ್ಯವಾದ ಪ್ರದೇಶ, ಉಳಿದುದೆಲ್ಲಾ ಮ್ಲೇಚ್ಛದೇಶ, ಎನ್ನುತ್ತಾನೆ ಮನು (೨.೨೩). ದ್ವಿಜಾತಿಯವರು (ಅಂದರೆ, ಉಪನಯನಕ್ಕೆ ಯೋಗ್ಯರಾಗಿ ಜನಿವಾರ ಧರಿಸುವವರು) ಸಾಧ್ಯವಾದಷ್ಟು ಮಟ್ಟಿಗೆ ಈ ಬ್ರಹ್ಮಾವರ್ತ, ಮಧ್ಯದೇಶ ಮತ್ತು ಆರ್ಯಾವರ್ತಗಳಲ್ಲಿ ಜೀವನ ಹೊರೆಯಬೇಕು; ಶೂದ್ರರು ಮಾತ್ರ ತಮ್ಮ ವೃತ್ತಿಗೆ ಅನುಕೂಲವಾದ ಯಾವುದೇ ಪ್ರದೇಶದಲ್ಲಿ ಉಳಿಯಬಹುದು (...ಶೂದ್ರಸ್ತು ಯಸ್ಮಿನ್ ಕಸ್ಮಿನ್ ವಾ ನಿವಸೇತ್ ವೃತ್ತಿಕರ್ಶಿತಃ। –೨.೨೪). 'ಇಡೀ ಭರತಖಂಡ' ಎಂದು ವ್ಯವಹರಿಸುವಾಗ ನಾವಿಂದು ಯಾವ ಪ್ರದೇಶಗಳನ್ನು ಗುರುತಿಸುತ್ತೇವೋ ಅಲ್ಲೆಲ್ಲಾ ಇರಲು ಅರ್ಹರಾಗಿದ್ದವರು ಶೂದ್ರರು ಮಾತ್ರ; ಶೂದ್ರೇತರರು ಜನಿವಾರ ಧರಿಸಲು ಯೋಗ್ಯರು, ಅವರು ಸೀಮಿತವಾದ ಪ್ರದೇಶಗಳಲ್ಲಿ ಮಾತ್ರವೇ ಇರಲು ಯೋಗ್ಯರೆಂದು ಇದರಿಂದ ತೀರ್ಮಾನಿಸಬಹುದೆ? ಹಾಗೆ ತೀರ್ಮಾನಿಸಿದರೆ ಅದನ್ನು ಪ್ರಾಯೋಗಿಕವಾಗಿ ಅನುಷ್ಠಾನಕ್ಕೆ ತರುವುದೆಂತು? ಆ ವಿಷಯದಲ್ಲಿ ಮನುವನ್ನು ಉಲ್ಲಂಘಿಸಲಾಗಿದೆ ಎಂದಾದರೆ ಬೇರೆ ವಿಷಯಗಳಲ್ಲಿಯೂ ಉಲ್ಲಂಘಿಸಬಾರದೇಕೆ ಎಂಬ ಪ್ರಶ್ನೆಯು ಅಪ್ರಸ್ತುತವಲ್ಲ. ನಮ್ಮ ದೇಶದ ಆದಿನಿವಾಸಿಗಳೆಂದರೆ ಶೂದ್ರರು ಮಾತ್ರವೆಂದು ಮನುವು ಗುರುತಿಸಿದ್ದಾನೆ ಎನ್ನಬಹುದು. ದಬ್ಬಾಳಿಕೆ ನಡೆಯುತ್ತಾ ಬಂದಿರುವುದು ಅವರ ಮೇಲೆ.

ಎರಡನೆಯ ಅಧ್ಯಾಯದಲ್ಲಿ ಮನುವು ಹೇಳುವ ಇನ್ನುಳಿದ ಕೆಲವು ಅಂಶಗಳನ್ನು ಪರಿಚಯಿಸಿಕೊಳ್ಳೋಣ. ಅವುಗಳಲ್ಲಿ ಕೆಲವು ಉಡದಾರ, ಜನಿವಾರ, ನೂಲು–ಸೆಣಬು–ಉಣ್ಣೆ ಇತ್ಯಾದಿಗಳಿಂದ ಮಾಡಿದ ಬಟ್ಟೆ ಮುಂತಾದವು ಯಾರಿಗೆ; ಮತ್ತು ಯಾರಿಗೆ ಎಷ್ಟುದ್ದದ ದಂಡ ಇರಬೇಕು, ಎಂಬಂತಹ ವಿಚಾರಗಳನ್ನು ಕುರಿತಾದಂಥವು. ಯಾವ ವರ್ಣದವರು ಎಂತಹ ಹೆಸರುಗಳನ್ನು ಇರಿಸಿಕೊಳ್ಳಬೇಕೆಂಬುದನ್ನು ಸಹ ಮನು ಸೂಚಿಸಿದ್ದಾನೆ : ಮಂಗಳಕರವಾದ ಹೆಸರು ಬ್ರಾಹ್ಮಣನಿಗೆ, ಬಲಸೂಚಕವಾದ್ದು ಕ್ಷತ್ರಿಯನಿಗೆ ಮತ್ತು ಧನಸೂಚಕವಾದ್ದು ವೈಶ್ಯನಿಗೆ. ಶೂದ್ರನಿಗಾದರೋ ಜುಗುಪ್ಸೆ ತರುವಂತಹ ಹೆಸರಿರಬೇಕು (೨.೩೧: ...ಶೂದ್ರಸ್ಯ ತು ಜುಗುಪ್ಸಿತಂ). ಅಂತಹ ಹೆಸರುಗಳ ನಮೂನೆಯನ್ನಿವನು ನೀಡಿಲ್ಲ, ಆದರೆ ಏನಾದರೊಂದು ಕೆಲಸಕ್ಕೆ ನಿಯತನಾಗುವ ದಾಸನೆಂಬ ಅರ್ಥ ಬರುವ ಹೆಸರಿರಬೇಕು (೨.೩೨ : ...ಶೂದ್ರಸ್ಯ ಪ್ರೇಷ್ಯಸಂಯುತಂ). ಇಂತಹ ಹಾಸ್ಯಾಸ್ಪದ ಸೂಚನೆಗಳು ಮನುಸ್ಮೃತಿಯಲ್ಲಿ ಬೇಕಾದಷ್ಟಿವೆ. ಒಂದು ಉದಾಹರಣೆ : ಬ್ರಹ್ಮಚಾರಿಯಾದ ಬ್ರಾಹ್ಮಣ ವಟುವು ಅವನ ತಲೆಯ ಕೂದಲಿನ ತನಕ ಬರುವಂತಹ ದಂಡವನ್ನು ಹಿಡಿದು ಭಿಕ್ಷೆಗಾಗಿ ಹೊರಡಬೇಕು; ಅದು ನೇರವಾಗಿರಬೇಕು, ಛಿದ್ರವಾಗಿರಬಾರದು (ಅಂದರೆ, ಸಿಬುರು ಎದ್ದಿರಬಾರದು), ಆಕರ್ಷಕವಾಗಿರಬೇಕು, ಉದ್ವೇಗ ಉಂಟುಮಾಡುವಂತಿರಬಾರದು, ತೊಗಟೆ ತೆಗೆದಿರಬಾರದು ಮತ್ತು ಬೆಂಕಿಯಿಂದ ಸುಟ್ಟಿರಬಾರದು (೨.೪೭). ಭಿಕ್ಷೆಯನ್ನು ಬೇಡಿ ತಂದು ಗುರುವಿಗೂ ಅರ್ಪಿಸಿ ತಾನು ಉಣ್ಣಬೇಕು. ಹಾಗೆ ಉಣ್ಣುವಾಗ ಪೂರ್ವಕ್ಕೆ ಕೂತು ಉಂಡರೆ ಆಯುಸ್ಸು ಹೆಚ್ಚುತ್ತದಂತೆ, ದಕ್ಷಿಣಾಭಿಮುಖವಾಗಿ ಕೂತರೆ ಕೀರ್ತಿ ಹೆಚ್ಚುತ್ತದೆ, ಪಶ್ಚಿಮವು ಸಂಪತ್ತು ಲಭಿಸುವಂತೆ ಮಾಡುತ್ತದೆ, ಉತ್ತರಕ್ಕೆ ಕೂತರೆ ಸತ್ಯದ ಪ್ರಾಪ್ತಿಯಾಗುತ್ತದೆ (೨.೫೨). ನಾಲ್ಕೂ ಬೇಕಾದರೆ ಹೇಗೆ ಕೂರಬೇಕೋ ತಿಳಿಸಿಲ್ಲವಾದ್ದರಿಂದ ಉಣ್ಣುವವನು ಕೂತು ಆಗಾಗ್ಗೆ ದಿಕ್ಕು ಬದಲಾಯಿಸುತ್ತಿರಬೇಕೇನೋ! ಯಾವುದೇ ಕಾರ್ಯ–ಕಾರಣ ಭಾವದ ಸಮರ್ಥನೆಯೂ ಇಲ್ಲದ ಇಂತಹ ಹೇಳಿಕೆಗಳು ಮನುಸ್ಮೃತಿಯಲ್ಲಿ ಹೇರಳವಾಗಿವೆ. ಹೀಗಾಗಿ ಅದೊಂದು ಮೂಢನಂಬಿಕೆಗಳ ಆಗರ. ಹಾಗೆ ನೋಡಿದರೆ ದಿಕ್ಕುಗಳಿಗೆ ಸಂಬಂಧಿಸಿದ ಪ್ರಸ್ತುತ ಹೇಳಿಕೆಯು ಹಾನಿಕರವಲ್ಲದ್ದು, ಏಕೆಂದರೆ ಹೇಗಿದ್ದರೂ ಊಟ ಮಾಡುವಾಗ ಯಾವುದಾದರೊಂದು ದಿಕ್ಕಿಗೆ ನಾವೆಲ್ಲಾ ಅಭಿಮುಖವಾಗಿಯೇ ಇರಬೇಕಲ್ಲ! ಕಡೆಗೆ, ಸಿಕ್ಕಿದಷ್ಟೇ ಪ್ರಾಪ್ತಿಯೆಂದು ಸಮಾಧಾನ ತಾಳಬಹುದು.

ಮನುಸ್ಮೃತಿಯನ್ನು ನೋಡುತ್ತಾ ಹೋಗುವಾಗ ಮಹಿಳೆಯರ ಬಗೆಗೆ ನೀಡಲಾಗುವ ನಿರ್ದೇಶಗಳನ್ನು ಗಮನಿಸಲೇಬೇಕಾಗುತ್ತದೆ. ಹೆಣ್ಣಿಗೆ ಉಪನಯನವಿಲ್ಲ, ಗುರುಕುಲದಲ್ಲಿ ಅಧ್ಯಯನವಿಲ್ಲ, ಭಿಕ್ಷಾಟನೆಯೂ ಇಲ್ಲ. ಅವಳಿಗೆ ಪತಿಸೇವೆಯೇ ಗುರುಕುಲವಂತೆ; ಅಂತೆಯೇ ವಿವಾಹವೇ ಸಂಸ್ಕಾರ ಮತ್ತು ಗೃಹಕೃತ್ಯವೇ ಅಗ್ನಿಕಾರ್ಯ : ವೈವಾಹಿಕೋ ವಿಧಿಃ ಸ್ತ್ರೀಣಾಂ ಸಂಸ್ಕಾರೋ ವೈದಿಕಃ ಸ್ಮೃತಃ। ಪತಿಸೇವಾ ಗುರೌ ವಾಸೋ ಗೃಹಾರ್ಥೋಽಗ್ನಿ ಪರಿಕ್ರಿಯಾ॥ – ೨.೬೭. ಎಷ್ಟೇ "ಪಾಂಡಿತ್ಯಪೂರ್ಣ" ವ್ಯಾಖ್ಯಾನಗಳನ್ನು ನೀಡಿ ವಸ್ತುಸ್ಥಿತಿಯನ್ನು ಮರೆಮಾಚಲು ಯತ್ನಿಸಿದರೂ ಮಹಿಳೆಯ ಸ್ಥಾನದ ಬಗೆಗಿನ ಮನುವಿನ ವಿಚಾರಗಳನ್ನು ಶುದ್ಧಗೊಳಿಸಲು ಸಾಧ್ಯವಿಲ್ಲ. ಅವಳಿಗೆ ಸಾಮಾನ್ಯಾರ್ಥದಲ್ಲಿ ವಿದ್ಯೆಯನ್ನು ನೀಡಲು ನಿರಾಕರಿಸಿ ಆಮೇಲೆ ಗಾರ್ಗಿಯ ಒಂದು ಉದಾಹರಣೆ ಕೊಟ್ಟರೇನು, ಬಿಟ್ಟರೇನು! ಕಣ್ವಾಶ್ರಮದಲ್ಲಿ ಬೆಳೆದರೂ ಶಕುಂತಲೆಯು ದುಷ್ಯಂತನೊಡನೆ ಪ್ರಾಕೃತದಲ್ಲಿ ಮಾತನಾಡಬೇಕಾದ್ದು ಮಹಿಳೆಯ ಶಿಕ್ಷಣದ ಬಗೆಗಿನ ಒಂದು ರೂಪಕವೆಂದು ಭಾವಿಸಿದರೆ ತಪ್ಪಲ್ಲ. ಪ್ರಾಕೃತದಲ್ಲಿ ವ್ಯವಹರಿಸುವವರು ಕೆಳದರ್ಜೆಯವರು, ಕಳಪೆಯವರು, ಎಂದು ಇದರರ್ಥವಲ್ಲ. ಜೈನಧರ್ಮದ ವಿಪುಲ ಸಾಹಿತ್ಯವು ಪ್ರಾಕೃತದಲ್ಲಿದೆ; ಅದಕ್ಕೆ ಕಾರಣ ಅದರ ತಿಳಿವು ಜನಸಾಮಾನ್ಯರಿಗೆ ತಲುಪಬೇಕೆಂಬುದು. ಪ್ರಾಕೃತದಲ್ಲೂ ಶಿಕ್ಷಣ ಪಡೆಯಲು ಸಾಧ್ಯ, ಆದರೆ ಶಿಕ್ಷಣದಿಂದ ಪೂರ್ತಿ ವಂಚಿತಳಾಗಬೇಕೆನ್ನುವುದು ಮನುಧರ್ಮ. ಮನು ಒಂದೆಡೆ ಹೇಳುತ್ತಾನೆ, "ತಲೆಗೂದಲು ಬಿಳಿಯಾದ ಮಾತ್ರಕ್ಕೆ ವ್ಯಕ್ತಿಯು ವೃದ್ಧನೆನಿಸುವುದಿಲ್ಲ; ಯುವಕನಾದರೂ ವಿದ್ವಾಂಸನಾದರೆ ಅವನು ಜ್ಞಾನವೃದ್ಧ" ಎಂದು (೨.೧೫೬ : ...ಯೋ ವೈ ಯುವಾಪಿ ಅಧೀಯಾನಸ್ತಂ ದೇವಾಃ ಸ್ಥವಿರಂ ವಿದುಃ). ಈ ಅರ್ಥದಲ್ಲಿ ಮಹಿಳೆಯು ಜ್ಞಾನವೃದ್ಧೆಯಾಗುವ ಸಂಭವವೇ ಇಲ್ಲದಿರುವುದು ಮನುವಿನ ಮಹಾನ್ ಚಿಂತನೆ!

ಬ್ರಹ್ಮಚಾರಿಯ ಮಾಡು – ಮಾಡಬೇಡಗಳು ಉಗ್ರವಾಗಿವೆ ಮತ್ತು ಅಸ್ವಾಭಾವಿಕವಾಗಿವೆ. ಭವಭೂತಿಯು ತನ್ನ 'ಉತ್ತರರಾಮಚರಿತ'ದಲ್ಲಿ ವಾಲ್ಮೀಕಿ ಆಶ್ರಮದ ಬ್ರಹ್ಮಚಾರಿಗಳ ಸ್ಥೂಲಚಿತ್ರಣವೊಂದನ್ನು ನೀಡಿದ್ದಾನೆ. ಅವನು ಸುಮಾರು

ಕ್ರಿ. ಶ. ೧೧ನೆಯ ಶತಮಾನದವನು. ಅವನು ಚಿತ್ರಿಸುವ ವಟುಗಳು ಕುತೂಹಲಿಗಳು, ಯಾವುದೇ ಹುಡುಗರಂತೆ ವರ್ತಿಸುವವರು. ಆದರೆ ಮನುವಿನ ಕಟ್ಟುಪಾಡುಗಳು ಬ್ರಹ್ಮಚಾರಿಗಳನ್ನು ಮರದ ಕೊರಡುಗಳನ್ನಾಗಿಸಿಬಿಡುವ ಆತಂಕವಿದೆ. ಐವತ್ತಕ್ಕೂ ಹೆಚ್ಚು ಶ್ಲೋಕಗಳು ಅವನಿಗೆ ಮಾರ್ಗದರ್ಶಿ ಸೂತ್ರಗಳಾಗಿವೆ. ಒಂದು ಪದ್ಯ ಹೇಳುತ್ತದೆ, "ಗುರುವನ್ನು ಬೈದರೆ ಕತ್ತೆಯ ಜನ್ಮ, ನಿಂದಿಸಿದರೆ ನಾಯಿಜನ್ಮ, ಗುರುಧನ ಕದ್ದರೆ ಕ್ರಿಮಿಯ ಜನ್ಮ ಮತ್ತು ಮಾತ್ಸರ್ಯ ತೋರಿದರೆ ಕೀಟವಾಗಿ ಜನ್ಮ" ಎಂದು (೨.೨೦೧). ಗುರುಕುಲದಲ್ಲಿರುವಾಗ ಬ್ರಹ್ಮಚಾರಿಯು ಮಾಡಬಾರದ್ದು ದೀರ್ಘವಾಗಿ ಉಕ್ತವಾಗಿದೆ. ಅವುಗಳಲ್ಲಿ ಕೆಲವು ಉಗ್ರವೂ ಅಸ್ವಾಭಾವಿಕವೂ ಆಗಿವೆ : ಎಣ್ಣೆ, ಅಭ್ಯಂಜನ, ಪಾದರಕ್ಷೆ, ಛತ್ರಿ, ಗಾಯನ, ವಾದ್ಯ ಇವೆಲ್ಲಾ ಅವನಿಗೆ ವರ್ಜ್ಯ. ದೇಹ ಮತ್ತು ಮನಸ್ಸುಗಳನ್ನು ಹೀಗೆ ದಂಡಿಸದಿದ್ದರೆ ವಿದ್ಯೆ ಹತ್ತುವುದಿಲ್ಲವೆ? ಅಥವಾ, ಸಂಸ್ಕೃತಿಯೆಂದರೆ ಕೇವಲ ವೇದಪಠಣವೆ? ಅವನು ವೀರ್ಯಸ್ಖಲನ ಮಾಡಿಕೊಳ್ಳಬಾರದು (೨.೧೮೦). ಅದು 'ಮಾಡಿಕೊಳ್ಳುವುದಲ್ಲ', ಬದಲಾಗಿ 'ಆಗಿಬಿಡುವುದು.' ಅದು ಸ್ವಾಭಾವಿಕ. ಆದರೆ ಅದೇನಾದರೂ ಜರುಗಿಬಿಟ್ಟರೆ ಅವನು ಸ್ನಾನ ಮಾಡಿ, ಸೂರ್ಯನ ಪೂಜೆ ಮಾಡಿ, ಯಾವುವೋ ಮಂತ್ರಗಳನ್ನು ಜಪಿಸಬೇಕಂತೆ (೨.೧೮೧). ಅದಾಗದಿದ್ದರೆ ಅವನು ದಿನಂಪ್ರತಿ ಸ್ನಾನ ಮಾಡುವುದಿಲ್ಲವೆ? ಮತ್ತೆ ಭಿಕ್ಷೆ ಎತ್ತುತ್ತಾನಲ್ಲ ಅದನ್ನು ಗುರುಗಳ ಮತ್ತು ತನ್ನ ಮನೆತನದವರಲ್ಲಿ ಬೇಡಬಾರದಂತೆ (೨.೧೮೪). ಬ್ರಾಹ್ಮಣ ಕುಟುಂಬಗಳಲ್ಲಿ ಜರುಗುವ ಉಪನಯನಗಳಲ್ಲಿ ಇದನ್ನು ಸಂಪೂರ್ಣವಾಗಿ ಉಲ್ಲಂಘಿಸಲಾಗುತ್ತದೆ!

ಗುರುವಿಗೆ ಒಬ್ಬ ಪತ್ನಿಯಲ್ಲ, ಹಲವು ಪತ್ನಿಗಳಿರಬಹುದು. ಗುರುವಿನಂತೆ ಆತನ ಪತ್ನಿಯೂ ಬ್ರಾಹ್ಮಣ ಕುಟುಂಬದವಳಾದರೆ ಗುರುವಿಗೆ ನೀಡಲಾಗುವ ಎಲ್ಲ ಮರ್ಯಾದೆಯನ್ನೂ ಆಕೆಗೆ ನೀಡಬೇಕು; ಬೇರೆ ಜಾತಿಯ ಪತ್ನಿಯಾದರೆ ಆಕೆಗೆ ಸುಮ್ಮನೆ ಎದ್ದು ನಿಂತು ನಮಸ್ಕರಿಸಿದರೆ ಸಾಕು (೨.೨೧೦:ಗುರುವತ್ ಪ್ರತಿಪೂಜ್ಯಾಃ ಸ್ಯುಃ ಸವರ್ಣಾ ಗುರುಯೋಷಿತಃ। ಅಸವರ್ಣಾಸ್ತು ಸಂಪೂಜ್ಯಾಃ ಪ್ರತ್ಯುತ್ಥಾನಾಭಿ–ವಾದನೈಃ॥). ಮಹಿಳೆಯರ ಸ್ವಭಾವವನ್ನು ಸಾಮಾನ್ಯೀಕರಿಸಿ ಮನುವು ಲಘುವಾಗಿ ಹೇಳುತ್ತಾನೆ, 'ಪುರುಷರನ್ನು ಚಂಚಲಗೊಳಿಸುವುದು ಅವರ ಸ್ವಭಾವ'ವೆಂದು (೨.೨೧೩); ಆದ್ದರಿಂದ ಪುರುಷರು ಎಚ್ಚರ ತಪ್ಪಬಾರದಂತೆ. ಶೇಕ್ಸ್‌ಪಿಯರ್ ಮನುವನ್ನು ಈ ಒಂದು ವಿಷಯದಲ್ಲಿ ಅನುಸರಿಸಿದ್ದಾನೆ, ತನ್ನ 'ಹ್ಯಾಮ್ಲೆಟ್' ನಾಟಕದಲ್ಲಿ. ಅವನು ವ್ಯಕ್ತಿನಿಷ್ಠ ಅನುಭವವನ್ನು ಸಾರ್ವತ್ರಿಕವೆಂದು ಬಗೆದ, ಮನುವು ಅಸಂಸ್ಕೃತ ಮೌಲ್ಯವನ್ನು ಅಮೋಘ ಮೌಲ್ಯವೆಂದು ಘೋಷಿಸಿದ. ಅಷ್ಟೇ ವ್ಯತ್ಯಾಸ. ಮನುವಿನ ಮನೋವೈಕಲ್ಯವು ಅಷ್ಟಕ್ಕೇ ನಿಲ್ಲುವುದಿಲ್ಲ. "ತಾಯಿ, ಸೋದರಿ ಮತ್ತು ಮಗಳು, ಇವರ ಜೊತೆಯಲ್ಲಿ ಪುರುಷನು ನಿರ್ಜನ ಪ್ರದೇಶದಲ್ಲಿ ಏಕಾಂಗಿಯಾಗಿ ಇರಬಾರದು" ಎನ್ನುತ್ತಾನವನು (೨.೨೧೫); ಏಕೆಂದರೆ, ಇಂದ್ರಿಯಗಳು ಯಾವ ಪ್ರೇರಣೆ ನೀಡಿಬಿಡುತ್ತವೋ ಹೇಳಲಾಗದು ಎಂಬ ಕಾರಣಕ್ಕೆ. ಇದೆಂತಹ ಮನಸ್ಸೆಂದು ಶೋಕಿಸಬೇಕೋ ಅಥವಾ ಪ್ರಾಚೀನ ಭಾರತವು ೨೦೧೮ರ ಭಾರತದಷ್ಟೇ ವಿಕೃತವಾಗಿದ್ದಿತೆಂದು ತಿಳಿಯಬೇಕೋ?

ಮನುವು ಕೆಲವೊಮ್ಮೆ ಸ್ವಾಗತಾರ್ಹ ಉದಾರವಾದಿಯಾಗುತ್ತಾನೆ, ಆದರೆ ಹೀನಸುಳಿಯ ಸೋಂಕು ಅವನನ್ನು ಬಿಟ್ಟುಹೋಗುವುದಿಲ್ಲ. ಶ್ರದ್ಧೆಯುಳ್ಳವನು ಮೌಲಿಕ ವಿದ್ಯೆಯನ್ನು ಯಾರಿಂದಲೇ ಆಗಲಿ ಸಂಪಾದಿಸಿಕೊಳ್ಳಲು ಹಿಂಜರಿಯಬಾರದು, ಆದ್ದರಿಂದ ಶೂದ್ರನಿಂದಲೂ ವಿದ್ಯೆ ಕಲಿಯಲು ಅಂಜಬಾರದು, ಅರ್ಹನಾದ ಅಂತ್ಯಜನಿಂದ ಬೇಕಾದರೂ ಧರ್ಮೋಪದೇಶ ಪಡೆಯಬೇಕು, ಕೆಳಜಾತಿಯವಳಾದರೂ ಶ್ರೇಷ್ಠಳಾದ ಸ್ತ್ರೀರತ್ನವನ್ನು ಸ್ವೀಕರಿಸಬೇಕು, ಎಂದು ಹೇಳುತ್ತಾನೆ (೨.೨೩೮ : ಶ್ರದ್ದಧಾನಃ ಶುಭಾಂ ವಿದ್ಯಾಂ ಆದದೀತ ಅವರಾದಪಿ। ಅಂತ್ಯಾದಪಿ ಪರಂ ಧರ್ಮಂ ಸ್ತ್ರೀರತ್ನಂ ದುಷ್ಕುಲಾದಪಿ॥). ಇದು ಅದ್ಭುತವಾದ ಮನೋಭಾವ. ಮುಂದಿನ ಕೆಲವು ಪದ್ಯಗಳಲ್ಲಿ ಸಹ ಇಂಥದೇ ಉದಾರ ನಿಲುವು ಪ್ರಕಟವಾಗಿದೆ. ಆದರೆ ಕಡೆಗೆ ಒಂದು ಕೊಂಕು ಮಾತು ಇಲ್ಲದಿರುವುದಿಲ್ಲ : "ವಿದ್ಯೆ ಪಡೆಯಲು ಆಪತ್ಕಾಲದಲ್ಲಿ ಶೂದ್ರನ ಬಳಿಗಾದರೂ ಹೋಗಬಹುದು, ಆದರೆ ಅಂತಹ ಸಂದರ್ಭದಲ್ಲಿ ಅಧ್ಯಯನ ಕಾಲದಲ್ಲಿ ಮಾತ್ರ ಗುರುಭಾವವನ್ನು ತಾಳಬೇಕು" (೨.೨೪೧). ಆಪತ್ಕಾಲದಲ್ಲಿ ಮಾತ್ರ ಶೂದ್ರನಿಂದ ವಿದ್ಯೆ ಪಡೆಯಬಹುದು ಮತ್ತು ಅಧ್ಯಯನ ಕಾಲದಲ್ಲಿ ಮಾತ್ರ ಗುರುವಿಗೆ ಗೌರವ ತೋರಿಸಬೇಕು ಎಂಬುದು ಕ್ಷುದ್ರ ಭಾವನೆಯೇ ಸರಿ. ಆಪಸ್ತಂಬ ಧರ್ಮಸೂತ್ರದಲ್ಲಿ ಬೇರೊಂದು ರೀತಿಯ ಉದಾರ ಭಾವನೆ ವ್ಯಕ್ತವಾಗಿದೆ : "ನಿನ್ನ ಗುರುವು ಸಾಕಷ್ಟು ಪ್ರಬುದ್ಧನೆನಿಸದಿದ್ದರೆ ಅಥವಾ ಅವನ ಜ್ಞಾನವು ಅಪಕ್ವವೆನಿಸಿದರೆ ಅವನನ್ನು ತೊರೆದು ಬೇರೆ ಗುರುವಿನ ಬಳಿಗೆ ತೆರಳಬಹುದು" (ಶಾಸ್ತುಶ್ಚ ಅನಾಗಮಾತ್ ವೃತ್ತಿರನ್ಯತ್ರ). ಇಲ್ಲಿ ಜ್ಞಾನಕ್ಕೆ ಪ್ರಾಧಾನ್ಯವಿದೆಯೇ ವಿನಾ ಗುರುವಿಗೆ ಅಗೌರವದ ಪ್ರಶ್ನೆ ಇಲ್ಲ. ಅದಕ್ಕೇ ಮನುವಿನ 'ಹೀನಸುಳಿ' ಎಂದದ್ದು. ಬ್ರಾಹ್ಮಣನಲ್ಲದ ಗುರುವಿನ ಮನೆಯಲ್ಲಿ ಶಿಷ್ಯನು ಇರಬಾರದು. ಅಂದರೆ, ಅದು ಗುರುಕುಲವೆನಿಸಿಕೊಳ್ಳಲು ಅರ್ಹವಲ್ಲ; ಮುಂದುವರಿಸಿ ಮನುವೂ ಆಪಸ್ತಂಬನಂತೆ ವಿದ್ವತ್ತಿನ ಕೊರತೆಯಿರುವ ಗುರುವನ್ನು ತೊರೆಯಬೇಕೆಂದು ಹೇಳುವುದು ತಂಗಾಳಿಯಂತೆ ತೋರುತ್ತದೆ (೨.೨೪೨ : ನ ಅಬ್ರಾಹ್ಮಣೇ ಗುರೌ ಶಿಷ್ಯೋ ವಾಸಮಾತ್ಯಂತಿಕಂ ವಸೇತ್। ಬ್ರಾಹ್ಮಣೇ ಚ ಅನನೂಚಾನೇ ಕಾಂಕ್ಷನ್ ಗತಿಮನುತ್ತಮಾಂ॥).

> ## ಇಳಿಸಿತು
>
> ಮೋಡದ ಭಾರ
> ಇಳಿಸಿತಾ ಮಳೆ ಹನಿ
> ಹೃದಯ ಭಾರ
> ಇಳಿಸಿತು ಕಂಬನಿ
>
> **ಶ್ರೀಮತಿ ಪ್ರಭಾವತಿ ಎಸ್. ದೇಸಾಯಿ**
> ವಿಜಯಪುರ

ತೈತ್ತಿರೀಯ ಉಪನಿಷತ್ತಿನಲ್ಲಿ ಗುರುಕುಲದಿಂದ ತೆರಳುವಾಗ ಶಿಷ್ಯನಿಗೆ ನೀಡಲಾಗುವ ಉಪದೇಶವನ್ನು ದಾಖಲಿಸಲಾಗಿದೆ ಮತ್ತು ಅದು ಪ್ರಸಿದ್ಧವಾಗಿರುವ ಭಾಗ ಸಹ ಆಗಿದೆ (೧.೧೧). ಮಾತೃದೇವೋ ಭವ, ಇತ್ಯಾದಿ ಅನುಶಾಸನವು ಬಂದಿರುವುದು ಅಲ್ಲೇ. ಗುರುಕುಲ ವಾಸವು ಮುಗಿದು ಸ್ನಾತಕನಾಗಿ ತೆರಳುವಾಗ ಶಿಷ್ಯನು ಗುರುವಿಗೆ ದಕ್ಷಿಣೆ ಸಲ್ಲಿಸಬೇಕು ಮತ್ತು ನಂತರ ಸಂತಾನದ ಕುರಿತು ಕ್ರಿಯಾಶೀಲನಾಗಬೇಕು, ಎಂದು ಅಲ್ಲಿ ಬೋಧಿಸಲಾಗಿದೆ (ಆಚಾರ್ಯಾಯ ಪ್ರಿಯಂ ಧನಮಾಹೃತ್ಯ ಪ್ರಜಾತಂತುಂ ಮಾ ವ್ಯವಚ್ಛೇತ್ಸೀಃ). ಕುಟುಂಬ ವೃದ್ಧಿಯ ದಾರವನ್ನು ತುಂಡರಿಸಬಾರದೆಂದರ್ಥ. ಮನುವು ಇದೇ ಭಾವವನ್ನು ಪ್ರಕಟಿಸಿದ್ದಾನೆ : ವಿದ್ಯಾಭ್ಯಾಸದ ಸಮಯದಲ್ಲಿ ಶಿಷ್ಯನು ಗುರುವಿಗೆ ಕಾಣಿಕೆ ಕೊಡಬೇಕಿಲ್ಲ; ಕಲಿತು ತೆರಳುವಾಗಷ್ಟೆ ಕಾಣಿಕೆಯ ಸಲ್ಲಿಕೆ. (೨.೨೪೫ : ನ ಪೂರ್ವಂ ಗುರವೇ ಕಿಂಚಿದುಪಕುರ್ವೀತ ಧರ್ಮವಿತ್। ಸ್ನಾಸ್ಯಂಸ್ತು ಗುರುಣಾSSಜ್ಞಪ್ತಃ ಶಕ್ತ್ಯಾ ಗುರ್ವರ್ಥಮಾಹರೇತ್॥). ಕಾಣಿಕೆಯು ಭೂಮಿ, ಚಿನ್ನ, ಗೋವು, ಕುದುರೆ, ಛತ್ರಿ, ಪಾದರಕ್ಷೆ, ಧಾನ್ಯ, ಹೀಗೆ ಯಾವ ರೂಪದಲ್ಲಾದರೂ ಇರಬಹುದು (೨.೨೪೬). ಒಟ್ಟಿನಲ್ಲಿ, ಬ್ರಹ್ಮಚರ್ಯದ ವಿಧಿಯನ್ನು ಯಥಾವತ್ತಾಗಿ ಪೂರೈಸಿದವನಿಗೆ ಪುನರ್ಜನ್ಮವಿರುವುದಿಲ್ಲ, ಬದಲಾಗಿ ಬ್ರಹ್ಮಸಾಯುಜ್ಯ ದೊರೆಯುತ್ತದೆ (೨.೨೪೯). ಇದೇಕೋ ಅತಿಯಾಯಿತೆನಿಸುತ್ತದೆ. ಏಕೆಂದರೆ, ಬ್ರಹ್ಮ ಸಾಕ್ಷಾತ್ಕಾರಕ್ಕಾಗಿ ಮತ್ತು ಮೋಕ್ಷಾರ್ಥಿಗಳಾಗಿ ಅತ್ಯಂತ ಪ್ರಾಜ್ಞರು ಸಹ ಬ್ರಹ್ಮಚರ್ಯದ ನಂತರದಲ್ಲೂ ಜ್ಞಾನದ ಅರಸುವಿಕೆಯಲ್ಲಿ ಮುಳುಗಿರುತ್ತಾರೆಂದು ಹತ್ತಾರು ಬಾರಿ ಉಪನಿಷತ್ತುಗಳಲ್ಲಿ ಹೇಳಲಾಗಿದೆ. ಬ್ರಹ್ಮಚರ್ಯದಿಂದಲೇ ಬ್ರಹ್ಮಸಾಯುಜ್ಯ ದೊರೆಯುತ್ತದಾದರೆ ಯಾಜ್ಞವಲ್ಕ್ಯನಂಥವರು ವೃದ್ಧರಾದಾಗಲೂ ಜ್ಞಾನಸಂಗ್ರಹದಲ್ಲಿ ತೊಡಗಿಕೊಳ್ಳಬೇಕಿತ್ತೇಕೆ? ಬ್ರಹ್ಮಚರ್ಯದ ಕಾಲ ಸಹ ಇಷ್ಟೇ ಎಂದು ನಿಗದಿಯಾಗಿಲ್ಲ. ಮೂರು ವೇದಗಳನ್ನೂ ಕರಗತ ಮಾಡಿಕೊಳ್ಳುವಂತಿದ್ದರೆ ಗುರುಕುಲ ವಾಸವು ಮೂವತ್ತಾರೋ, ಹದಿನೆಂಟೋ, ಒಂಭತ್ತೋ ವರ್ಷಗಳು ಇರಬೇಕಾಗುತ್ತದೆ (೩.೧). ಉದ್ದಾಲಕನ ಮಗ ಶ್ವೇತಕೇತುವು ಎಲ್ಲ ವೇದಗಳಲ್ಲೂ ಪಾರಂಗತನಾಗಲು ಗುರುವಿನ ಸನ್ನಿಧಿಯಲ್ಲಿ ಹನ್ನೆರಡು ವರ್ಷಗಳನ್ನು ಕಳೆದಿದ್ದನೆಂದು ಛಾಂದೋಗ್ಯ ಉಪನಿಷತ್ತು ಹೇಳುತ್ತದೆ.

ಮನುಸ್ಮೃತಿಯ ಮೂರನೆಯ ಅಧ್ಯಾಯವು ಗೃಹಸ್ಥಾಶ್ರಮವನ್ನು ಕುರಿತದ್ದಾಗಿದೆ. ಯಥಾಪ್ರಕಾರ ಅದು ಶೂದ್ರವರ್ಣಕ್ಕೆ ಅನ್ವಯಿಸುವುದಿಲ್ಲ; ಏಕೆಂದರೆ ಮನುವು ಹೆಚ್ಚಾಗಿ ಬ್ರಾಹ್ಮಣ ವರ್ಣದವರನ್ನೇ ಕೇಂದ್ರೀಕರಿಸುತ್ತಾನೆ. ಬ್ರಹ್ಮಚಾರಿಯು ಕಡೇಪಕ್ಷ ಒಂದು ವೇದದಲ್ಲಾದರೂ ನಿಷ್ಣಾತನಾದ ನಂತರ ಗೃಹಸ್ಥನಾಗಲು ಅಡ್ಡಿಯಿಲ್ಲ. ಹಾಗೆ ಒಂದು ವೇದದಲ್ಲಾದರೂ ನೈಪುಣ್ಯ ಪಡೆಯದವರು ಗೃಹಸ್ಥರಾಗಬಾರದೆಂದೇನೂ ಇಲ್ಲ. ಹಾಗೇನಾದರೂ ಇದ್ದಿದ್ದರೆ ಜನಸಂಖ್ಯೆಯಲ್ಲಿ ಬ್ರಾಹ್ಮಣರೆನಿಸಿಕೊಳ್ಳುವವರ ಪ್ರಮಾಣವು ಬಹಳ ಕಡಿಮೆಯಾಗಿರುತ್ತಿತ್ತು! ಗುರುಕುಲದಿಂದ ಹಿಂದಿರುಗಿ

ಗುರುಗಳ ಆಜ್ಞೆಯಂತೆ ಬ್ರಹ್ಮಚಾರಿಯು ಗೃಹಸ್ಥನಾಗಲು ಸಿದ್ಧನಾದಾಗ "ತನ್ನದೇ ವರ್ಣದ ಸುಂದರ ಕನ್ಯೆಯನ್ನು ಮದುವೆ ಮಾಡಿಕೊಳ್ಳಬೇಕು" (೩.೪ : ...ಉದ್ವಹೇತ ದ್ವಿಜೋ ಭಾರ್ಯಾಂ ಸವರ್ಣಾಂ ಲಕ್ಷಣಾನ್ವಿತಾಂ). ಈ ಸೂಚನೆಯನ್ನು ಹೇಗೆ ಉಲ್ಲಂಘಿಸಬಹುದೆಂಬುದಕ್ಕೆ ಮನುಸ್ಮೃತಿಯು ಅನೇಕ ಹಾದಿಗಳನ್ನು ಸೂಚಿಸಿದೆ : "ತಮ್ಮ ವರ್ಣದ ಹೆಣ್ಣನ್ನು ಮದುವೆಯಾಗುವುದು ಸೂಕ್ತ; ಕೇವಲ ದೇಹಸುಖಕ್ಕಾಗಿ ಆದರೆ ಯಾವ ಜಾತಿಯ ಹೆಣ್ಣನ್ನಾದರೂ ಮದುವೆಯಾಗಬಹುದು" (೨.೧೨ : ...ಕಾಮತಸ್ತು ಪ್ರವೃತ್ತಾನಾಂ ಇಮಾಃ ಸ್ಯುಃ ಕ್ರಮಶೋ ವರಾಃ). ಶೂದ್ರನಾದರೆ "ಕೇವಲ ದೇಹಸುಖಕ್ಕೆ" ಬೇರೆ ವರ್ಣದವರನ್ನು ವರಿಸುವಂತಿಲ್ಲ! ಉಚ್ಚವರ್ಣದವರಿಗೆ ಆಯ್ಕೆಯ ಸ್ವಾತಂತ್ರ್ಯವನ್ನು ಒಪ್ಪುವ ಮನು ಏಳು ಪದ್ಯಗಳ ನಂತರ (೨.೧೯) ಬೇರೆಯೇ ನಿಲುವು ತಾಳುತ್ತಾನೆ : "ಶೂದ್ರಳಿಗೆ ಮುತ್ತು ಕೊಟ್ಟು ಅವಳ ನಿಃಶ್ವಾಸವನ್ನು ಅನುಭವಿಸಿದರೆ ಮತ್ತು ಮಗನನ್ನು ಪಡೆದರೆ ದ್ವಿಜನಿಗೆ ಪ್ರಾಯಶ್ಚಿತ್ತವೇ ಇಲ್ಲ." ತನ್ನ ಕಾಲದ ಮತ್ತು ತನ್ನ ಹಿಂದಿನ ಕಾಲದ ಸಂದರ್ಭಗಳನ್ನೇನಾದರೂ ಮನು ದಾಖಲಿಸುತ್ತಿದ್ದಾನೋ ತಿಳಿಯದು. ಆದರೆ ಆಯ್ಕೆ ಮಾಡಿಕೊಳ್ಳಲು ಮನು ಬ್ರಾಹ್ಮಣನಿಗೆ ಬಹಳ ಸೀಮಿತ ಅವಕಾಶ ಕರುಣಿಸುತ್ತಾನೆ; ಏಕೆಂದರೆ ಆಕೆಯು "ಸರ್ವಾಂಗ ಸುಂದರಿ ಯಾಗಿರಬೇಕು, ಸುಂದರ ಹೆಸರನ್ನು ಹೊಂದಿರಬೇಕು, ಹಂಸದಂತಿರಬೇಕು, ಗಜಗಾಂಭೀರ್ಯ ನಡೆ ಉಳ್ಳವಳಾಗಿರಬೇಕು, ಅಂದವಾದ ಕೇಶರಾಶಿ ಹೊಂದಿರಬೇಕು, ಉತ್ತಮ ದಂತಪಂಕ್ತಿ ಇರಬೇಕು ಮತ್ತು ಕೋಮಲೆಯಾಗಿರಬೇಕು" (೩.೧೦). ಕಾಮಸೂತ್ರದ ಕರ್ತೃ ವಾತ್ಸ್ಯಾಯನ ಸಹ ಇಷ್ಟೊಂದು ಲಕ್ಷಣಗಳನ್ನು ನಮೂದಿಸಿರಲಾರ! ಇಂತಹ ಲಕ್ಷಣಗಳಿದ್ದು ಅವಳು ಶೂದ್ರಳಾಗಿದ್ದರೆ ಎಂಥದೇ ಅನಿವಾರ್ಯ ಸಮಯದಲ್ಲೂ ಬ್ರಾಹ್ಮಣ ಮತ್ತು ಕ್ಷತ್ರಿಯ ಗಂಡುಗಳು ಅವಳನ್ನು "ಪ್ರಥಮ ಸ್ತ್ರೀ" ಎಂದು ಸ್ವೀಕರಿಸಬಾರದು (೩.೧೪). ಮೊದಲ ಮೂರು ವರ್ಣದವರು ಶೂದ್ರ ಸ್ತ್ರೀಯನ್ನು ಮದುವೆಯಾದರೆ ತಮ್ಮ ಸಂತಾನಕ್ಕೆ ಶೂದ್ರತ್ವದ ಲೇಪವನ್ನು ಹಚ್ಚಿಬಿಡುತ್ತಾರೆ (೩.೧೫: ಹೀನಜಾತಿಸ್ತ್ರಿಯಂ ಮೋಹಾತ್ ಉದ್ವಹಂತೋ ದ್ವಿಜಾತಯಃ। ಕುಲಾನ್ಯೇವ ನಯಂತ್ಯಾಶು ಸಸಂತಾನಾನಿ ಶೂದ್ರತಾಂ॥). ಈಚಿನ ದಶಕಗಳಲ್ಲಿ ಮನುವಿನ ಸೂತ್ರಕ್ಕೆ ತಿದ್ದುಪಡಿಯನ್ನು ಅಂಗೀಕರಿಸಲಾಗಿದೆ: ಉಚ್ಚ ವರ್ಣದವರು "ಹೀನಜಾತಿಯ" ಸ್ತ್ರೀಯನ್ನು ಮದುವೆಯಾದರೆ ಆ ಸ್ತ್ರೀಗೆ ಬಡ್ತಿ ದೊರೆತು ಪತಿಯ ವರ್ಣದವಳಾಗಿಬಿಡುತ್ತಾಳೆ. ಇದನ್ನು 'ಅನುಕೂಲಸಿಂಧು' ಎನ್ನುತ್ತಾರೆ. ಹೀಗಾದರೂ ಮನುವನ್ನು ಧಿಕ್ಕರಿಸುತ್ತಿದ್ದಾರಲ್ಲ ಎಂಬುದೇ ಸಮಾಧಾನದ ಸಂಗತಿ.

ಮೂರನೆಯ ಅಧ್ಯಾಯದ ೨೧ನೆಯ ಶ್ಲೋಕದಿಂದ ಮುಂದಕ್ಕೆ ಮನುವು ಎಂಟು ವಿಧದ ವಿವಾಹಗಳನ್ನು, ಯಾವ ದಿನ ಸಂಭೋಗ ನಡೆಸಿದರೆ ಯಾವ ಲಿಂಗದ ಮಗು ಜನಿಸುತ್ತದೆ, ಎಂಬಿತ್ಯಾದಿ ವಿಷಯಗಳನ್ನು ಪ್ರತಿಪಾದಿಸುತ್ತಾನೆ.

*(ಮುಂದುವರಿಯುತ್ತದೆ)*

**ಜಿ. ರಾಮಕೃಷ್ಣ**
೨-ಎಫ್, ಪವನ ಪರಂಜ್ಯೋತಿ ಅಪಾರ್ಟ್‌ಮೆಂಟ್ಸ್
೨೨/೧, ೪ನೇ ಕ್ರಾಸ್, ಕಾವೇರಿನಗರ, ಬನಶಂಕರಿ ೩ನೇ ಹಂತ, ಬೆಂಗಳೂರು – ೫೬೦ ೦೮೫

# ಮಠದ ಶ್ವಾನಗಳು






**ಹೋ**ರಿಯಿಂದ ಮೋಸಹೋದ ಕರಿ ಆಕಳೊಂದು
ಕಾಡಿನ ಕಟಕಟೆಯಲಿ ನಿಂತು ಕಣ್ಣೀರಿಟ್ಟರೆ
ಖತರ್ನಾಕ್ ಹೋರಿ ಚಾಲಾಕಿ ವಕೀಲರನ್ನಿಟ್ಟು
ಢರಕಿ ಹಾಕಿ, ಮೈ ಅಲ್ಲಾಡಿಸಿತು

ನಿನ್ನೆಯವರೆಗೂ ಆಕಳ ಪರವಿದ್ದ ಪ್ರಾಣಿಗಳೆಲ್ಲ
ಇಂದೇಕೋ... ಹೋರಿ ಪರ ಜೈಕಾರ ಹಾಕಿದವು
ಎರಚಿಕೊಂಡ ಗುಲಾಲಲಿ ಧರ್ಮದ ಘಾಟಿತ್ತು
ಆರೋಪಿ ಹೋರೀಗ ನಂದಿ ಮಠದ ಅಧಿಪತಿ !

ಭಕ್ತ ಪ್ರಾಣಿ ಸಂಕುಲವೇ...
ಇನ್ನೀಮಠವು ಆಮೂಲಾಗ್ರವಾಗಿ ಬದಲಾಗಲಿದೆ
ಹೋರಿಯ ಮಾತಿಗೆ ಮಂಗಗಳು ತಲೆದೂಗಿದವು
ನರಿಗಳು ಮಠದ ಸದ್ದಿಗೆ ಬಣ್ಣ ಬಳದವು

ಬಾವಿ ಕಪ್ಪೆಗಳು 'ಹೋರಿ ಅಭಿವೃದ್ಧಿಯ ರೂವಾರಿ'
ಎಂದು ಸಾಮಾಜಿಕ ಜಾಲದಲಿ ಸೂಚಿಸಿದರೆ
ಕೆಲ ಮಳ್ಳ ಆಕಳೆ ಎದ್ದುಬಿದ್ದು ಅನುಮೋದಿಸಿದವು

ಮಠದ ತೀರ್ಥ ಕುಡಿದ ಸವಾರ್ಥಿ ಪ್ರಾಣಿಗಳು
ಹೋರಿಯ ಅಮಲಿನಲಿ ಓಲಾಡುತ್ತಿವೆ
ಕಾಡ ತುಂಬ ಕಾರ್ಮೋಡ ಕವಿದಿದ್ದರೂ
ಬೆಳದಿಂಗಳ ಹಬ್ಬ ಆಚರಿಸುತ್ತಿವೆ ಥೂ...

ಅಂಥ ಭಕ್ತರೆ ಕೇಳಿ,
ಕರಿ ಆಕಳಗೆ ಕೋರ್ಟಲಿ ಅನ್ಯಾಯವಾಗಬಹುದು
ಆದರೆ... ಮೇಲೊಂದಿದೆ ಕಾದು ನೋಡಿರಿ
ಮೋಸ ಹೋದವರ ಸಾಲಲಿ ನೀವೇ ಮೊದಲಿಗರು
ಆನೆಯ ಮಾತನರಿಯದೆ ಶ್ವಾನಗಳು ಬೊಗಳುತ್ತಿವೆ
ನೊಂದ ಆಕಳಗೀಗ ಆನೆ ಭರವಸೆ ಮೂಡಿಸಿದೆ.

**ಕೆ. ಬಿ. ವೀರಲಿಂಗನಗೌಡ್ರ**
ಎಸ್.ಆರ್.ಜಿ.ಎಚ್.ಎಂ. ಪ್ರೌಢಶಾಲೆ
ಸಿದ್ದಾಪುರ – ೫೮೧ ೩೫೫ ಉ.ಕ.ಜಿಲ್ಲೆ

# ಗುಣವಿರದ ಕವಿತೆ ಸಿಂಹಾಸನದಿ ಮೆರೆಯುತಿದೆ...

**ಮೇಟಿ ಮಲ್ಲಿಕಾರ್ಜುನ**

ಸಾಮಾಜಿಕ ಕ್ರಾಂತಿಗೆ ಬೇಕಾಗಿರುವುದು ಇಂಗ್ಲಿಶು ನುಡಿಯಲ್ಲ ಬದಲಾಗಿ ವೈಚಾರಿಕ ವಿನ್ಯಾಸಗಳು, ಬೌದ್ಧಿಕ ಹೊಣೆಗಾರಿಕೆ ಹಾಗೂ ವೈಜ್ಞಾನಿಕ ಮನಸ್ಥಿತಿ. ಈ ಎಲ್ಲ ಬೌದ್ಧಿಕ ಪರಿಕರಗಳು ಸಜ್ಜುಗೊಂಡದ್ದು ಇಂಗ್ಲಿಶಿನಲ್ಲಿ ಅಲ್ಲ. ಜರ್ಮನ್, ಫ್ರೆಂಚ್, ಇಟಾಲಿಯನ್, ಮೊದಲಾದ ನುಡಿಗಳಲ್ಲಿ ಎನ್ನುವುದು ಗಮನಾರ್ಹ. ಹಾಗಾದರೆ, ನಮ್ಮ ಶಿಕ್ಷಣ ಮಾಧ್ಯಮವನ್ನು ಈ ಕೆಲವು ನುಡಿಗಳ ಮೂಲಕ ಅಳವಡಿಸಿಕೊಳ್ಳಲು ಸಾಧ್ಯವೇ? ಇದೊಂದು ಅಧಿಕ ಪ್ರಸಂಗ ಅನ್ನಿಸಬಹುದು. ಆದರೆ ಇಂಗ್ಲಿಶಿನ ಮೂಲಕ ಪ್ರಾಥಮಿಕ ಕಲಿಕೆ ಎನ್ನುವುದು ಕೂಡ ಇಂತಹದೇ ಅವೈಜ್ಞಾನಿಕ ನಡೆಯಾಗಿದೆ. ಏಕೆಂದರೆ ಪಠ್ಯಕ್ರಮ ಮತ್ತು ಪಠ್ಯವಸ್ತುಗಳ ಬದಲಾಗಿ ಮಾಧ್ಯಮದ ಪ್ರಶ್ನೆಯೇ ಯಾಕೆ ಇಷ್ಟೊಂದು ತೀವ್ರಗೊಂಡಿದೆ. ಖಾಸಗಿ ಶಾಲೆಗಳಲ್ಲಿ ಇಂಗ್ಲಿಶು ಮಾಧ್ಯಮವಿದೆ ಎನ್ನುವುದು ಕೂಡ ಒಂದು ಹುಸಿನಂಬಿಕೆ. ಕಲಿಕೆಯ ಪ್ರಕ್ರಿಯೇ ನಡೆಯುವುದು ಮಾತ್ರ ಕನ್ನಡದಲ್ಲಿಯೇ ಇದರಲ್ಲಿ ಯಾವುದೇ ಅನುಮಾನವಿಲ್ಲ. ಮಾಧ್ಯಮ ಎಂದರೇನು?

ಇದು ಕೆಎಸ್‌ನ ಅವರಿಗೆ ಅತ್ಯಂತ ಗಾಢವಾಗಿ ಅನ್ನಿಸಿದ ಮಾತು. ಈ ಮಾತಿನ ಮೂಲಕ ಇವತ್ತು ನಮ್ಮ ನಡುವೆ ನಡೆಯುತ್ತಿರುವ ಇಂಗ್ಲಿಶು ಮಾಧ್ಯಮದ ಚರ್ಚೆಗಳನ್ನು ಬಿಡಿಸಿ ನೋಡುವ ಪ್ರಯತ್ನ ಮಾಡಬಹುದು. 'ಗುಣವಿರದ ಕವಿತೆ ಸಿಂಹಾಸನದಿ ಮೆರೆಯುತಿದೆ' ಎಂಬುದು ಕೇವಲ ರೂಪಕ ಮಾತ್ರವಲ್ಲ, ಇದು ಈ ಹೊತ್ತಿನ ಕಟು ವಾಸ್ತವೂ ಹೌದು. ಇಂಗ್ಲಿಶು ನುಡಿಯನ್ನೂ ಹೀಗೆ ಸಿಂಹಾಸನದ ಮೇಲೆ ಕೂಡಿಸಿ ಮೆರೆಸುವ ಬಗೆಯನ್ನು ಭಾರತ ಮತ್ತು ಜಗತ್ತಿನಾದ್ಯಂತ ನಾವು ನೋಡುತ್ತಿದ್ದೇವೆ. ಸರಕಾರಿ ಶಾಲೆಗಳಲ್ಲಿ ಒಂದನೇ ತರಗತಿಯಿಂದ ಇಂಗ್ಲಿಶು ಮಾಧ್ಯಮದ ಶಿಕ್ಷಣವನ್ನು ನೆಲೆಗೊಳಿಸುವ ನಿರ್ಣಯವನ್ನು ಕರ್ನಾಟಕ ಸರಕಾರ ಈಗಾಗಲೇ ಕೈಗೊಂಡಿದೆ. ಇಂಗ್ಲಿಶು ನುಡಿ ಕುರಿತ ಬೇಡಿಕೆ ಹೊಸದಲ್ಲ. ವಸಾಹತು ಪೂರ್ವದಲ್ಲಿಯೇ ಭಾರತದ ಚಿಂತಕರಿಂದಲೇ ಇಂತಹದೊಂದು ಬೇಡಿಕೆ ಮುಂಚೂಣೆಗೆ ಬಂತು. ಇದಕ್ಕೊಂದು ಚಾರಿತ್ರಿಕ ಒತ್ತಾಸೆಯೂ ಇತ್ತು. ಅದೇನೆಂದರೆ, ಭಾರತದ ಶಿಕ್ಷಣಕ್ರಮವನ್ನು ಆವತ್ತು ಕೂಡ ಸಮುದಾಯಗಳ ನುಡಿಯಲ್ಲಿ ನೀಡುತ್ತಿರಲಿಲ್ಲ. ಸಂಸ್ಕೃತ, ಅರ್‍ಯಾಬಿಕ್ ಮತ್ತು ಪರ್ಶಿಯನ್ ನುಡಿಗಳ ಪ್ರಾಬಲ್ಯವೇ ಆವರಿಸಿಕೊಂಡಿತ್ತು. ಈ ನುಡಿಗಳೇ ಆ ಹೊತ್ತಿನ ಶಿಕ್ಷಣ ವಲಯವನ್ನೂ ಆಳುತ್ತಿದ್ದವು. ಇವುಗಳು ಕೇವಲ ನುಡಿಗಳು ಮಾತ್ರವಾಗಿರಲಿಲ್ಲ ಬದಲಾಗಿ ಅಧಿಕಾರ ಕೇಂದ್ರಗಳಾಗಿದ್ದವು. ಸಾಹಿತ್ಯ, ಸಂಸ್ಕೃತಿ, ಶಿಕ್ಷಣ, ಆಡಳಿತ ಹಾಗೂ ಸಂಗೀತ ಕ್ಷೇತ್ರಗಳಲ್ಲಿ ಈ ನುಡಿಗಳದೇ ಕಾರುಬಾರು. ಭಾರತದ ದೇಶಿ ನುಡಿಗಳು ಅಲಕ್ಷಿತಗೊಂಡಿದ್ದವು ಹಾಗೂ ಅವುಗಳಿಗೆ ಯಾವುದೇ ಬಗೆಯ ಭಾವೋಪಯೋಗಿ ಇಲ್ಲವೇ ಲೋಕೋಪಯೋಗಿ ನೆಲೆಗಳಿವೆ ಎನ್ನುವುದನ್ನೂ ಯಾರು ಪರಿಗಣಿಸಿರಲಿಲ್ಲ.

ಇಂಗ್ಲಿಶು ನುಡಿಗೆ ಚಾರಿತ್ರಿಕವಾಗಿ ಅಂಟಿದ ವಸಾಹತು ಮನಸ್ಥಿತಿ, ಆಕ್ರಮಣಶೀಲತೆ, ಏಕಚಕ್ರಾಧಿಪತ್ಯ ಮನೋಭಾವದ ಕಾರಣ, ಈ ನುಡಿ ತನ್ನ



ಕದಂಬ ಬಾವುಗಳನ್ನು ಎಲ್ಲಡೆಯಲ್ಲಿ ಚಾಚಿತು. ಹಾಗೂ ತಾನು ಎಲ್ಲರ ಬದುಕಿನ ಕಾಮಧೇನು ಎಂಬ ಆಶಾಭಾವನೆಯನ್ನೂ ಸಹಜವಾಗಿಯೇ ನಮ್ಮಲ್ಲಿ ಮೂಡಿಸಿತು. ಮುಖ್ಯವಾಗಿ ಯಾವೆಲ್ಲ ದೇಶಗಳನ್ನು ಮೂರನೇ ಜಗತ್ತು ಎಂದು ಕರೆಯಲಾಗಿತ್ತೋ, ಈ ಎಲ್ಲ ದೇಶಗಳು ಇದುವರೆಗೂ ಭಾಷಿಕ ವಸಾಹತುಶಾಹಿ ಯಿಂದ ನಿರ್ವಸಾಹತೀಕರಣಗೊಳ್ಳಲಿಲ್ಲ. ಇದರ ಪರಿಣಾಮವನ್ನು ನಾವು ಇಂದಿಗೂ ನೋಡುತ್ತಿದ್ದೇವೆ. ಅತ್ಯಂತ ಸಂಕೀರ್ಣವಾದ ರಾಜಕೀಯ ಸವಾಲು ಹಾಗೂ ಆರ್ಥಿಕ ಮತ್ತು ಸಾಮಾಜಿಕ ಬಿಕ್ಕಟ್ಟುಗಳನ್ನು ಇಂಗ್ಲಿಶು ನಮ್ಮೆಂದಿಟ್ಟಿದೆ. ಇಂಗ್ಲಿಶಿನಿಂದ ಎದುರಾಗಬಹುದಾದ ಲಾಭ-ನಷ್ಟಗಳ ಪ್ರಶ್ನೆಗಳನ್ನು ಅತೀ ಸರಳವಾಗಿ ಗ್ರಹಿಸಲಾಗಿದೆ. ಈ ನುಡಿಯಿಂದ ಲಭಿಸುವ ಪ್ರಯೋಜನೆ ಮತ್ತು ಲಾಭಾಂಶಗಳನ್ನು ಅರಿಯುವ ಬಗೆಯಲ್ಲಿಯೂ ತಾತ್ವಿಕ ಮತ್ತು ಪ್ರಾಯೋಗಿಕ ಲೋಪಗಳನ್ನು ಕಾಣುತ್ತೇವೆ. ಏಕೆಂದರೆ, ಇಂಗ್ಲಿಶು ಮಾಧ್ಯಮದ ಮೂಲಕ ನಮ್ಮ ಈ ಹೊತ್ತಿನ ಶಿಕ್ಷಣ ಕ್ರಮದಲ್ಲಿ ಆಮೂಲಾಗ್ರ ಬದಲಾವಣೆ ತರುತ್ತೇವೆ ಎನ್ನುವ ನಂಬಿಕೆಯೇ ಅವೈಜ್ಞಾನಿಕ ಮತ್ತು ಅವೈಚಾರಿಕ ವಾಗಿದೆ. ಯಾವುದೇ ಮಗುವಿನಲ್ಲಿ ಅತ್ಯಂತ ಸಹಜವಾಗಿ ಅಂತಸ್ಥವಾಗಿರುವ ನುಡಿ ಕಲಿಕೆ ಮತ್ತು ನುಡಿ ಬಳಕೆಯ ಕಸುವಿನ ಬಗೆಗೆ ಮಾತ್ನಾಡುತ್ತಿಲ್ಲ. ಬದಲಾಗಿ ನುಡಿ ಕಲಿಕೆ ಮತ್ತು ಆ ನುಡಿಯೊಂದನ್ನು ತನ್ನ ಕಲಿಕೆಯ ಮಾಧ್ಯಮವನ್ನಾಗಿ ಅನುಸರಿಸುವಲ್ಲಿ, ಮಗುವೊಂದು ಎದುರಿಸಬಹುದಾದ ಮಾನಸಿಕ ತೊಂದರೆಗಳನ್ನು ಬಗೆಹರಿಸಲು ಏನು ಉಪಾಯ ಗಳನ್ನು ನಾವು ಕಂಡುಕೊಂಡಿದ್ದೇವೆ. ಯಾವ ಇಂಗ್ಲಿಶು ನಮ್ಮೀ ಶಿಕ್ಷಣ ಮಾಧ್ಯಮವಾಗಬೇಕು? ನಮ್ಮ ಗುರಿಗೂ ನಾವು ಆಶಿಸುವ ಇಂಗ್ಲಿಶಿಗೂ ಏನು ಸಂಬಂಧವಿಲ್ಲ. ಜಾಗತಿಕ ಉದ್ಯೋಗ ಮಾರುಕಟ್ಟೆಯಲ್ಲಿ ಅತ್ಯಂತ ಬೇಡಿಕೆಯಲ್ಲಿರುವ ಇಂಗ್ಲಿಶಿಗೂ ನಾವು ಕಲಿಯುವ ಇಂಗ್ಲಿಶಿಗೂ ಯಾವುದೇ ಸಂಬಂಧವಿಲ್ಲ. ಸ್ಥಳೀಯ ಇಂಗ್ಲಿಶಿನ ಮೂಲಕ ಪಡೆಯುವ ಶಿಕ್ಷಣಕ್ಕೂ, ನಮ್ಮ ದೇಶಿ ನುಡಿಗಳ ಮೂಲಕ ಪಡೆಯುವ ಶಿಕ್ಷಣಕ್ಕೂ ಯಾವ ವ್ಯತ್ಯಾಸಗಳೂ ಇಲ್ಲ. ಹಾಗಿದ್ದರೆ, ನಮ್ಮ ಉದ್ದೇಶವೇನು? ನುಡಿಯ ಬಳಕೆಗೆ ಸಂಬಂಧಿಸಿದ ಅಭೀಪ್ಸೆಯೋ? ಇಲ್ಲವೇ ಪ್ರಜಾಸತ್ತಾತ್ಮಕ ಜ್ಞಾನದ ಬಯಕೆಯೋ? ಪ್ರಜಾಪ್ರಭುತ್ವಕ್ಕೆ ಒದಗಿರುವ ಮಿತಿಗಳ ಕಾರಣದಿಂದ, ಪ್ರಜಾಸತ್ತಾತ್ಮಕ ನೆಲೆಯಲ್ಲಿ ಜ್ಞಾನದ ಪ್ರಸಾರವಾದರೂ ಹೇಗೆ ಸಾಧ್ಯ? ಎನ್ನುವ ನಿಲುವನ್ನು ತಾಳಲಾಗಿದೆ. ಇಂಗ್ಲಿಶಿನ ಮೂಲಕ ಪ್ರಜಾಸತ್ತಾತ್ಮಕ ಪರಿಸರವೊಂದು ನೆಲೆಗೊಳ್ಳುವುದು ಸಾಧ್ಯವಾಗುವು ದಾದರೆ, ಈಗಾಗಲೇ ಅಂತಹದೊಂದು ಸಾಮಾಜಿಕ, ರಾಜಕೀಯ ಹಾಗೂ ಆರ್ಥಿಕ ಪ್ರಜಾಸತ್ತಾತ್ಮಕ ಪರಿಸರವೊಂದು ನಿರ್ಮಾಣವಾಗಿರಬೇಕಿತ್ತು. ಯಾಕೆ ಆಗಲಿಲ್ಲ ಎಂಬ ಕೇಳ್ವಿಯೊಂದು ಸಹಜವಾಗಿ ನಮ್ಮಲ್ಲಿ ಮೂಡುತ್ತದೆ. ಯಾವುದೇ ನುಡಿಯೊಂದು ತನ್ನಷ್ಟಕ್ಕೆ ತಾನೇ ಸಮೂಹಗಳನ್ನು ವಿಮೋಚನಗೊಳಿಸುವ ಅಸ್ತ್ರ ವಾಗಿದ್ದರೆ, ಈ ಲೋಕದ ಎಷ್ಟೊಂದು ಸಮೂಹಗಳು ತಾವು ಈಡಾಗಿರುವ ಸಾಮಾಜಿಕ ಬಿಕ್ಕಟ್ಟುಗಳಿಂದ ಈಗಾಗಲೇ ಬಿಡುಗಡೆಯನ್ನು ಪಡೆದಿರುತ್ತಿದ್ದವು. ಇಂಗ್ಲಿಶು ನುಡಿಯ ಸುತ್ತ ನಡೆಯುತ್ತಿರುವ ಚರ್ಚೆಗಳನ್ನು ನಿಗಾಯಿಟ್ಟು ನೋಡಿದರೆ ನಮಗೆ ನಿಚ್ಚಳವಾಗುವ ಸಂಗತಿಯೇನೆಂದರೆ, ಇದೊಂದು ಟ್ರ್ಯಾಪ್! ಇಂಗ್ಲಿಶನ್ನು

## ನಿನಗೆ ನೀನೇ ಗೆಳತಿ...

ಮಹಿಳೆಗೆ ಆರ್ಥಿಕ ಸ್ವಾತಂತ್ರ್ಯ ಬೇಕು
ಎಂದು ಮುಷ್ಟಿಯೆತ್ತಿ ಕೂಗಿದರು
ನವ ಮಹಿಳಾಮಣಿಗಳು
ತಿಂಗಳಿಗೆ ಸಾವಿರ – ಲಕ್ಷ ಎಣಿಸುವ
ಮಹಿಳೆಯರ ದಂಡೇ ಹುಟ್ಟಿತು
ಇದೇನೂ ಸುಲಭದ ಹಾದಿಯಾಗಿರಲಿಲ್ಲ
ಅನ್ನಕ್ಕಾಗಿ ಅಕ್ಷರಕ್ಕಾಗಿ ಉದ್ಯೋಗಕ್ಕಾಗಿ
ಹೊಡೆದಾಡಿದ್ದೇನು ಕಡಿಮೆಯೇ?
ಸಿಕ್ಕಿದರೆ ಉದ್ಯೋಗ ಸಿಕ್ಕಿತೇ ಸ್ವಾತಂತ್ರ್ಯ?
ತಿಂಗಳ ಸಂಬಳ ಕಸಿವ ಗಂಡರೆಷ್ಟೋ....
ದುಡ್ಡಿಗಾಗಿ ಕಣ್ಣಿಡುವ ಬಂಧು ಪುಂಡರೆಷ್ಟೋ...
ಏದುಸಿರ ಮನೆಗೆಲಸ ಆಫೀಸು ತಲುಪುವ ಉಬ್ಬಸ...
ಮನೆಗಾಗಿ ಎಲ್ಲ ಖರ್ಚುಮಾಡಿ
ಬ್ಯಾಂಕ್ ಅಕೌಂಟ್ ಪೂರ್ತಿ ಖಾಲಿ
ಮನೆಯ ಮಮಕಾರ ಹೆಣ್ಣಿಗೆ ಹೆಚ್ಚು
ಭವಿಷ್ಯದೋಚನೆಗಿಲ್ಲ ಸ್ವಲ್ಪ ಹೊತ್ತು

ಸರ್ವಾಧಿಕಾರಿಯದು ಗಂಡಿನ ಮನಸ್ಸು
ಹೊಡೆತ – ಬಡಿತ – ಮಾನಸಿಕ ಹಿಂಸೆ
ಆಕಸ್ಮಿಕ ಶುರುವಾಯ್ತು ಈಕೆ ತತ್ತರ
ಯಾವ ಪ್ರಶ್ನೆಗೂ ಇಲ್ಲ ಅವನ ಉತ್ತರ
ನಂಬಿನೆಚ್ಚಿದ ಪತಿಯೇ ಪರದೈವ
ಎಂದುಕೊಂಡವಳಿಗೀಗ ಮರಣವೇ ಪ್ರಿಯ
ನೇಣೇ , ನಿದ್ದೆಗುಳಿಗೆಯೇ, ಹಾಳುಬಾವಿಯೇ
ಯಾವುದಾದರೂ ಸರಿ
ನನಗೆ ಜೀವನ ಬೇಡ

ಬಾಲ್ಯದ ತುಂಟತನ
ಯೌವನದ ಕನಸು
ಉದ್ಯೋಗ ವಿದ್ಯೆಯಭಿಮಾನ
ಎಲ್ಲ ಮಣ್ಣು ಮುಕ್ಕಿದುವೆಲ್ಲಿ?
ಒಂದು ಗಂಡಿನ ತಿರಸ್ಕಾರಕ್ಕೇ
ನಲುಗಿ ಹೋದೆಯಲ್ಲ ಓ ನನ್ನ ಚೆಲುವೆ !

ಆರ್ಥಿಕ ಸ್ವಾತಂತ್ರ್ಯ ಒಂದೇ ಅಲ್ಲ ಬೇಕಾದ್ದು
ಗಂಡು ಜಗತ್ತಿನ ತಿರಸ್ಕಾರಕ್ಕೆ
ಸೆಡ್ಡು ಹೊಡೆಯುವ ಶಕ್ತಿ
ನೀವ್ ಬೆಳೆಸಿಕೊಳ್ಳಿ
ನೀವು ಬಹು ಅಮೂಲ್ಯ
ನೀವು ಅತಿ ಸುಂದರ
ನೀವು ಪ್ರಕೃತಿಯ ಪ್ರತಿರೂಪ
ಮನೋಲೋಕ ಗಟ್ಟಿಯಿರಲಿ
ಭಾವಲೋಕ ಬಾಗದಿರಲಿ
ಕೀಳರಿಮೆ ಬೇಡವೇ ಬೇಡ
ನಿನಗೆ ನೀನೇ ರಾಣಿ
ಹಿಡಿ ಬದುಕ ಜಾಡ!


ಎಸ್. ಮಾಲತಿ
'ಮಹಾಲಸ ನಿಲಯ', ಜೋಗ ರಸ್ತೆ
ಸಾಗರ – ೫೭೭ ೪೦೧ ಶಿವಮೊಗ್ಗ ಜಿಲ್ಲೆ




ಸಮಾನತೆಯ ಹರಿಕಾರನೆಂದು ಭ್ರಮಿಸಲಾಗಿದೆ. ಹಾಗಿದ್ದರೆ, ಇಂಗ್ಲಿಶಿನಲ್ಲೇ ಉಸಿರಾಡುವ ದೇಶಗಳಲ್ಲಿ ಯಾಕೇ ಅಸಮಾನತೆ ಇನ್ನೂ ಮುಂದುವರೆದಿದೆ? ಆರ್ಥಿಕ ನೀತಿಗಳು ಯಾಕೆ ಕೆಲವೇ ಜನರ ಹಿತಾಸಕ್ತಿಗೆ ಮಾತ್ರ ಪೂರಕವಾಗಿ ನಡೆಯುತ್ತವೆ? ವರ್ಣ ಸಂಘರ್ಷದ ವಿಪರೀತಗಳು ಇನ್ನೂ ಯಾಕೆ ಬೂದಿ ಮುಚ್ಚಿದ ಕೆಂಡದಂತಿವೇ? ಈ ಎಲ್ಲ ಪ್ರಶ್ನೆಗಳಿಗೆ ಸಾಮಾಜಿಕ ಭಾಷಾಶಾಸ್ತ್ರೀಯ ತಿಳಿವಿನಲ್ಲಿ ಪರಿಹಾರಗಳು ಸಿಗುತ್ತವೆ. ಆದರೆ ಅವುಗಳನ್ನು ಒಪ್ಪುವ ವೈಚಾರಿಕ ಸ್ಪಷ್ಟತೆ ನಮಗಿಲ್ಲ. ನುಡಿಯೊಂದನ್ನು ಭಾವನಾತ್ಮಕ ವಿದ್ಯಮಾನವಾಗಿಯೋ? ಇಲ್ಲವೇ ಬದುಕಿನ ಕೇಡು ಎಂದು ಭಾವಿಸುವುದ ರಿಂದಲೋ? ನಮಗೆ ಬೇಕಾದ ಶಿಕ್ಷಣ, ನಮಗೆ ಬೇಕಾದ ನುಡಿಯ ಮೂಲಕ ನೆರವೇರುವುದು ಅತ್ಯಂತ ದುಸ್ತರ.

ಅಸಮಾನತೆ ಎನ್ನುವುದು ಕೇವಲ ಲಂಬಾತ್ಮಕ ಇಲ್ಲವೇ ರೇಖಾತ್ಮಕ ಗೆರೆ ಮಾತ್ರವಲ್ಲ. ಅದೊಂದು, ಅತ್ಯಂತ ಸಂಕೀರ್ಣವಾದ ಜಾಲ (ಸರ್ಕ್ಯೂಟ್) ಮತ್ತು ತಾರತಮ್ಯದ ಸುಳಿಯೂ ಆಗಿದೆ. ಬದುಕಿನ ಯಾವುದೇ ವಿದ್ಯಮಾನವನ್ನು ಕುರಿತು ಯೋಚಿಸಿದರೂ, ಅದ್ಯಾವುದು ಕೂಡ ಒಂದು ಸರ್ವತಂತ್ರ ಸ್ವತಂತ್ರ ವಿನ್ಯಾಸವಲ್ಲ. ಹಾಗೂ ಯಾವ ನುಡಿಯಿಂದಲೂ ಯಾರಿಗೂ ಇದುವರೆಗೂ ವಿಮೋಚನೆಯನ್ನು ಪಡೆಯಲು ಸಾಧ್ಯವಾಗಿಲ್ಲ. ಜಾಗತಿಕ ಆರ್ಥಿಕತೆ ಮತ್ತು ಮಾಹಿತಿ, ಈ ನೆಲೆಗಳು ಬೇರೆ ಬೇರೆ ಭಾಷೆ, ಜನರು ಮತ್ತು ವಸ್ತು ವಿಷಯಗಳೊಂದಿಗೆ ಮುಖಾಮುಖಿ ಯಾಗಿಸುತ್ತವೆ. ಈ ಇಡೀ ಪ್ರಕ್ರಿಯೆಯಲ್ಲಿ ಪ್ರಮುಖ ವಾಗಿರುವುದು ಯಾವುದು? ಜನರೋ? ನುಡಿಯೋ? ಇಲ್ಲವೇ ವಸ್ತುವಿಷಯವೋ? ಇದು ತಾತ್ವಿಕವಾಗಿಯೂ ಪ್ರಾಯೋಗಿಕವಾಗಿಯೂ ಅತ್ಯಂತ ಜಟಿಲವಾದ ಪ್ರಶ್ನೆ. ಹಾಗಾಗಿ ನುಡಿ ಆಯ್ಕೆಯ ಪ್ರಶ್ನೆ ಮಾತ್ರ ಮುಖ್ಯವಲ್ಲ. ಬದಲಾಗಿ ಆಯಾ ನುಡಿಯನ್ನು ನಂಬಿರುವ ಜನರ ಹಿತಾಸಕ್ತಿ, ಅವರ ಭವಿಷ್ಯ ಹಾಗೂ ಅವರಿಗೆ ಬೇಕಾದ ಜ್ಞಾನಗಳ ನಿರ್ವಹಣೆ ಮುಖ್ಯ. ಇಂಗ್ಲಿಶು ಇಲ್ಲವೇ ಕನ್ನಡ ಎರಡೂ ನುಡಿಗಳು ಸದ್ಯದ ಮಟ್ಟಿಗೆ ಈ ಎಲ್ಲ ಸವಾಲು ಗಳನ್ನು ಎದುರಿಸಲು ಇನ್ನೂ ಸಜ್ಜುಗೊಂಡಿಲ್ಲ. ಭಾರತ ಮತ್ತು ಭಾರತದ ಎಲ್ಲ ಭಾಷೆಗಳಿಗೆ ದೃಢವಾದ, ತಾಂತ್ರಿಕವಾಗಿ ಸಜ್ಜುಗೊಂಡ ಭಾಷೆಗಳ ಅವಶ್ಯಕತೆ ಇದೆ. ಈ ಅವಶ್ಯಕತೆಯನ್ನು ಕೇವಲ ಇಂಗ್ಲಿಶಿನ ಮೂಲಕ ಈಡೇರಿಸುವುದು ಸಾಧ್ಯವಿಲ್ಲ. ಸಮೂಹಗಳ ಅಗತ್ಯಗಳನ್ನು ಕೇವಲ ವ್ಯಕ್ತಿಗಳ ಅಗತ್ಯವನ್ನಾಗಿ ಪರಿಭಾವಿಸಿದರೆ, ಯಾವುದೇ ಒಂದು ನುಡಿ ನಮ್ಮೆಲ್ಲ ಬಿಕ್ಕಟ್ಟುಗಳಿಗೆ ಪರಿಹಾರ ಕೊಡುತ್ತದೆ ಎಂಬ ನಂಬಿಕೆಯೇ ತಪ್ಪಾಗುತ್ತದೆ.

ರಾಜಕಾರಣಿಗಳು, ಪತ್ರಕರ್ತರು, ಶಿಕ್ಷಣತಜ್ಞರು, ಸಮುದಾಯ-ಭಾಷಿಕರು ಹಾಗೂ ಇತರೆ ಎಲ್ಲರೂ ಕೂಡ, ನುಡಿ ಮತ್ತು ನುಡಿ ತಂತ್ರಜ್ಞಾನದ ಬಗೆಗಿನ ಜ್ಞಾನ ಹಾಗೂ ಅದರ ಸಾಮರ್ಥ್ಯವನ್ನು ಕುರಿತು ಚಿಂತಿಸುವ ಜರೂರಿದೆ. ಡಿಜಿಟಲ್ ಕ್ರಾಂತಿಗೂ ನುಡಿಗೂ ಹಾಗೂ ಉದ್ಯೋಗಕ್ಕೂ ಮತ್ತು ನುಡಿಗೂ ನೇರವಾದ ನಂಟಸ್ತಿಕೆ ಇದೆಯೇ? ಎಂದು ಕೇಳಿದರೆ, ಬಹುತೇಕ ಉತ್ತರಗಳು ಹೌದು ಎಂದಾಗಿರುತ್ತವೆ. ಆದರೆ ವೈಜ್ಞಾನಿಕವಾಗಿ ಇದನ್ನು ಒಪ್ಪಲು ಸಾಧ್ಯವಿಲ್ಲ. ಏಕೆಂದರೆ ಇದು ಕೇವಲ ಆಯ್ದ ನುಡಿಗಳಿಗೆ ಮಾತ್ರ ಲಭಿಸುವ ಕಸುವಲ್ಲ. ಕಾಲಕಾಲಕ್ಕೆ ನಮ್ಮ ಅಗತ್ಯಗಳನ್ನು ಈಡೇರಿಸುವ, ವೈಚಾರಿಕ ನಿಲುವುಗಳನ್ನು ಕಸಿ ಮಾಡುವ ಪ್ರಕ್ರಿಯೆ ಸಾಮಾಜಿಕ ಹಾಗೂ ಬೌದ್ಧಿಕ ವಿದ್ಯಮಾನಗಳಿಗೆ ಸಂಬಂಧಿಸಿರುತ್ತದೆ. ಈ ವಾಸ್ತವ ಗಳಿಗೆ ಪೂರಕವಾಗಿ ನುಡಿಗಳನ್ನು ಸಜ್ಜುಗೊಳಿಸುವ ಹೊಣೆಗಾರಿಕೆಯನ್ನು ಮರೆಯಬಾರದು. 'ನಾವು ವೈಜ್ಞಾನಿಕ ದೃಷ್ಟಿಯ ಮತ್ತು ವೈಚಾರಿಕ ಬುದ್ಧಿಯ ನೆರವಿನಿಂದ ನಮ್ಮ ನಾಡಿನ ರಾಜಕೀಯ, ಸಾಮಾಜಿಕ ಮತ್ತು ಮತಧಾರ್ಮಿಕ ರಂಗಗಳನ್ನು ಪರಿಶೋಧಿಸದಿದ್ದರೆ ನಮಗೆ ಕೇಡು ತಪ್ಪದು' ಎಂಬ ಕುವೆಂಪು ಅವರ ಮಾತುಗಳು ತಾತ್ವಿಕ ಸ್ಪಷ್ಟತೆ ಮಾತ್ರವಲ್ಲದೇ ಬದುಕಿನ ವಾಸ್ತವಗಳಲ್ಲಿ ನೆಲೆನಿಂತಿರುವ ಗೊಂದಲಗಳ ಬಗೆಗೂ ಎಚ್ಚರವನ್ನು ನೀಡುತ್ತವೆ. ಶಿಕ್ಷಣ ಮಾಧ್ಯಮದ ಪ್ರಶ್ನೆ ನಮಗೇಕೆ ಮುಖ್ಯ? ಅಂದರೆ ಜ್ಞಾನದ ಪ್ರಜಾಸತ್ತಾತ್ಮಕತೆ ಮತ್ತು




ಪ್ರಜಾಸತ್ತಾತ್ಮಕ ಜ್ಞಾನದ ಪರಿಸರವನ್ನು ನಿರ್ಮಿಸುವುದೇ ಮುಖ್ಯವಾದ ಕಾರಣ ಮಾಧ್ಯಮದ ಪ್ರಶ್ನೆಯೂ ಮುಖ್ಯವಾಗುತ್ತದೆ. ಇಂಗ್ಲಿಶು ಮಾಧ್ಯಮದ ಆಯ್ಕೆಯ ಹಿಂದೆ ಹಲವು ಬಗೆಯ ದೃಷ್ಟಿಕೋನ ಗಳಿವೆ. ಸಾಮಾಜಿಕ, ಆರ್ಥಿಕ ಏಳ್ಗೆಗೆ ಸಂಬಂಧಿಸಿದ ಸಂಗತಿಗಳೂ ಈ ಆಯ್ಕೆಯಲ್ಲಿ ಪ್ರಧಾನವಾಗಿವೆ. ಜಾಗತೀಕರಣ, ತಂತ್ರಜ್ಞಾನದ ಹೊಸ ಅವತಾರಗಳ ಪ್ರಭಾವ/ಪರಿಣಾಮಗಳು ಈ ಲೋಕದ ಲಯವನ್ನು ಬದಲಾಯಿಸಿವೆ. ಈ ಪ್ರಕ್ರಿಯೆಗೆ 'ಭಾಷಿಕ ಮಾಧ್ಯಮ' ಅನಿವಾರ್ಯ. ಈ ಅವಕಾಶವನ್ನು ಇಂಗ್ಲಿಶು ನುಡಿ ಆಕ್ರಮಿಸಿಕೊಂಡು, ತನ್ನದಾಗಿಸಿಕೊಂಡಿದೆ. ಹಾಗಾಗಿ, ಇಡೀ ಜಾಗತೀಕರಣ ಪ್ರಕ್ರಿಯೆಯಲ್ಲಿ ಆರ್ಥಿಕ ನೀತಿ, ನಿಲುವುಗಳಿಗೆ ಪೂರಕವಾಗಿ ಇಂಗ್ಲಿಶು ಕಾರ್ಯವನ್ನು ಪೂರೈಸುತ್ತದೆ. ಈ ಕಾರಣದಿಂದಲೇ ಇಂಗ್ಲಿಶು ಜಗತ್ತಿನಾದ್ಯಂತ 'ಎಲ್ಲರಿಗೂ' ಅನಿವಾರ್ಯ ನುಡಿಯಾಗಿ ಪರಿಣಮಿಸಿದೆ. ಸಹಜವಾಗಿಯೇ ಇದು ದ್ವಿತೀಯ ಭಾಷೆಯಾಗಿ ನೆಲೆಗೊಂಡಿದೆ. ಒಂದು ಅಂದಾಜಿನ ಪ್ರಕಾರ ೨೦೫೦ರ ಹೊತ್ತಿಗೆ, ಇಂಗ್ಲಿಶು ಎನ್ನುವುದು ಬದುಕಿನ ಮೂಲಭೂತ ಅವಶ್ಯಕತೆಗಳಲ್ಲಿ ಒಂದಾಗಿರುತ್ತದೆ. ಒಟ್ಟಿನಲ್ಲಿ, ಇಂಗ್ಲಿಶು ಎಂಬುದು ಕೇವಲ ನುಡಿಯಾಗದೇ, ಅದೊಂದು ಸಾಮಾಜಿಕ ವಾಸ್ತವವಾಗಿಯೇ ರೂಪಗೊಳ್ಳುತ್ತದೆ ಎನ್ನಲಾಗಿದೆ. ಈ ಹೊತ್ತಿನ ಜಾಗತೀಕರಣ ಪ್ರಕ್ರಿಯೆಯಲ್ಲಿ 'ಆರ್ಥಿಕ ನೀತಿಗಳ' ಯಶಸ್ಸಿಗೆ ಇಂಗ್ಲಿಶು ನುಡಿಯೇ ಕಾರಣ ಎಂಬ ನಂಬಿಕೆಯೊಂದು ಅತ್ಯಂತ ಬಲವಾಗಿ ಬೇರೂರಿದೆ. ಈ ನುಡಿಗೆ ಇರಬಹುದಾದ 'ಅಧಿಕಾರ' ಎಂತಹದು (ಲಾಂಗ್ವೇಜ್ ಆಫ್ ಪವರ್) ಎಂಬ ಸಂಗತಿಯನ್ನು ನೆಲೆಗೊಳಿಸುವ ಹುನ್ನಾರವನ್ನು ಇದು ಮಾಡುತ್ತಿದೆ. ಚರಿತ್ರೆಯಲ್ಲಿ ಇಂತಹ ಉದಾಹರಣೆ ಗಳಿವೆ. ಲ್ಯಾಟಿನ್, ಸಂಸ್ಕೃತ, ಗ್ರೀಕ್, ಪರ್ಶಿಯನ್ ಮೊದಲಾದ ನುಡಿಗಳು ಮಾತ್ರ 'ಜ್ಞಾನಶಿಸ್ತು'ಗಳನ್ನು ಪ್ರಚುರಪಡಿಸಬಲ್ಲವು ಅನ್ನುವ ನಂಬಿಕೆಯನ್ನು ಹುಟ್ಟು ಹಾಕಿದ್ದವು. ಹಾಗೂ ಅದನ್ನೇ 'ಅಧಿಕಾರ ಕೇಂದ್ರ' ವನ್ನಾಗಿ ಮಾಡಿಕೊಂಡಿದ್ದವು. ಈಗ ಇಂಗ್ಲಿಶು ನುಡಿ ಈ ಹುನ್ನಾರವನ್ನು ಸಮರ್ಥವಾಗಿ ನಿಭಾಯಿಸುತ್ತಿದೆ. ಆದ್ದರಿಂದ ಇಂಗ್ಲಿಶು ಮತ್ತು ಜಾಗತೀಕರಣವನ್ನು ಬೇರ್ಪಡಿಸಿ ನೋಡಲು ಸಾಧ್ಯವಾಗುತ್ತಿಲ್ಲ.

೧೯೯೦ರಿಂದ ಈಚೆಗೆ, ಜಗತ್ತಿನಾದ್ಯಂತ, ರೂಪುಗೊಂಡಿರುವ ಈ ಹೊಸ ಭಾಷಿಕ ವಾಸ್ತವಕ್ಕೆ ಪ್ರತಿಕ್ರಿಯಿಸುವ ಅಗತ್ಯವು ಎದ್ದುಕಾಣುತ್ತದೆ. ವಿಜ್ಞಾನ, ವಾಣಿಜ್ಯದಂತಹ ಪ್ರಮುಖ ವೃತ್ತಿಪರ ವಲಯಗಳಲ್ಲಿ ಇಂಗ್ಲಿಶು ಬೇರೂರಿದೆ. ಹಾಗೂ ಇ-ವಾಣಿಜ್ಯ ಮತ್ತು ಹೊರಗುತ್ತಿಗೆಗೆ ಸಂಬಂಧಿಸಿದ ಎಲ್ಲ ಬಗೆಯ ಚಟುವಟಿಕೆ ಗಳಲ್ಲಿ ಇಂಗ್ಲಿಶು ಮುಖ್ಯ ಪಾತ್ರವನ್ನು ವಹಿಸಿದೆ. ಅದಕ್ಕಿಂತ ಈ ಎಲ್ಲ ಚಟುವಟಿಕೆಗಳು ಇಂಗ್ಲಿಶು ಕೇಂದ್ರಿತ ವಿದ್ಯಮಾನಗಳಾಗಿ ಪರಿಣಮಿಸುತ್ತವೆ. ಪರಿಣಾಮವಾಗಿ ಶೈಕ್ಷಣಿಕ ವಲಯದಲ್ಲಿ ಇದು ತನ್ನನ್ನು ಪ್ರತಿಸ್ಥಾಪಿಸಿ ಕೊಳ್ಳುವ ವಾತಾವರಣವನ್ನು ರೂಪಿಸಿಕೊಂಡಿತು. ಸಹಜ ವಾಗಿ ಪೂರ್ವ ಪ್ರಾಥಮಿಕ ಶಿಕ್ಷಣದಿಂದ ಶುರುವಾಗಿ ಉನ್ನತ ಶಿಕ್ಷಣದವರೆಗೂ 'ಇಂಗ್ಲಿಶು ನುಡಿಯೇ' ಬೇಕು ಎಂಬ ಕೂಗುಗಳು ಎಲ್ಲಡೆ ಎತ್ತಿದ ದನಿಯಲ್ಲಿ ಕೇಳುತ್ತಿವೆ.

ಇಪ್ಪತ್ತೊಂದನೇ ಶತಮಾನದಲ್ಲಿ 'ಇಂಗ್ಲಿಶು' ಎಂಬುದು ಅನಿವಾರ್ಯವಾಗಿ ಪರಿಣಮಿಸಿಬಿಟ್ಟಿದೆ. ಜಾಗತಿಕ ಭಾಷಿಕ ವಾತವರಣದಲ್ಲಿ ಇಂಗ್ಲಿಶು ನುಡಿಯೇ

ಅತ್ಯಂತ ಪ್ರಬಲ ನುಡಿಯಾಗಿ ಎದ್ದುಕಾಣುತ್ತದೆ. ಪರಿಣಾಮವಾಗಿ, ಎರಡು ಪ್ರಮುಖ ಭಾಷಿಕ ನಡೆಗಳು ಇವತ್ತು ನಮ್ಮ ಮೇಲೆ ಸವಾರಿ ಮಾಡುತ್ತಿವೆ.

೧. ಶಿಕ್ಷಣದ ಪ್ರತೀ ಹಂತದಲ್ಲಿ 'ಇಂಗ್ಲಿಶಿ'ನ ಅಸ್ತಿತ್ವವು ದಿನದಿಂದ ದಿನಕ್ಕೆ ತೀವ್ರಗೊಳ್ಳುತ್ತಿದೆ.

೨. ಇತರ ಭಾಷಾ ಮಾಧ್ಯಮವನ್ನು ಸ್ಥಳಾಂತರಿಸಿ, ಆ ಸ್ಥಾನವನ್ನು ತಾನೇ (ಇಂಗ್ಲಿಶು) ಆಕ್ರಮಿಸಿಕೊಳ್ಳುತ್ತದೆ.

ಇಂಗ್ಲಿಶು ನುಡಿಯನ್ನು ಕಲಿಕಾ ಮಾಧ್ಯಮವನ್ನಾಗಿ ಅಳವಡಿಸಿದರೆ, ಇದರಿಂದ ಉಂಟಾಗುವ ಲಾಭ–ನಷ್ಟಗಳನ್ನು ಸಮಪ್ರಮಾಣದಲ್ಲಿಯೇ ಗುರುತಿಸಲಾಗುತ್ತಿದೆ ಮತ್ತು ಟೀಕಿಸಲಾಗುತ್ತದೆ. ಇಂಗ್ಲಿಶನ್ನು ಕಲಿಕೆಯ ಮಾಧ್ಯಮವನ್ನಾಗಿ ಅಳವಡಿಸಿಕೊಳ್ಳುವುದರಿಂದ, ಯಾವುದೇ ಅಪಾಯಕಾರಿ ಸ್ಥಿತಿಗೆ ಈಡಾಗದಿದ್ದರೂ, ಶೈಕ್ಷಣಿಕ ಪ್ರಗತಿಯನ್ನು ಸಾಧಿಸುವಲ್ಲಿ ನಾವು ಕುಂಟಿತಗೊಳ್ಳುತ್ತೇವೆ. ಇದರಿಂದ ಬೌದ್ಧಿಕ–ಸಾಂಸ್ಕೃತಿಕವಾಗಿ ನಾವು ಅಪಾರ ಹಾನಿಗೊಳಗಾಗುತ್ತೇವೆ. ಇಂತಹ ಪರಿಸ್ಥಿತಿಗಳಿಗೆ ಒಳಗಾಗಿರುವ ದೇಶಗಳ ಪಟ್ಟಿಯಲ್ಲಿ ಭಾರತವೂ ಸೇರಿದೆ ಮತ್ತು ಪ್ರಪಂಚದ ಕೆಲವು ಬಡ ರಾಷ್ಟ್ರಗಳಲ್ಲಿ, ಇಂಗ್ಲಿಶಿನಂತಹ ವಿದೇಶಿ ನುಡಿಯನ್ನು, ಶಾಲೆಗಳಲ್ಲಿ ಕಲಿಕೆಯ ಮಾಧ್ಯಮವನ್ನಾಗಿ ಬಳಸುವುದರಿಂದ, ಶೈಕ್ಷಣಿಕ ಸೋಲು ಮತ್ತು ಹೊರಗುಳಿಯುವಿಕೆಗೆ (ಡ್ರಾಪ್‌ಔಟ್) ಇದು ಕಾರಣವಾಗಿರುವುದು. ಈ ಶೈಕ್ಷಣಿಕ ಪರಿಣಾಮವನ್ನು ಎಲ್ಲಡೆ ಅನುಭವಿಸಿದ್ದನ್ನು ಈಗ ನೋಡಬಹುದು. ಇನ್ನೂ ಕೆಲವು ದೇಶಗಳಲ್ಲಿ, ಇಂಗ್ಲಿಶಿನ ಮೂಲಕದ ಕಲಿಕೆ ಸಾಕಷ್ಟು ಗೊಂದಲಗಳನ್ನು ಸೃಷ್ಟಿಸಿದೆ, ಭರವಸೆರಹಿತ ಮನಸ್ಥಿತಿಯನ್ನು ಮಕ್ಕಳಲ್ಲಿ ಏರ್ಪಡಿಸಿದೆ ಹಾಗೂ ಡ್ರಾಪ್‌ಔಟ್ ಪ್ರತಿಶತವೂ ತೀವ್ರಗೊಳ್ಳುತ್ತಿದೆ. ಮತ್ತೇ ಕೆಲವು ದೇಶಗಳಲ್ಲಿ ಅತ್ಯಂತ ಸಮಂಜಸ ತಾತ್ವಿಕ ವಿನ್ಯಾಸಗಳ ಮೂಲಕ ಪರಿಚಯಿಸಿದ ಇಂಗ್ಲಿಶು ಕಲಿಕೆಯ ಮಾಧ್ಯಮವು ಅತ್ಯಂತ ಯಶಸ್ವಿ ಶೈಕ್ಷಣಿಕ ಪ್ರಗತಿಯನ್ನು ಸಾಧಿಸಿದೆ ಹಾಗೂ ಸ್ಥಿರಫಲಿತಾಂಶವನ್ನು ಕಂಡುಕೊಳ್ಳಲು ಸಾಧ್ಯವಾಗಿದೆ. ಎಲ್ಲ ಬಗೆಯ ಪ್ರಗತಿಯನ್ನು ಸಾಧಿಸಿದ ದೇಶಗಳಲ್ಲಿ, ಯುರೋಪಿನ ಭಾಷೆಗಳಾದ ಇಂಗ್ಲಿಶು, ಫ್ರೆಂಚ್ ಹಾಗೂ ಪೋರ್ತಗೀಸ್ ಮೊದಲಾದವು ರಾಜಕೀಯ ತೀರ್ಮಾನಗಳು ಮತ್ತು ಕಾರ್ಯಸಾಧ್ಯತೆಯ ನಿಲುವುಗಳನ್ನು ನೆಲೆಯಾಗಿಸಿಕೊಂಡು ಅಸ್ತಿತ್ವಕ್ಕೆ ಬರುತ್ತವೆ. ಇಲ್ಲಿ ರಾಷ್ಟ್ರದ ಭಾಷಾನೀತಿ ಮತ್ತು ಯೋಜನೆಗಳು ಮಹತ್ವವನ್ನು ಪಡೆಯುತ್ತವೆ. ಇವುಗಳನ್ನು ಅನುಷ್ಠಾನಗೊಳಿಸುವ ಉದ್ದೇಶಗಳು ಸಾಮಾಜಿಕ ಐಕ್ಯತೆ ಹಾಗೂ ಶೈಕ್ಷಣಿಕ ಪ್ರಗತಿಯನ್ನು ಹೊಂದುವುದು ಅವಶ್ಯ. ಈ ನೀತಿ–ನಿರೂಪಣೆಗಳು ತರಗತಿಯಲ್ಲಿ ಹೇಗೆ ಕ್ರಿಯಾತ್ಮಕವಾಗಿರುತ್ತವೆ ಮತ್ತು ಯಾವ ಸ್ವರೂಪದಲ್ಲಿ ಅವುಗಳು ನೆಲೆಗೊಳ್ಳುತ್ತವೆ ಎಂಬುದರ ಮೇಲೆ ಶೈಕ್ಷಣಿಕ ಯಶಸ್ಸು ಮತ್ತು ಸೋಲುಗಳು ನಿಂತಿರುತ್ತವೆ.

ಭಾರತದ ಬಹುಭಾಷಿಕ ಮಾನಸಿಕ ವಿನ್ಯಾಸದೊಳಗೆ (ಮಲ್ಟಿಲಿಂಗ್ವಲ್ ಸೈಕಿ) ಇಂಗ್ಲಿಶು ನುಡಿ ಇನ್ನೂ ಪೂರ್ಣವಾಗಿ ಸೇರ್ಪಡೆಗೊಂಡಿಲ್ಲ. ಅಂದರೆ, ಇಂಗ್ಲಿಶು ಒಂದು ನುಡಿ ಸಮುದಾಯವಾಗಿ ರೂಪುಗೊಂಡಿಲ್ಲ. ಕೇವಲ ಇಂಗ್ಲಿಶಿನ ಬಹಳಷ್ಟು ಜನಪ್ರಿಯ (ದೈನಂದಿನ) ಪದಗಳು ಮಾತ್ರ ನಮ್ಮ ಬಹುಭಾಷಿಕ ವ್ಯಾಪ್ತಿಯೊಳಗೆ ಈಗಾಗಲೇ ಸೇರಿಹೋಗಿವೆ. ಈ ಮೂಲಕ ಬಹುಜನರು ನುಡಿಜಿಗಿತ ಮತ್ತು ನುಡಿಪಲ್ಲಟಗಳು ದಿನದಿನದ ಸಂವಹನದಲ್ಲಿ ಜರಗುತ್ತವೆ. ಅಷ್ಟೆಯಲ್ಲದೇ, ಸಂಸ್ಕೃತ ಹುಟ್ಟು ಹಾಕಿದ್ದ ಧಾರ್ಮಿಕ ಕೇಂದ್ರಿತ ಭಾರತಕ್ಕೆ ಪ್ರತಿಯಾಗಿ ಇಂಗ್ಲಿಶು ಆಧುನಿಕ ನುಡಿಯಾಗಿ, ಔದ್ಯೋಗಿಕತೆ, ಆಧುನಿಕತೆಯ ಸೂಚಕವಾಗಿ ಹಾಗೂ ವೈಜ್ಞಾನಿಕ ಭಾರತವನ್ನು ಪ್ರತಿನಿಧಿಸುವ ಒಂದು ಪ್ರಮುಖ ಮಾನದಂಡವಾಗಿ ಗುರುತಿಸಿಕೊಂಡಿದೆ. ಭಾರತದ ಜನಜೀವನದಲ್ಲಿ ಒಂದು ಸಾಂಸ್ಕೃತಿಕ ವಿದ್ಯಮಾನವಾಗಿ ಇಂಗ್ಲಿಶು ಬೆರೆತುಕೊಂಡಿಲ್ಲ ಹಾಗೂ ಸಾಮಾಜಿಕ ಪ್ರಕ್ರಿಯೆಯ ನಿಲುವುಗಳನ್ನು ಅರಿಯುವಲ್ಲಿ ಇಂಗ್ಲಿಶಿನ ವೈಶಿಷ್ಟ್ಯವೇನು ನಮಗೆ ಬೇಕಾಗುವುದಿಲ್ಲ. ಆದರೆ ಜನಪ್ರಿಯ ಸಂಸ್ಕೃತಿಯ ಕುರುಹುಗಳು ಮಾತ್ರ ಇಂಗ್ಲಿಶಿನಿಂದ ಮೈಪಡೆದಂತೆ ತೋರುತ್ತವೆ. ಬಹುಭಾಷಿಕ ಸನ್ನಿವೇಶದಲ್ಲಾಗಲೀ ಇಲ್ಲವೇ ಬಹುಭಾಷಿಕ ಮಾನಸಿಕ ವಿನ್ಯಾಸದೊಳಗಾಗಲೀ ಇಂಗ್ಲಿಶು ಒಂದು ಕ್ರಿಯಾತ್ಮಕ ಸಂಬಂಧವನ್ನು ಪಡೆದುಕೊಂಡಿಲ್ಲ. ಏನೆಂದರೆ, ಸಾಮಾಜಿಕ ಮತ್ತು ಸಾಂಸ್ಕೃತಿಕ ವಿದ್ಯಮಾನಗಳನ್ನು ಗ್ರಹಿಸುವ, ಅನುಭವಿಸುವ, ಅನುಸಂಧಾನ ಮಾಡುವ ಇಲ್ಲವೇ ಸೃಜನಶೀಲತೆಯ ಅಭಿವ್ಯಕ್ತಿಯ ಮಾಧ್ಯಮವಾಗುವ ಬಗೆಗಳು ಭಾರತದ ದೇಶಿ ನುಡಿಗಳಂತೆ, ಭಾರತದಲ್ಲಿ ಇಂಗ್ಲಿಶಿಗೆ ಸಹಜವಾಗಿ ದಕ್ಕಿರುವುದಿಲ್ಲ. ಆದರೆ ಆಡಳಿತದಲ್ಲಿ, ರಾಜಕೀಯದಲ್ಲಿ ಇಂಗ್ಲಿಶು ಅಧಿಕಾರ ಭಾಷೆಯಾಗಿ ಮೆರೆಯುತ್ತಿರುವ ಕಾರಣ ನಮ್ಮ ಉಜ್ವಲ ಭವಿಷ್ಯಕ್ಕೆ ಇರುವ ಏಕೈಕ ಸಾಧ್ಯತೆಯೆಂದರೆ ಅದು ಇಂಗ್ಲಿಶು ಮಾತ್ರ ಎನ್ನುವ ನಂಬಿಕೆ ನಮ್ಮಲ್ಲಿ ಬೇರೂರಿದೆ. ಸಾಮಾಜಿಕ ಮೇಲ್ಚಲನೆ, ಆರ್ಥಿಕ ಸಬಲೀಕರಣ, ಸಾಂಸ್ಕೃತಿಕ ಒಡೆತನ ಹಾಗೂ ರಾಜಕೀಯ ಅಧಿಕಾರವನ್ನು ಪಡೆಯುವ ಸಾಮರ್ಥ್ಯ ನಮಗೆ ಇಂಗ್ಲಿಶು ಶಿಕ್ಷಣದ ಮೂಲಕ ಸಹಜವಾಗಿ ಲಭಿಸುತ್ತದೆ ಎಂಬ ಭ್ರಮೆ. ಹಾಗೂ ಸಾಮಾಜಿಕ ಕಳಂಕ, ಅಸ್ಪೃಶ್ಯತೆ, ಅಸಮಾನ ಆಚರಣೆಗಳು, ಜಾತಿತಾರತಮ್ಯ, ಧಾರ್ಮಿಕ ಕೋಮುವಾದ, ಲೈಂಗಿಕ ಶೋಷಣೆಗಳು ಮೊದಲಾದ ಅನಿಷ್ಟಗಳಿಂದ ವಿಮೋಚನೆಯನ್ನು ಪಡೆಯಲು ಇಂಗ್ಲಿಶಿನಿಂದ ಸಾಧ್ಯ ಎನ್ನುವ ಅಚಲ ನಂಬಿಕೆಯೊಂದು ನಮ್ಮೊಳಗೆ ನೆಲಸಿದೆ. ಇಂತಹ ಕಣ್ಕಟ್ಟುಗಳಿಂದ ನಮ್ಮ ಶೈಕ್ಷಣಿಕ ನಿರ್ಣಯಗಳು ಮುಂಚೂಣೆಗೆ ಬರುವುದರಿಂದ, ನಾವು ಸೇರುವ ದಡ ಡೆಂಜರಸ್ ಝೋನ್ ಆಗಿರುತ್ತದೆ.




ಬಹುಭಾಷಿಕ ಸನ್ನಿವೇಶದಲ್ಲಿ ಇಂಗ್ಲಿಶಿನಂತಹ ನುಡಿಗೆ ಸಿಗುವ ರಾಜಕೀಯ ಮತ್ತು ಆಡಳಿತಾತ್ಮಕ ಬೆಂಬಲಗಳು ಜನಸಮೂಹಗಳಲ್ಲಿ ಇಲ್ಲಸಲ್ಲದ ಭರವಸೆಗಳನ್ನು ಹುಟ್ಟಿಸುತ್ತವೆ. ನುಡಿಯಾಗಿ ಇಂಗ್ಲಿಶನ್ನು ಕಲಿಯುವುದಕ್ಕೂ ಮತ್ತು ಇಂಗ್ಲಿಶಿನ ಮೂಲಕವೇ ನಮ್ಮ ಬದುಕಿನ ದಾರಿಗಳನ್ನು (ಶಿಕ್ಷಣ) ರೂಪಿಸಿಕೊಳ್ಳುವುದಕ್ಕೂ ವ್ಯತ್ಯಾಸವಿದೆ. ಎಲ್ಲ ನುಡಿಗಳಿಗೂ ನಿಯಂತ್ರಿಸುವ ಹಾಗೂ ವಿಮೋಚನೆ ನೀಡುವ ಆಯಾಮಗಳಿರುತ್ತವೆ. ಸಾಮಾಜಿಕ, ರಾಜಕೀಯ ಅಧಿಕಾರದಿಂದ ನುಡಿಯೊಂದು ಪ್ರಬಲ ಮತ್ತು ಅಧೀನ ಸ್ಥಿತಿಗಳಿಗೆ ಒಳಗಾಗುತ್ತದೆ. ಇವುಗಳ ಸಹಯೋಗದಲ್ಲಿ ಏರ್ಪಡುವ ಸಂಬಂಧಗಳ ಆಧಾರದ ಮೇಲೆ ನುಡಿಗಳು ನಿಯಂತ್ರಣ ಮಾಧ್ಯಮವಾಗಿಯೂ ಮತ್ತು ಬಿಡುಗಡೆಯ ಅಸ್ತ್ರವಾಗಿಯೂ ನೆಲೆಗೊಳ್ಳುವ ಸಾಧ್ಯತೆ ಇರುತ್ತದೆ. ಅಧಿಕಾರ ವಲಯಗಳಲ್ಲಿ ಇಂಗ್ಲಿಶಿಗೆ ಲಭಿಸಿರುವ ಸ್ಥಾನದ ಕಾರಣ, ಭಾರತದ ಬಹುಭಾಷಿಕ ಸನ್ನಿವೇಶದಲ್ಲಿ ಇಂಗ್ಲಿಶು ನುಡಿಯ ದೆಸೆಯಿಂದ ಒಂದು ವಿಶಿಷ್ಟವಾದ ಭಾಷಿಕ ಭಿನ್ನ ಪರಿಸರವೊಂದು ಏರ್ಪಟ್ಟಿದೆ. ಇದು ಶುರುವಾದದ್ದು ಇಂಗ್ಲಿಶು ನುಡಿ ಪ್ರವೇಶದಿಂದ. ೧೮೩೫ ಫೆಬ್ರುವರಿ ೨ರಂದು ಮೆಕಾಲೆ ತನ್ನ ಮಿನಿಟನ್ನು ಸಲ್ಲಿಸಿದನು. ಸಂಸ್ಕೃತ, ಪರ್ಶಿಯನ್ ಮತ್ತು ಅರ್ಯಾಬಿಕ್ ನುಡಿಗಳಿಗೆ ದತ್ತವಾಗಿದ್ದ ಎಲ್ಲ ಬಗೆಯ ಅಧಿಕಾರ ಕೇಂದ್ರವನ್ನು ಇಂಗ್ಲಿಶು ನುಡಿಯು ಆಕ್ರಮಿಸಿಕೊಂಡಿತು. ಈ ಚಾರಿತ್ರಿಕ ಎಪಿಸೋಡನ್ನು ಇಲ್ಲಿ ಕೊಂಚ ವಿಷದೀಕರಿಸುವ ಜರೂರಿದೆ.

ಭಾರತದಲ್ಲಿ ಇಂಗ್ಲಿಶು ಶಿಕ್ಷಣವನ್ನು ಅಧಿಕೃತವಾಗಿ ಪರಿಚಯಿಸಿದ ಸಂಪೂರ್ಣ ಶ್ರೇಯಸ್ಸು/ಅಪಕೀರ್ತಿ



ಥಾಮಸ್ ಬಾಬಿಂಗಟನ್ ಮೆಕಾಲೆ ಅವರಿಗೆ ಸಲ್ಲುತ್ತದೆ. ಹೌದು ಆಡಳಿತಾತ್ಮಕವಾದ ಎಲ್ಲ ಕ್ರಮಗಳು ಮೊದಲಾದದ್ದು, ಆವತ್ತಿನ ಜನರಲ್ ಗವರ್ನರ್, ವಿಲಿಯಂ ಬೆಂಟಿಂಕ್ ಅವರಿಂದ. ಫೆಬ್ರವರಿ ೦೨ರಂದು ೧೮೩೫ರಲ್ಲಿ ಮೆಕಾಲೆ ಸಲ್ಲಿಸಿದ ಈ ಪ್ರಸ್ತಾವನೆಯನ್ನು ಬೆಂಟಿಂಕ್ ಸಮಗ್ರವಾಗಿ ಅಧ್ಯಯನ ಮಾಡಿ, ೦೭ ಮಾರ್ಚ್ ೧೮೩೫ರಂದು ಬೆಂಟಿಂಕ್ ಆಡಳಿತಾತ್ಮಕ ಒಪ್ಪಿಗೆಯನ್ನು ನೀಡಿದನು. ಮೆಕಾಲೆ ಸಲ್ಲಿಸಿದ ಈ ಮಿನಿಟಿನ ಪ್ರಮುಖ ಸಂಗತಿಗಳನ್ನು ಹೀಗೆ ಈ ಕೆಳಗಿನಂತೆ ಸಂಗ್ರಹಿಸಬಹುದು;

೧. ಈಗಾಗಲೇ ಅಧಿಕೃತವಾಗಿ ಅಸ್ತಿತ್ವದಲ್ಲಿರುವ ಆಡಳಿತ ಭಾಷೆ 'ಪರ್ಶಿಯನ್' ಅನ್ನು ಇಂಗ್ಲಿಶು ಸ್ಥಳಾಂತರಿಸಬೇಕು.
೨. ಶಿಕ್ಷಣದ ಎಲ್ಲ ಹಂತದಲ್ಲಿಯೂ ಇಂಗ್ಲಿಶು ಭಾಷೆಯನ್ನು ಕಲಿಕೆಯ ಮಾಧ್ಯಮವನ್ನಾಗಿ ಪರಿಚಯಿಸುವುದು ಕಡ್ಡಾಯ. ಈ ಲೋಕದ ವಿವೇಕಯುತ ದೇಶಗಳು ಸೃಷ್ಟಿಸಿದ ಎಲ್ಲ ಬಗೆಯ ತಿಳಿವು ಮತ್ತು ಬೌದ್ಧಿಕ ಸಂಪತ್ತನ್ನು ಪಡೆದುಕೊಳ್ಳಲು ಇಂಗ್ಲಿಶು ಎಲ್ಲರಿಗೂ ಲಭ್ಯವಾಗಬೇಕು.
೩. ಪಶ್ಚಿಮದ ಜ್ಞಾನವನ್ನು ದೇಶಿ ನುಡಿಗಳಿಗೆ (ವರ್ನ್ಯಾಕುಲರ್ಸ್) ಅನುವಾದಿಸುವ ಬಗೆಗಳು ಆಗಿನ್ನೂ ಸರಿಯಾಗಿ ನೆಲೆಗೊಂಡಿರಲಿಲ್ಲ, ಅವುಗಳು ಪರಿಣಾಮಕಾರಿಯೂ ಆಗಿರಲಿಲ್ಲ. ಮತ್ತು ಭಾರತೀಯರು ಹೊಂದಿದ್ದ ಪಾಶ್ಚಿಮಾತ್ಯ ಜ್ಞಾನ ಹಾಗೂ ವಿಜ್ಞಾನವನ್ನು, ಭಾರತೀಯ ಭಾಷೆಗಳಿಗೆ ಕಸಿ ಮಾಡುವ ಮತ್ತು ಯುರೋಪಿನ ಜ್ಞಾನವನ್ನು ಪ್ರದರ್ಶಿಸುವ ಸಾಮರ್ಥ್ಯವನ್ನು ಹೊಂದುವುದು. ಮುಂದಿನ ಇಪ್ಪತ್ತು ವರುಷಗಳಲ್ಲಿ, ದೇಶಿ ಭಾಷೆಗಳ ಸಾಹಿತ್ಯವನ್ನು ಬೆಳೆಸುವುದಕ್ಕೆ ಇದು ಒತ್ತಾಸೆಯಾಗುತ್ತದೆ.
೪. ಭಾರತೀಯರಿಗೆ ಇಂಗ್ಲಿಶು ಮಾಧ್ಯಮದಲ್ಲಿ ಶಿಕ್ಷಣವನ್ನು ಒದಗಿಸಲಾಗುವುದು. ಇವರು ತಮ್ಮ ದೇಶದ ಜನತೆಯು ಶಿಕ್ಷಣವನ್ನು ಪಡೆಯುವುದಕ್ಕೆ ಕಾಳಜಿ ವಹಿಸಬೇಕಾಗುತ್ತದೆ. ಏಕೆಂದರೆ, ಹೀಗೆ ಇಂಗ್ಲಿಶು ಮೂಲಕ ಶಿಕ್ಷಣವನ್ನು ಪಡೆದವರು, ರಕ್ತ, ಮೈಬಣ್ಣದಲ್ಲಿ ಮಾತ್ರ ಭಾರತೀಯರಾಗಿ, ಅಭಿರುಚಿಯಲ್ಲಿ, ಅಭಿಪ್ರಾಯಗಳಲ್ಲಿ, ನೈತಿಕತೆ ಮತ್ತು ಬೌದ್ಧಿಕವಾಗಿ ಇಂಗ್ಲಿಶುಮಯವಾಗಿರಬೇಕು.

ಅಂತಿಮವಾಗಿ ಮೆಕಾಲೆಯ ಅನಿಸಿಕೆ ಏನೆಂದರೆ, ಪಶ್ಚಿಮ ಯುರೋಪಿನ ಭಾಷೆಗಳು ರಶಿಯಾವನ್ನು ನಾಗರಿಕಗೊಳಿಸಿದವು. ಹಿಂದುಗಳಿಗೂ (ಭಾರತೀಯರಿಗೂ) ಈ ಭಾಷೆಗಳು ಇದನ್ನೇ ಮಾಡುತ್ತವೆ ಎನ್ನುವುದರಲ್ಲಿ ನನಗೆ (ಮೆಕಾಲೆಗೆ) ಯಾವುದೇ ಅನುಮಾನವಿಲ್ಲ. ಒಟ್ಟಿನಲ್ಲಿ ಮೆಕಾಲೆ ಪ್ರಕಾರ, ಭಾರತದಲ್ಲಿ ಇಂಗ್ಲಿಶು ಶಿಕ್ಷಣವನ್ನು ಪರಿಚಯಿಸುವುದರ ಹಿಂದಿನ ಇಡೀ ಉದ್ದೇಶ ಕೇವಲ ಪಠ್ಯಕ್ರಮ ಮತ್ತು ಪಠ್ಯಪುಸ್ತಕಗಳ ಮೂಲಕ ಈಸ್ಟ್ ಇಂಡಿಯಾ ಕಂಪನಿಗೆ ಅಧೀನಗೊಳಿಸುವುದಷ್ಟೆಯಲ್ಲ ಬದಲಾಗಿ ಭಾರತೀಯರಲ್ಲಿ ಸುಶಿಕ್ಷಿತವಾದ ಸಾಂಸ್ಕೃತಿಕ ಪರಿವರ್ತನೆಯನ್ನು ತರುವುದಾಗಿತ್ತು. ಈ ಪರಿವರ್ತನೆಯ ಲಾಭವು ಬ್ರಿಟಿಶರಿಗೆ ಮಾತ್ರ ದಕ್ಕಬೇಕು ಎಂಬ ಒಳಜೆಂಡಾ ಇಲ್ಲಿ ಕೆಲಸ ಮಾಡಿದೆ. ಮೆಕಾಲೆಯ ಮಿನಿಟ್ ಸಲ್ಲಿಸುವ ೪೩ ವರುಷಗಳ ಮೊದಲೇ ಈಸ್ಟ್ ಇಂಡಿಯಾ ಕಂಪನಿಯ ಅಧಿಕಾರಿ ಕೆಲವು ಜನರು ಭಾರತೀಯರ ಬಗೆಗೆ ಇದೇ ದೃಷ್ಟಿಕೋನವನ್ನೇ ಹೊಂದಿದ್ದರು. ಈ ಕಂಪನಿಗಳು ಸಂಪೂರ್ಣ ಸಾಮ್ರಾಜ್ಯಶಾಹಿ ಅಧಿಕಾರವನ್ನು ಹೊಂದುವ ಮೊದಲೇ, ಇಂತಹ ಭಾಷಿಕ-ರಾಜಕೀಯ ಯಜಮಾನಿಕೆಯನ್ನು ಹೊಂದುವ ಮನಸ್ಥಿತಿಯಲ್ಲಿದ್ದವು.

ಮೆಕಾಲೆ ತನ್ನೀ ಮಿನಿಟಿನಲ್ಲಿ ಚರ್ಚಿಸಿದ ಎಲ್ಲ ಸಂಗತಿಗಳೂ ಇವತ್ತು ಬಹುತೇಕವಾಗಿ 'ಸಮಾಜಮುಖಿ' ನಿಲುವಿನಂತೆ ಕಾಣುತ್ತವೆ. ಒಂದು ಚಾರಿತ್ರಿಕ ವಿದ್ಯಮಾನದ ಹಿಂದಿನ ಗುರಿಗಳು ಕಾಲ ದೇಶಕ್ಕೆ ಅನುಗುಣವಾಗಿ ತಮ್ಮ ಮೂಲಭೂತ ಆಶಯಗಳನ್ನು ಬದಲಾಯಿಸಿಕೊಂಡು, ನಮ್ಮ ಇವತ್ತಿನ ತುರ್ತುಗಳನ್ನು ಈಡೇರಿಸಿಕೊಳ್ಳಲು ಒತ್ತಾಸೆಯಾಗುತ್ತವೆ ಎನ್ನುವ ನಂಬಿಕೆಗೆ ಕಾರಣವಾಗಿರುವುದೇ ವಿಚಿತ್ರ ಬೆಳವಣಿಗೆ. ಅದಕ್ಕಾಗಿಯೇ ಇಂಗ್ಲಿಶು ನಮ್ಮ ಎಲ್ಲ ಬಗೆಯ ಸಾಮಾಜಿಕ, ರಾಜಕೀಯ, ಆರ್ಥಿಕ ಹಾಗೂ ಶೈಕ್ಷಣಿಕ ಬಿಕ್ಕಟ್ಟುಗಳನ್ನು ನಿಭಾಯಿಸಿಕೊಳ್ಳಲು ದೊರಕಿರುವ ಆತ್ಯಂತಿಕ ಮಾನದಂಡವೆಂದು ಯೋಚಿಸಲಾಗುತ್ತದೆ. ದಿಟದಲ್ಲಿ ಇಂಗ್ಲಿಶು ಇಷ್ಟೊಂದು ಪ್ರಗತಿಪರ ಹಾಗೂ ಪ್ರಜಾಸತ್ತಾತ್ಮಕ ಆಶಯಗಳನ್ನು ಮೈಗೂಡಿಸಿಕೊಂಡಿದೆಯೇ? ಎನ್ನುವ ಪ್ರಶ್ನೆಯನ್ನು ನಾವು ಕೇಳುವುದೇ ಇಲ್ಲ. ಭಾಷಿಕ ಮತ್ತು ಶೈಕ್ಷಣಿಕ ಕುರುಡುತನದ ಕಾರಣ ಇಂತಹ ನಂಬಿಕೆಗಳು ಯಥೇಚ್ಚವಾಗಿ ಜನರಲ್ಲಿ ಒಡಮೂಡುತ್ತವೆ. ಇಂತಹ ಬೆಳವಣಿಗೆಯನ್ನು ಪ್ರಭುತ್ವ ತನ್ನ ರಾಜಕೀಯ ಉದ್ದೇಶಗಳನ್ನು ಈಡೇರಿಸಿಕೊಳ್ಳಲು ಇಂತಹ ನಿಲುವುಗಳನ್ನು ಅಸ್ತ್ರಗಳನ್ನಾಗಿ ರೂಪಿಸಿಕೊಳ್ಳುತ್ತದೆ. ಬಹುಸಂಖ್ಯಾತರ ಶೈಕ್ಷಣಿಕ, ಔದ್ಯೋಗಿಕ ಆಶೋತ್ತರಗಳನ್ನು ನೆರವೇರಿಸಲು ಇಂಗ್ಲಿಶಿನಿಂದ ಮಾತ್ರ ಸಾಧ್ಯ ಎನ್ನುವ ನಂಬಿಕೆಯೇ ಅವೈಜ್ಞಾನಿಕವಾದದ್ದು. ಯಾವುದೇ ವಿದ್ಯಮಾನಕ್ಕೆ ಜನಪರ ಏಳ್ಗೆಯ ಆಯಾಮವನ್ನು ಲೇಪಿಸುವುದರ ಮೂಲಕ ಅದನ್ನು ಸಲೀಸಾಗಿ ಜಾರಿಗೊಳಿಸಬಹುದು. ನೋಟು ಅಮಾನ್ಯೀಕರಣದ ಸನ್ನಿವೇಶದಲ್ಲಿಯೂ ಇಂತಹದೇ ಜನಪರವಾದ ಆಯಾಮವನ್ನು ಲೇಪಿಸಿ, ಆ ನಿಲುವನ್ನು ಕ್ರಾಂತಿಕಾರಕವೆಂದು ಹಬ್ಬಿಸಲಾಯಿತು. ಅಂದರೆ, ರಾಜಕೀಯ ಪ್ರೇರಿತ ನಿಲುವುಗಳನ್ನು ಮುಗ್ದವಾಗಿ ನಂಬುವ ಮನಸ್ಥಿತಿಯಿಂದ ನಾವು ಬಿಡುಗಡೆ ಪಡೆಯದೇ ನಮ್ಮ ಬದುಕಿನ ನಿರ್ಣಯಗಳನ್ನು ಕೈಗೊಳ್ಳುವುದಕ್ಕೆ ನಮಗೆ ಸ್ವಾತಂತ್ರ್ಯವಿಲ್ಲ. ನಮ್ಮ ಆಯ್ಕೆಯ ಸ್ವಾತಂತ್ರ್ಯ ಮತ್ತು ಹಕ್ಕುಗಳ ಬಗೆಗೆ ನಾವು ತಲೆಕೆಡಿಸಿಕೊಳ್ಳುವುದಿಲ್ಲ ಬದಲಾಗಿ ಪ್ರಭುತ್ವ ಒಡ್ಡುವ ಇಂತಹ ಆಮಿಷಗಳಿಗೆ ಬಲಿಯಾಗಿ ಅದುವೇ ಸರಿಯಾದದ್ದು ಎಂದು ಬಲವಾಗಿ ನಂಬುತ್ತೇವೆ. ಬಡವರಿಗೆ ಉಚಿತ ಅಕ್ಕಿ ಕೊಡುವುದು ಹಾಗೂ ಮಧ್ಯಾಹ್ನದ ಬಿಸಿಯೂಟವನ್ನು ಕೊಡುವುದು ಸರಿಯಾದ ನಿಲುವಲ್ಲ ಎಂದು ಹೇಳುವವರಿಗೆ, ಇಂಗ್ಲಿಶು ಮೂಲಕ ಶಿಕ್ಷಣ ಉಚಿತವಲ್ಲ ಎಂದು ತೋರುವುದಿಲ್ಲ ಕಾರಣ ಇವೆರಡನ್ನೂ ಬೇರೆ ಬೇರೆ ವಿದ್ಯಮಾನಗಳನ್ನಾಗಿ ನೋಡಲಾಗುತ್ತದೆ. ಬಿಸಿಯೂಟ ಮತ್ತು ಬಡವರಿಗೆ ಉಚಿತ ಅಕ್ಕಿ ಕೊಡುವುದು ಜನರನ್ನು ಸೋಮಾರಿಗಳನ್ನಾಗಿಸಿದರೆ, ಇಂಗ್ಲಿಶು ಬಿಪಿಓ, ಬಹುರಾಷ್ಟ್ರ ಕಂಪನಿಗಳು, ಬಂಡವಾಳಶಾಹಿಗಳು ಹೂಡುವ ಬಂಡವಾಳವನ್ನು ಇಮ್ಮಡಿಸುವ ಕೂಲಿಗಳಾಗಿ ಇಲ್ಲವೇ ಗುಲಾಮರಾಗಿ ಜೀವನದುದ್ದಕ್ಕೂ ಬದುಕಬೇಕಾಗುತ್ತದೆ. ಒಂದು ಕಾಲದಲ್ಲಿ ವೈಚಾರಿಕ ವಿನ್ಯಾಸಗಳು ನಮಗೆ ದೊರಕಿದ್ದು ಇಂಗ್ಲಿಶಿನ ಮೂಲಕವೇ ಎನ್ನಲಾಗುತ್ತದೆ. ಪರಿಣಾಮವಾಗಿ ಭಾರತದಲ್ಲಿ ಸಾಮಾಜಿಕ-ಸಾಂಸ್ಕೃತಿಕ-ರಾಜಕೀಯ ಪಲ್ಲಟಗಳು ಏರ್ಪಟ್ಟವೆ. ಕುವೆಂಪು ಮೊದಲಾದವರು ಇದನ್ನೇ ಹೇಳಿಕೊಂಡಿದ್ದಾರೆ. ಹಾಗಾಗಿ ಇಂಗ್ಲಿಶು ಎನ್ನುವುದು ಒಂದು ವಿಮೋಚನಾ ಶಕ್ತಿಯೆಂದು ಬಣ್ಣಿಸಲಾಗುತ್ತದೆ. ದಿಟ, ಇಂಗ್ಲಿಶಿನ ಪ್ರಾಮುಖ್ಯತೆಯನ್ನು ಗುರುತಿಸಬೇಕಿರುವುದು, ಧಾರ್ಮಿಕ ಹಿತಾಸಕ್ತಿಗಳ ಕಪಿಮುಷ್ಠಿಯಿಂದ ಶಿಕ್ಷಣವನ್ನು ಬಿಡುಗಡೆಗೊಳಿಸಿ, ಅದನ್ನು ಸಾರ್ವತ್ರಿಕಗೊಳಿಸಿದರು. ಈ ನಿಲುವಿನ ಹಿಂದಿನ ಉದ್ದೇಶವೂ ಕೂಡ ರಾಜಕೀಯ ಪ್ರೇರಿತವಾಗಿತ್ತು. ಶಿಕ್ಷಣವನ್ನು ಪಡೆಯುವ ಅವಕಾಶಗಳು ತೆರೆದುಕೊಂಡವು ಸರಿ ಆದರೆ ನಾವು ಎಲ್ಲ ಬಗೆಯ ಅನಿಷ್ಟಗಳಿಂದ ಬಿಡುಗಡೆ ಪಡೆಯಲು ಸಾಧ್ಯವಾಗಲಿಲ್ಲ. ವಸಾಹತುಶಾಹಿ ಪ್ರಾಬಲ್ಯಕ್ಕೆ ಒಳಗಾಗಿದ್ದ ನಮಗೆ ಕೇವಲ ಇಂಗ್ಲಿಶಿನ ಮೂಲಕ ಬಿಡುಗಡೆ ಸಿಗಲಿಲ್ಲ. ಇದರಲ್ಲಿ ಹಲವು ಸಂಗತಿಗಳು ಸೇರಿಕೊಂಡಿವೆ. ಇದನ್ನು ಕಪ್ಪು ಬಿಳಿಪಿನ ಸ್ವರೂಪದಲ್ಲಿ ಬಿಡಿಸಿ ನೋಡಲು ಸಾಧ್ಯವಿಲ್ಲ. ಏಕೆಂದರೆ, ಸಂಸ್ಕೃತ, ಅರ್‍ಯಾಬಿಕ್ ಮತ್ತು ಪರ್ಶಿಯನ್ ನುಡಿಗಳ ಪ್ರಾಬಲ್ಯದಿಂದ ನಮ್ಮ ಮೇಲೆ ಸವಾರಿ ಮಾಡುತ್ತಿದ್ದ ಮೇಲ್ಜಾತಿ ಸಮೂಹಗಳು ಇಂಗ್ಲಿಶು ನುಡಿಗೆ ಪಲ್ಲಟಗೊಂಡವು. ಇಂಗ್ಲಿಶು ನುಡಿಯನ್ನೂ ಕೂಡ ಇವರು ಶೋಷಣೆಯ

ಅಸ್ತ್ರವನ್ನಾಗಿ ಬಳಸಿಕೊಂಡರು. ಹಾಗಾಗಿ ನಮ್ಮ ಬಿಡುಗಡೆಗೆ ಇರುವ ದಾರಿ ಕೇವಲ ಸಂವಿಧಾನ ಮಾತ್ರವೇ ಹೊರತು ಯಾವುದೇ ಒಂದು ನುಡಿಯಲ್ಲ. ಏಕೆಂದರೆ ಇಂಗ್ಲಿಶು ಅಥವಾ ಇಂತಹ ಯಾವುದೇ ನುಡಿ ನಮಗೆ ಖಾಯಂ ಪರಿಹಾರವನ್ನು ಒದಗಿಸಲಾರದು. ಸಂವಿಧಾನದ ಬೆಂಬಲದಿಂದ ಮಾತ್ರ ಖಾಯಂ ಪರಿಹಾರಗಳನ್ನು ಕಂಡುಕೊಳ್ಳಲು ಸಾಧ್ಯ. ಆದರೆ ರಾಜಕೀಯ ಪರಿಸ್ಥಿತಿ ಮಾತ್ರ ನಮ್ಮ ಸ್ವಾತಂತ್ರ್ಯ ಮತ್ತು ಹಕ್ಕುಗಳನ್ನು ಊನಗೊಳಿಸದಿದ್ದರೆ ಸಾಕು.

ಇನ್ನೂ ಕೆಲವು ಮಹತ್ವದ ಸಂಗತಿಗಳನ್ನು ಇಂಗ್ಲಿಶಿನ ಜೊತೆಗೆ ಜೋಡಿಸಲಾಗುತ್ತದೆ. ಸಾಮಾಜಿಕ – ಆರ್ಥಿಕ – ರಾಜಕೀಯ ಅಸಮಾನತೆಯನ್ನು ಮೀರಬಹುದು ಹಾಗೂ ಸಾಮಾಜಿಕ ಮೇಲ್ಚಲನೆಗೆ ಯಾವುದೇ ಬಿಕ್ಕಟ್ಟುಗಳು ಇರುವುದಿಲ್ಲ ಎನ್ನಲಾಗುತ್ತದೆ. ಈ ವಿನ್ಯಾಸ ಇಂಗ್ಲಿಶು ನುಡಿಯೊಳಗೆಯೇ ಅಂತಸ್ಥವಾಗಿದೆ ಎಂದೇ ನಂಬಲಾಗಿದೆ. ದೃಷ್ಟಿಕೋನಗಳನ್ನು ರೂಪಿಸುವ ಹುನ್ನಾರಗಳು ಇಲ್ಲಿ ಕೆಲಸ ಮಾಡುತ್ತವೆ. ಹಾಗಾಗಿ ಇಂಗ್ಲಿಶು ನುಡಿ, ಎಲ್ಲ ರೀತಿಯ ಅನಿಷ್ಟಗಳಿಂದ ನಮ್ಮನ್ನು ವಿಮೋಚನೆಗೊಳಿಸುತ್ತದೆ ಎನ್ನುವ ಅಪನಂಬಿಕೆಗೆ ನಾವು ಈಡಾಗಿದ್ದೇವೆ. ಹಾಗಿದ್ದರೆ, ಇಂಗ್ಲಿಶು ಮಾತ್ನಾಡುವ ದೇಶಗಳಲ್ಲಿಯೇ ಯಾಕೇ ಜನಾಂಗಗಳ (ಎತ್ನಿಕ್ ಡಿವೈಡ್) ಆಧಾರದ ಮೇಲೆ ಜನರನ್ನು ಬೇರ್ಪಡಿಸಲಾಗಿದೆ. ಇದೆಲ್ಲವು ಇಂದಿಗೂ ಕೂಡ ನಮ್ಮ ಸುತ್ತಲು ಇಂಗ್ಲಿಶಿನ ಮೂಲಕವೇ ನಡೆಯುತ್ತಿದೆ. ಅಷ್ಟೆಯಲ್ಲದೇ ಡಿಜಿಟಲ್ ಡಿವೈಡಿಗೂ ಕೂಡ ಇಂಗ್ಲಿಶು ಕಾರಣವಾಗಿದೆ. ಆದರೆ ಈ ಕಂದಕವನ್ನು ಮೀರಲು ಸಾಧ್ಯವಾಗುವುದು ಇಂಗ್ಲಿಶಿನಿಂದಲೇ ಎಂಬ ವಾದಗಳು ಬಲವಾಗಿವೆ. ಇಂಗ್ಲಿಶಿನ ಬಗೆಗಿನ ಇಂತಹ ಅಪಕಲ್ಪನೆಗಳೇ ಇದನ್ನು ಜಗತ್ತಿನ ಅತ್ಯಂತ ಪ್ರಬಲ ನುಡಿಯನ್ನಾಗಿಸಲು ಒತ್ತಾಸೆಯಾಗಿವೆ. ರಾಜಕೀಯ ಪ್ರಾಬಲ್ಯ ಮತ್ತು ಅಧಿಕಾರವು ಯಥೇಚ್ಛವಾಗಿ ಇಂಗ್ಲಿಶಿಗೆ ಸಿಕ್ಕಿರುವುದು ಕೂಡ ಈ ನುಡಿಯ ಪ್ರಾಬಲ್ಯಕ್ಕೆ ಕಾರಣ. ಇವತ್ತು ಜಗತ್ತಿನಾದ್ಯಂತ ಒಂದು ವಿದ್ಯಮಾನವಾಗಿ ಇಂಗ್ಲಿಶು ಹರಡಿಕೊಂಡಿದೆ. ಅಷ್ಟೇ ವ್ಯಾಪಕವಾಗಿ ಇಂಗ್ಲಿಶನ್ನು ಜಾಗತಿಕ ಸಂಪರ್ಕ ನುಡಿಯನ್ನಾಗಿ ಒಪ್ಪಿಕೊಳ್ಳಲಾಗಿದೆ. ಇಲ್ಲವಾದಲ್ಲಿ, ಇದನ್ನು ವಿಜ್ಞಾನ ಭಾಷೆಯನ್ನಾಗಿಯೂ, ಅಂತರಾಷ್ಟ್ರ ಮಟ್ಟದ ಶಿಕ್ಷಣ ಮಾಧ್ಯಮವನ್ನಾಗಿಯೂ ಹಾಗೂ ಅಂತರಾಷ್ಟ್ರೀಯ ಸಹಕಾರವನ್ನು ರೂಪಿಸುವ ನುಡಿಯೆಂದೂ ಇಂಗ್ಲಿಶನ್ನು ಸ್ವೀಕರಿಸಿದ್ದಾರೆ. ಎರಡು ಭಿನ್ನ ನುಡಿ ಸಮುದಾಯಗಳು ಪರಸ್ಪರ ಭೇಟಿಯಾದರೆ ಬಹುತೇಕವಾಗಿ ಇಂಗ್ಲಿಶನ್ನು ತಮ್ಮ ಸಂವಹನಕ್ಕೆ ಮಾಧ್ಯಮವನ್ನಾಗಿ ಬಳಸಿಕೊಳ್ಳುತ್ತಾರೆ. ಜಾಗತೀಕರಣ ಇಂಗ್ಲಿಶಿನ ಈ ಪ್ರಾಬಲ್ಯವನ್ನು ಮತ್ತಷ್ಟು ತೀವ್ರಗೊಳಿಸಿದೆ. ಆದ್ದರಿಂದ ಇಂಗ್ಲಿಶನ್ನು ಅತ್ಯಂತ ಅವಶ್ಯಕ ಸಂವಹನ ಸಾಧನವೆಂದೂ ಬಣ್ಣಿಸಲಾಗಿದೆ. ಈ ಕಾರಣದಿಂದಲೇ ಇವತ್ತು ಜಗತ್ತಿನಾದ್ಯಂತ ಇಂಗ್ಲಿಶು ಮಾಧ್ಯಮದ ಬೇಡಿಕೆ ಅನಿವಾರ್ಯವಾಗಿದೆ. ಆದರೆ ಈ ಬೇಡಿಕೆ ಉನ್ನತ ಶಿಕ್ಷಣಕ್ಕೆ ಮಾತ್ರ ಸಂಬಂಧಿಸಿರುವುದು ಗಮನಾರ್ಹ. ಆದರೆ ಕರ್ನಾಟಕದಲ್ಲಿ ಈಗ ಬೇಡಿಕೆ ಇರುವುದು ಪ್ರಾಥಮಿಕ ಶಿಕ್ಷಣ ಮಾಧ್ಯಮವನ್ನಾಗಿ ಅನ್ನುವುದು ವಿಶೇಷ. ಉನ್ನತ ಶಿಕ್ಷಣದ ಸಂದರ್ಭದಲ್ಲಿ ಇಂಗ್ಲಿಶಿನ ಪಾತ್ರವನ್ನು ಹಲವು ಬಗೆಯಲ್ಲಿ ವಿಶ್ಲೇಷಿಸುವುದಕ್ಕೆ ಸಾಧ್ಯವಿದೆ. ಇದೊಂದು ಬೇರೆ ಸ್ವರೂಪದ ಚರ್ಚೆಯಾಗಿರುವುದರಿಂದ ಇಲ್ಲಿ ಇದಕ್ಕೆ ಹೆಚ್ಚಿನ ಅವಕಾಶವಿಲ್ಲ.

ಸಾಮಾಜಿಕ ಕ್ರಾಂತಿಗೆ ಬೇಕಾಗಿರುವುದು ಇಂಗ್ಲಿಶು ನುಡಿಯಲ್ಲ ಬದಲಾಗಿ ವೈಚಾರಿಕ ವಿನ್ಯಾಸಗಳು, ಬೌದ್ಧಿಕ ಹೊಣೆಗಾರಿಕೆ ಹಾಗೂ ವೈಜ್ಞಾನಿಕ ಮನಸ್ಥಿತಿ. ಈ ಎಲ್ಲ ಬೌದ್ಧಿಕ ಪರಿಕರಗಳು ಸಜ್ಜುಗೊಂಡದ್ದು ಇಂಗ್ಲಿಶಿನಲ್ಲಿ ಅಲ್ಲ. ಜರ್ಮನ್, ಫ್ರೆಂಚ್, ಇಟಾಲಿಯನ್, ಮೊದಲಾದ ನುಡಿಗಳಲ್ಲಿ ಎನ್ನುವುದು ಗಮನಾರ್ಹ. ಹಾಗಾದರೆ, ನಮ್ಮ ಶಿಕ್ಷಣ ಮಾಧ್ಯಮವನ್ನು ಈ ಕೆಲವು ನುಡಿಗಳ ಮೂಲಕ ಅಳವಡಿಸಿಕೊಳ್ಳಲು ಸಾಧ್ಯವೇ? ಇದೊಂದು ಅಧಿಕ ಪ್ರಸಂಗ ಅನ್ನಿಸಬಹುದು. ಆದರೆ ಇಂಗ್ಲಿಶಿನ ಮೂಲಕ ಪ್ರಾಥಮಿಕ ಕಲಿಕೆ ಎನ್ನುವುದು ಕೂಡ ಇಂತಹದೇ ಅವೈಜ್ಞಾನಿಕ ನಡೆಯಾಗಿದೆ. ಏಕೆಂದರೆ ಪಠ್ಯಕ್ರಮ ಮತ್ತು ಪಠ್ಯವಸ್ತುಗಳ ಬದಲಾಗಿ ಮಾಧ್ಯಮದ ಪ್ರಶ್ನೆಯೇ ಯಾಕೆ ಇಷ್ಟೊಂದು ತೀವ್ರಗೊಂಡಿದೆ. ಖಾಸಗಿ ಶಾಲೆಗಳಲ್ಲಿ ಇಂಗ್ಲಿಶು ಮಾಧ್ಯಮವಿದೆ ಎನ್ನುವುದು ಕೂಡ ಒಂದು ಹುಸಿನಂಬಿಕೆ. ಕಲಿಕೆಯ ಪ್ರಕ್ರಿಯೇ ನಡೆಯುವುದು ಮಾತ್ರ ಕನ್ನಡದಲ್ಲಿಯೇ ಇದರಲ್ಲಿ ಯಾವುದೇ ಅನುಮಾನವಿಲ್ಲ. ಮಾಧ್ಯಮ ಎಂದರೇನು? ಅದು ತಿಳಿವಿಗೆ ಸಂಬಂಧಿಸಿದ್ದೋ? ಇಲ್ಲವೇ ಮಾಹಿತಿಗೆ ಸಂಬಂಧಿಸಿದ್ದೋ? ಅನ್ನುವ ಗೊಂದಲದೊಳಗೆ ನಾವು ಸಿಲುಕಿದ್ದೇವೆ. ಇಂಗ್ಲಿಶು ನುಡಿ ಕಲಿಕೆಗೆ ಸಂಬಂಧಿಸಿದ ಸಮಸ್ಯೆಗಳನ್ನು ಬಗೆಹರಿಸಿಕೊಳ್ಳುವ ಬಗೆಗೆ ನಾವು ಅತ್ಯಂತ ಗಂಭೀರವಾಗಿ ಯೋಚಿಸುವ ಅವಶ್ಯಕತೆಯಿದೆ. ಭಾರತದ ಸನ್ನಿವೇಶದಲ್ಲಿ ಶಿಕ್ಷಣ ಮಾಧ್ಯಮಕ್ಕೂ ಹಾಗೂ ನುಡಿ ಕಲಿಕೆಗೂ ನಡುವೆ ಯಾವುದೇ ವ್ಯತ್ಯಾಸಗಳಿಲ್ಲ. ಹಾಗಾಗಿ ಇಂಗ್ಲಿಶು ಮಾಧ್ಯಮದ ಬೇಡಿಕೆಗಳು ಅತೀ ಸುಲಭವಾಗಿ ಮುಂಚೂಣೆಗೆ ಬರುತ್ತವೆ. ಮಾಧ್ಯಮದ ಸವಾಲುಗಳಿರುವುದು ಪಠ್ಯದ ವಿಷಯವನ್ನು ನಮ್ಮ ಬದುಕಿನ ತಿಳಿವನ್ನಾಗಿ ರವಾನಿಸುವ, ವಿಶ್ಲೇಷಿಸುವ ಹಾಗೂ ವಿದ್ಯಾರ್ಥಿಯೊಳಗೆ ಕ್ರಿಟಿಕಲ್ ದೃಷ್ಟಿಕೋನಗಳನ್ನು ನೆಲೆಗೊಳಿಸುವ ಬಗೆಗಳಲ್ಲಿವೆ. ಆದರೆ ನುಡಿ ಕಲಿಕೆಯ ಸವಾಲುಗಳಿರುವುದು ವಿದ್ಯಾರ್ಥಿಗಳಲ್ಲಿ ಮಾತಿನ ಕಸುವನ್ನು ನೆಲೆಗೊಳಿಸುವ, ಈ ಕಸುವಿಗೆ ಪೂರಕವಾಗಿ ನುಡಿ ಚಳಕಗಳನ್ನು ಪರಿಣಾಮಕಾರಿಯಾಗಿ ಬೆಳಸುವ ಸ್ವರೂಪದಲ್ಲಿವೆ. ನುಡಿ ಕಸುವು ಕೇವಲ ನುಡಿಯೊಂದನ್ನು ಮಾಧ್ಯಮವನ್ನಾಗಿ ಅಳವಡಿಸುವ ಮೂಲಕ ನೆರವೇರಲು ಸಾಧ್ಯವಿಲ್ಲ. ಹಾಗಾಗಿ ನುಡಿ ಕಲಿಕೆಗೆ ಮೊದಲ ಪ್ರಾಶಸ್ತ್ಯ ಕೊಡುವುದು ಮುಖ್ಯವಾಗಿದೆ. ನುಡಿ ಕಲಿಕೆಗೆ ಬೇಕಾಗುವ ಎಲ್ಲ ಬಗೆಯ ಸಂಪನ್ಮೂಲ, ಸೌಕರ್ಯಗಳು, ಇಂಗ್ಲಿಶು ನುಡಿ ಕಲಿಕೆಯ ವಿಧಾನಗಳಿಗೆ ಸಂಬಂಧಿಸಿದ ತರಬೇತಿ ಮೊದಲಾದ ಸಂಗತಿಗಳ ಬಗೆಗೆ ನಾವು ಗಮನಹರಿಸುವ ಜರೂರಿದೆ. ನುಡಿ ಕಲಿಕೆಯಲ್ಲಿಯೇ ವಿದ್ಯಾರ್ಥಿಗಳಲ್ಲಿ ಸಂವಹನ ಸಾಮರ್ಥ್ಯ ನೆಲೆಗೊಳ್ಳುವುದರ ಜೊತೆಗೆ ಗ್ರಹಿಕಾ ಸಾಮರ್ಥ್ಯವು ರೂಪುಗೊಳ್ಳುತ್ತದೆ. ಇವೆರಡೂ ಮಗುವಿನಲ್ಲಿ ಒಡಗೂಡಿದರೆ, ಮಾಧ್ಯಮ ಎನ್ನುವುದು ಸವಾಲೇ ಅಲ್ಲ. ನುಡಿಯನ್ನು ಮಾಧ್ಯಮವಾಗಿ ಬಳಸುವಾಗ ನುಡಿ ಕಲಿಕೆಯ ಅವಕಾಶಗಳು ಸೊರಗುತ್ತವೆ. ಏಕೆಂದರೆ, ತರಗತಿಯನ್ನು ಹೊರತುಪಡಿಸಿದರೆ, ಇಂಗ್ಲಿಶಿನ ಭಾಷಿಕ ಸಂಗತಿಗಳು ಮಕ್ಕಳಿಗೆ ಹೇರಳವಾಗಿ ಲಭ್ಯವಾಗುವುದಿಲ್ಲ. ಅಂದರೆ, ನುಡಿ ಕಲಿಯುವುದಕ್ಕೆ / ಪಡೆಯುವುದಕ್ಕೆ ಬೇಕಾದ ಜೈವಿಕ ಮತ್ತು ಮಾನಸಿಕ ವಿನ್ಯಾಸವು ಮಗುವಿನಲ್ಲಿ ಅಂತಸ್ಥವಾಗಿದ್ದರೂ, ಆ ಪ್ರಕ್ರಿಯೆಗೆ ಬೇಕಾದ ಇನ್‌ಪುಟ್ಸ್ ಹೇರಳವಾಗಿ ಮಕ್ಕಳಿಗೆ ತರಗತಿಯ ಆಚೆಗೆ ದೊರೆಯುವುದಿಲ್ಲ. ಆದ್ದರಿಂದ ನುಡಿ ಕಲಿಕೆಯ ಬಗ್ಗೆ ನಾವು ವಿಶೇಷ ಕಾಳಜಿಯನ್ನು ವಹಿಸುವುದು ಅಗತ್ಯ ಹಾಗೂ ಅನಿವಾರ್ಯ. ಅಂತಿಮವಾಗಿ ಮಕ್ಕಳಿಗೆ ಇಂಗ್ಲಿಶು ನುಡಿಯ ಅರಿವು ಮತ್ತು ಆ ನುಡಿಯಲ್ಲಿ ಅವರು ಸಲೀಸಾಗಿ, ಲೀಲಾಜಾಲವಾಗಿ ವ್ಯವಹರಿಸುವುದು ಮುಖ್ಯವೇ ಹೊರತು ಅದು ಮಾಧ್ಯಮವಾಗುವುದಲ್ಲ.

ಇಲ್ಲಿ ಇನ್ನೂ ಕೆಲವು ಮಾತುಗಳು ಅತ್ಯಂತ ಮುಖ್ಯವಾದ ಕಾರಣ ಅವುಗಳನ್ನು ಇಲ್ಲಿ ಹೇಳಲೇಬೇಕು. ತಂತ್ರಜ್ಞಾನದ ಪರಿಣಾಮಕಾರಿ ಬಳಕೆಗೆ ಬೇಕಾಗುವ ಪರಿಕರ ಮತ್ತು ಸಂಪನ್ಮೂಲಗಳು ದೇಶಿ ನುಡಿಗಳಲ್ಲಿ ಲಭ್ಯವಿಲ್ಲ. ಅಂದರೆ ಕನ್ನಡ ಹಾಗೂ ಇತರೆ ದೇಶಿ ನುಡಿಗಳು ಮೂಲಭೂತ ತಂತ್ರಜ್ಞಾನ ಹಾಗೂ ಸಂಪನ್ಮೂಲದ ಕೊರತೆಯಿಂದ ಬಳಲುತ್ತಿವೆ. ಇದಕ್ಕೆ ಪರಿಹಾರಗಳು ಇಂಗ್ಲಿಶು ನುಡಿಯನ್ನು ಶಿಕ್ಷಣ ಮಾಧ್ಯಮವನ್ನಾಗಿ ಅಳವಡಿಸಿಕೊಳ್ಳುವುದರಲ್ಲಿವೆ ಎನ್ನಲಾಗುತ್ತಿದೆ. ಇದಕ್ಕೆ ಪುರಾವೆಗಳಿಲ್ಲ ಇದು ಕೇವಲ ಊಹೆ ಮಾತ್ರ. ಇಂಗ್ಲಿಶು ನುಡಿಯೇತರ ದೇಶಗಳಲ್ಲಿ, ಇಂಗ್ಲಿಶನ್ನು ಪ್ರಾಥಮಿಕ ಶಿಕ್ಷಣ ಮಾಧ್ಯಮವನ್ನಾಗಿ ಅಳವಡಿಸಿದರ ಪರಿಣಾಮ ಮತ್ತು ಪ್ರಭಾವದ ಕೂಲಂಕಷ ವಿಶ್ಲೇಷಣೆಗಳಿಗೆ ಸಮರ್ಪಕ ದತ್ತಾಂಶಗಳಾಗಲೀ ಇಲ್ಲವೇ ಅಧ್ಯಯನಗಳಾಗಲೀ ಇಲ್ಲ. ಹಾಗಾಗಿ ಇಂಗ್ಲಿಶನ್ನು ಶಿಕ್ಷಣ ಮಾಧ್ಯಮವನ್ನಾಗಿ ಅಳವಡಿಸುವುದರ ಹಿಂದಿನ ವೈಚಾರಿಕತೆ ಏನು? ಎಂಬುದನ್ನು ಗುರುತಿಸುವುದು ಕೂಡ ಕಷ್ಟವೇ ಸರಿ.

**ಮೇಟಿ ಮಲ್ಲಿಕಾರ್ಜುನ**
ಭಾಷಾಶಾಸ್ತ್ರ ವಿಭಾಗ, ಸಹ್ಯಾದ್ರಿ ಆರ್ಟ್ಸ್ ಕಾಲೇಜು
ಕುವೆಂಪು ವಿಶ್ವವಿದ್ಯಾಲಯ, ವಿದ್ಯಾನಗರ – ೫೭೭ ೨೦೩

## ರೋದನ

ಕೆಲವರದು
'ಅರಣ್ಯರೋದನ'
ಬಹು ಮಂದಿಯದು
ಗೃಹರೋದನ!
(ಗೃಹದಾರಣ್ಯಕ)

**ಸಿಪಿಕೆ,** ಮೈಸೂರು

# ಗ್ರಾಮಗ್ರಾಮಗಳ ಪರಸಂಗವಿದೆಕೋ...



ಕೆ. ಆರ್. ಉಮಾದೇವಿ ಉರಾಳ

ಈ ಕಾಡ ನಡುವಿನ ಕಾಲುದಾರಿಯಲ್ಲಿ ನಡೆದುಹೋಗುತ್ತಾ ಇದ್ದರೆ ಹೀಗೇ ನಡೆಯುತ್ತಲೇ ಇರಬೇಕೆನ್ನಿಸುತ್ತಿದೆ. ಈಗಷ್ಟೇ ಹಾದುಬಂದ ವಿಶಾಲವಾದ ಕೆರೆ ಬೆನ್ನಹಿಂದೆಯೇ ಇದೆ. ನುಣ್ಮಳಲ ಕೆರೆಯ ದಡ ದಾಟಿದರೆ ಸುತ್ತಲೆತ್ತಲೂ ಕಾಡೇ ಕಾಡು. ನೀರವ ಮೌನ ಸಾಮ್ರಾಜ್ಯದಿಂದ ಮೊಳಗಿಬರುವ ಹಕ್ಕಿ-ಪಕ್ಷಿಗಳ ಕುಕಿಲಿಗೆ ಜೀರುಂಡೆಗಳ ಹಿಮ್ಮೇಳ. ಅಗೋ, ಕೈಲಿ ಕತ್ತಿ ಹಿಡಿದು ಸೊಪ್ಪು ತರಿವ ಕಾಯಕಯೋಗಿಯೊಬ್ಬ ಕಾಡನಡುವಲ್ಲಿದ್ದಾನೆ. ಮಂಡಿ ಮೇಲಿನ ಮುಂಡು, ಅರೆ ತೋಳ ಜುಬ್ಬ, ತಲೆಗೆ ಹಾಳೆಟೋಪಿ, ಬಾಯಲ್ಲಿ ಕವಳ. ನಾನವನ ಬಳಿ ಸಾರುವೆ. ಕಾಡಲ್ಲಿ ನಾನು ಹೋಗಬೇಕಿರುವ ತಾವಿನ ಮಾರ್ಗ ವಿಚಾರಿಸುತ್ತಾ, ನೀನೇ ಬಂದು ದಾರಿ ತೋರಿಸೆಂದು ಬಿನ್ನವಿಸುವೆ. ದಾರಿತಪ್ಪಿ ಕಾಡುಪಾಲಾದೇನೆಂಬ ಭಯ. ಭಯದ ಕುರಿತು ಹೇಳಲಾಗದ ಹಮ್ಮು. ಹಮ್ಮುಬಿಮ್ಮಿಲ್ಲದ ಆ ಸರಳ ಹೃದಯಿಗೆ ನನ್ನ ಭಯ ಮನಮುಟ್ಟಿದೆ. ಸೊಪ್ಪು ತುಂಬಿದ ಕಣ್ಣಿಜಲ್ಲೆ ಅಲ್ಲೇ ಬಿಟ್ಟು ಕೈಯ್ಯ ಕತ್ತಿ ಬೀಸುತ್ತಾ ಬೀಸುನಡಿಗೆಯಲ್ಲಿ ಹೊರಟೇಬಿಟ್ಟನವ. ದಾರಿಯುದ್ದಕ್ಕೂ ಕಾಡಿನ ಬ್ರಹ್ಮನ ಬನ, ನಾಗನ ಬನ, ಹಿಂದಿರುವ ಆ ದೊಡ್ಡ ಕೆರೆಯ ಮಹಿಮೆ ಕೊಂಡಾಡುತ್ತಾ ಬಿರಾಬಿಸನೆ ನಡೆಯುತ್ತಿದ್ದಾನೆ. ಪ್ರಾಚೀನ ಹುಲಿಯ ಶಿಲಾವಿಗ್ರಹದ ಆ ತಾವು ಬಂದಾಯಿತು. ಕ್ಯಾಮೆರಾದಲ್ಲಿ ಸೆರೆಹಿಡಿದಾಯಿತು. ಸ್ವಲ್ಪ ದೂರದ ಪ್ರಾಚೀನ ಬಸವ ದೇವಸ್ಥಾನ, ಕಾಡಿನಾಚೆಗಿನ ವನದುರ್ಗಾ ದೇವಸ್ಥಾನಕ್ಕೂ ಅವನೇ ಕರೆದೊಯ್ದು ಅಲ್ಲಿನ ಐತಿಹ್ಯ, ಆವರಣದ ಸಕಲೆಂಟು ಪರಿವಾರದೇವತೆಗಳ ಕುರಿತು ಹೇಳಿದ. ನಡೆದು ನಡೆದು ನನ್ನ ಕಾಲುಗಳೋ ಪದ ಹೇಳುತ್ತಿವೆ. ಈ ಕಾಡ ಸಂಚಾರದಲ್ಲಿ ಬೇರಿನ್ನೊಬ್ಬ ನರಜೀವಿ ಎದುರಾಗಿಲ್ಲ. ಬೇರೊಂದೇ ಪರಿಸರದಲ್ಲಾಗಿದ್ದರೆ ಮೈಮೇಲೊಂದಿಷ್ಟು ಚಿನ್ನವಿರುವ ನನ್ನ ಗತಿ ಏನಾಗುತ್ತಿತ್ತೆಂಬ ಭಾವ ಸುಳಿದರೂ ಅದು ಈ ಹಾಲು ಮನಕೆ ಹಿಂಡುವ ಹುಳಿ ಎನಿಸಿ ಕೊಡವಿಹಾಕಿದೆ. ನೋಟೊಂದನ್ನು ಕೊಡಹೋದರೆ ಸುತರಾಂ ಒಲ್ಲೆ ಎಂದನವ. ಫೋನ್ ನಂಬರ್ ಕೊಡು ಎಂದೆ. ನಂಬರ್ ಹೇಳಲು ತನಗೆ ಬಾರದೆಂದೂ, ಮಗನ ಫೋನಿಂದಲೇ ತಾನು ಮಾತಾಡುವುದೆಂದೂ ಹೇಳಿದನಾ ಮುಗ್ಧ. ಬಸ್ ಬರುವ ವರೆಗೆ ಕಾಯಬೇಕಿರುವವಳಿಗೆ ಕಾಳಜಿ ಹೇಳುತ್ತಾ ಸಾಗಿದವ ಮನವ ಆರ್ದ್ರವಾಗಿಸಿದ್ದ.

ಒಬ್ಬಳೇ ಹೀಗೆ ಕಾಡಲೆವ ದರ್ದು ಅದೇನಿದ್ದೀತೆಂದುಕೊಳ್ಳುತ್ತಿದ್ದೀರಾ? ಅದೂ ಸರಿಯೆ. ಮೊದಲೇ ನಾನದನ್ನು ಹೇಳಿಬಿಡಬೇಕಿತ್ತು. ಆದರೇನು, ಇಂಥ ರಸಪ್ರಸಂಗ ಗಳಿವೆಯಲ್ಲಾ, ಅವು ಬುದ್ಧಿಯ ಮಾತು ಮೀರಿ ಮನದಾಳದಿಂದ ಮುನ್ನುಗ್ಗಿ ಬಂದು ಮುಗುಳ್ನಗುತ್ತವೆ ನೋಡಿ, ಮನಸ್ಸು ಅವಕ್ಕೆ ಮಣೆ ಹಾಕಿಬಿಡುತ್ತದೆ. ಇಂದೇಕೋ ಅವು ದಾಂಗುಡಿಯಿಡುತ್ತಾ ನಮ್ಮನ್ನು ಮುಕ್ತವಾಗಿಸೆಂದು ತಾಕೀತು ಮಾಡುತ್ತಿವೆ. ಕಾಡಲೆಯಬೇಕಾಗಿ ಬಂದ ಗರ್ದಿಗಮ್ಮತ್ತನ್ನು ನಿಮಗೆ ಹೇಳುತ್ತಲೇ ಈ ರಸಪ್ರಸಂಗಗಳಿಗೆ ಬಿಡುಗಡೆ ಕೊಡಲಾದೀತೋ ನೋಡುತ್ತೇನೆ.

ತಾಲ್ಲೂಕು ಕೇಂದ್ರದಲ್ಲಿ ವಾಸವಿದ್ದು, ಗ್ರಾಮೀಣ ಪ್ರದೇಶದ ಕಾಲೇಜೊಂದರ ಮಕ್ಕಳಿಗೆ ಪಾಠ ಹೇಳುತ್ತಾ ನಿವೃತ್ತಿಗೆ ಹತ್ತಿರವಾಗುತ್ತಿದ್ದೆ. ಹದಿಹರೆಯದ ಹುಮ್ಮಸ್ಸಿನ ಹಮ್ಮೀರರೊಂದಿಗಿನ ಒಡನಾಟವಿಲ್ಲದ ಮುಂದಿನ ದಿನಗಳದೆಷ್ಟು ಬರಡಾಗಿದ್ದಾವು ಎಂಬ ಚಿಂತೆ ಕಾಲೇಜಿಗೆಂದು ಬಸ್ ಹತ್ತಿ ಕುಳಿತುಕೊಳ್ಳುತ್ತಲೇ ಮುತ್ತಿಕೊಳ್ಳುತ್ತಿತ್ತು. ಆಗೆಲ್ಲ ಮನಸ್ಸು ತಕ್ಷಣದ ಪರಿಹಾರವೆಂಬಂತೆ ಪರ್ಯಾಯವೊಂದನ್ನು ಮುಂದಿಡುತ್ತಿತ್ತು. ನಿವೃತ್ತಿಯಾಗುತ್ತಲೇ, ಸುಮ್ಮನೆಯಾದರೂ ಒಮ್ಮೆ, ಸಂಸ್ಕೃತಿಯ ನೆಲೆ ಎಂದೇ ಪ್ರಸಿದ್ಧವಾಗಿರುವ ಮಲೆನಾಡಮ್ಮನ ಮಡಿಲ ನಿನ್ನ ತಾಲ್ಲೂಕನಿಡೀ ಸುತ್ತಾಡಿ ನಿನ್ನ ಪಾದಗಳನ್ನೇಕೆ ಪಾವನಗೊಳಿಸಿಕೊಳ್ಳಬಾರದು ಎನ್ನುತ್ತಿತ್ತದು. ನಾನಾದರೂ ಈ ಮನದ ಮಾತಿಗೆ ಮನಸೋತಿದ್ದೆ. ಇಷ್ಟರಲ್ಲೇ ನಿವೃತ್ತಳಾಗಿದ್ದೆ.

ಒಮ್ಮೆ ನನ್ನೂರಿನ ಹಿರಿಯ ಸಾಹಿತಿಯೋರ್ವರು ದೂರವಾಣಿಯಲ್ಲಿ ಹೇಳಿದ ಸಂಗತಿ, ತಾಲ್ಲೂಕು ಸರ್ಕೀಟಿನ ನನ್ನ ಕನಸಿನರಮನೆಯ ಹೆಬ್ಬಾಗಿಲು ತೆರೆದಿತ್ತು. 'ನಾಡಿನ ವಿಶ್ವವಿದ್ಯಾಲಯವೊಂದು ರಾಜ್ಯದ ಪ್ರತಿ ಗ್ರಾಮಗಳ ಕುರಿತ ಲೇಖನಗಳನ್ನು ತಾಲ್ಲೂಕುವಾರು ಬರೆಸುತ್ತಿದೆ, ಪ್ರತಿ ತಾಲ್ಲೂಕಿನಿಂದ ಇಬ್ಬರು ಕ್ಷೇತ್ರತಜ್ಞರು ಈ ಕೆಲಸ ಮಾಡಬೇಕಿದೆ, ಇದು ನಿಮ್ಮಿಂದಾದೀತೆ' ಎಂದಾಗ ಹುಡುಕುತ್ತಿದ್ದ ಬಳ್ಳಿ ಕಾಲಿಗೆ ತೊಡರಿದಂತಾದ ಸಂತಸದಲ್ಲಿ ಬಾಯಿಗೇ ಬಂದಂತಾದ ಹೃದಯ ಪುಣಚ್ಚನೇ ಹೊರಬಂದು ಧಮಾರೆನ್ನದಿದ್ದುದೇ ಪುಣ್ಯ. "ಮೇಡಂ, ಕ್ಷೇತ್ರಕಾರ್ಯ, ವಿವಿಧ ಇಲಾಖೆಗಳಿಂದ ಮಾಹಿತಿ ಸಂಗ್ರಹ, ಪ್ರತೀ ಗ್ರಾಮಗಳ ಸಂಪನ್ಮೂಲ ವ್ಯಕ್ತಿಗಳನ್ನು ಗುರ್ತಿಸಿ ಅವರಿಂದ ಗ್ರಾಮದ ಕುರಿತು ತಿಳಿಯುವುದು ಎಂದು ಕಷ್ಟವಿರುತ್ತದೆ, ಮನೆಯವರೊಂದಿಗೆ ಸಮಾಲೋಚಿಸಿಯೇ ನಿರ್ಧರಿಸಿ" ಎಂದಾಗ ಪತಿಯ ಮುಂದೆ ಅಹವಾಲನ್ನಿಟ್ಟೆ. "ಕಷ್ಟವಾಗದು ಎನಿಸಿದಲ್ಲಿ ಮಾಡು, ಓಡಾಟಕ್ಕೆ ಕಾರಿಗೆ ಡ್ರೈವರ್ ಮಾಡಿಕೊಂಡರಾಯಿತು" ಎಂದಾಗ, ಈ ಕೆಲಸಕ್ಕೆ ಸಮ್ಮತಿಯ ಠಸ್ಸೆ ಒತ್ತಿಯೇಬಿಟ್ಟೆ. ತಾಲ್ಲೂಕು ವಿಹಾರವೆಂಬ ಸರಸ್ಸಿನಲ್ಲಿ ಬೆನ್ನಿಗೆ ಬೆಂಡು ಕಟ್ಟಿಕೊಂಡು ಮನಸೋಕ್ತ ಈಜುವುದೆಂದುಕೊಂಡಿದ್ದವಳಿಗೆ, 'ಮುಳುಗಿ ತಳಾತಳದ ಮುತ್ತುರತ್ನ ಹೊತ್ತು ತಾ, ಕೊನೆಗೆ ಕೊಪ್ಪರಿಗೆ ನಿಧಿಯನ್ನು ಕಣ್ದುಂಬಿಕೊಂಡಾದರೂ ಬಾ' ಎನ್ನಲಾಗಿತ್ತು. ಮುಗಿಲ ಮಲ್ಲಿಗೆಗೆ ಕೈ ಚಾಚಿದೆನೇ ಎಂಬ ಅಳುಕಿನಿಂದಲೇ

ತಾಲ್ಲೂಕಿನ ಅರ್ಧ ಭಾಗದ ಕ್ಷೇತ್ರಕಾರ್ಯದ ಅಖಾಡಕ್ಕಿಳಿದಿದ್ದೆ.

ಈ ಕೆಲಸದಲ್ಲಿ ಸ್ಥಳನಾಮ ವೈಶಿಷ್ಟ್ಯಕ್ಕೆ ಒತ್ತು ನೀಡಬೇಕಿದ್ದು, ಆ ಕುರಿತ ನನ್ನ ಅಜ್ಞಾನವನ್ನು ಹೇಳಿಕೊಳ್ಳುತ್ತಲೇ, ಸ್ಥಳನಾಮಗಳನ್ನು ಕುರಿತ ಲೇಖನಗಳನ್ನು ಕೊರಿಯರ್ ಮೂಲಕ ಕಳುಹಿಸಿದ ನನ್ನ ಗುರುಗಳು ಇದೇ ತಾಲ್ಲೂಕಿನವರಾಗಿ ಇಲ್ಲಿನ ಸಮಸ್ತ ಚರಿತ್ರೆಯ ಕುರುಹುಗಳನ್ನೂ ಮಸ್ತಕದಲ್ಲೇ ಮುದ್ರಿಸಿಟ್ಟುಕೊಂಡಿದ್ದು, ಸಂಪರ್ಕಿಸಿದಾಗೆಲ್ಲಾ ಕಿವಿಗೊಟ್ಟು ಮಾರ್ಗದರ್ಶನ ನೀಡುತ್ತಿದ್ದ ಇತಿಹಾಸಜ್ಞರೊಬ್ಬರು, ಎಪಿಗ್ರಾಫಿಯಾ ಕರ್ನಾಟಕ ಮತ್ತು ಗೆಜೆಟಿಯರ್‌ಗಳ ಅಧ್ಯಯನಕ್ಕೆ ಅನುವು ಮಾಡಿಕೊಟ್ಟ ನಾನೋದಿದ್ದ ಕಾಲೇಜು – ಹೀಗೆ ಹಲವು ವಿಧಗಳ ಹರಕೆ ಹಾರೈಕೆ ಸಹಕಾರಗಳ ಶಸ್ತ್ರಾಸ್ತ್ರಗಳಿಂದ ಸಜ್ಜಿತಳಾಗಿದ್ದೆ.

ಗ್ರಾಮ ಗ್ರಾಮಗಳಲ್ಲೂ ಸಂಪನ್ಮೂಲ ವ್ಯಕ್ತಿಗಳೆಂದು ಪರಿಗಣಿಸಿ ಸಹಕಾರ ಕೋರಿದ್ದ ತೊಂಬತ್ತರ ವಯೋಮಾನದವರೆಗಿನ ಗ್ರಾಮಸ್ಥರೆಲ್ಲರೂ ನನ್ನೊಡನೆ ಕಾರಲ್ಲಿ ಬಂದು ಗ್ರಾಮವಿಡೀ ಸುತ್ತಾಡಿಸಿ ತಮ್ಮ ಗ್ರಾಮದ ವೈಶಿಷ್ಟ್ಯಗಳು, ಪ್ರಾಚೀನತೆ, ಪೂಜಾ ಕೇಂದ್ರಗಳು, ಗ್ರಾಮಹಬ್ಬ, ಜಾತ್ರೆಗಳು, ಚರಿತ್ರೆಯ ಕುರುಹುಗಳು, ಹೊಳೆ, ಹಳ್ಳ, ಕೆರೆ, ಗುಡ್ಡಬೆಟ್ಟಗಳು, ಆಗಬೇಕಿರುವ ಸೌಲಭ್ಯಗಳು ಎಂದೆಲ್ಲಾ ವಿವರಿಸುತ್ತಾ ಆದರಿಸಿ ತೋರಿದ ಪ್ರೀತಿ – ಅದೊಂದು ಜೀವನ ಪಾಠ.

ಮುಕ್ಕಾಲು ಭಾಗ ಮುಳುಗಡೆಯಾಗಿರುವ ಗ್ರಾಮವೊಂದರ ಕುರಿತು ಬರೆಯ ಬೇಕಿತ್ತು. ಆ ಗ್ರಾಮದವರಾದ ಗೌರವಾನ್ವಿತ ಹಿರಿಯರೊಬ್ಬರು ನಿಮಗೆ ಈ ಕುರಿತು ತಿಳಿಸಬಲ್ಲರು ಎಂಬ ಸಲಹೆಯಂತೆ ಅವರ ದೂರವಾಣಿ ಸಂಖ್ಯೆ ಸಂಪಾದಿಸಿ ಸಂಪರ್ಕಿಸಿದೆ. ಕರೆ ಸ್ವೀಕರಿಸಿದರು. ನನ್ನ ಕೆಲಸದ ಕುರಿತು ವಿವರಿಸಿ, ಬೇಕಿರುವ ಮಾಹಿತಿಗಳನ್ನು ಮುಂದಿಟ್ಟೆ. ಒಂದು ಕ್ಷಣದ ಮೌನ. ಅವರೆಂದರು, "...ಮೇಡಂ, ನಿಮಗೆ ಅರ್ಜೆಂಟ್ ಇದೆಯೇ? ನನ್ನ ಹೆಂಡತಿ ತೀರಿಕೊಂಡು ಹದಿನೈದು ದಿನಗಳಾಗಿವೆ. ಮನಸ್ಸು ಕದಡಿದ ಕೊಳದಂತಾಗಿದೆ. ಬೆಂಗಳೂರಲ್ಲಿದೀನಿ. ನಿಮ್ಮ ಮನೆ ಎಲ್ಲಿದೆ? ಊರಿಗೆ ಬಂದಾಗ ನಾನೇ ನಿಮ್ಮಲ್ಲಿಗೆ ಬಂದು ಬೇಕಾದ್ದನ್ನು ತಿಳಿಸಿದರಾಗದೇ?" ಗರಬಡಿದಂತಾದೆ. ಮಹಿಮಾನ್ವಿತರು ಆಡಿದ ಮಾತಿನ ತೂಕ ತಪ್ಪಿಯಾರೇ? ಅವರು ಬಂದೇ ಬಂದರು; ಬರಿಗೈಯ್ಯಲ್ಲಲ್ಲ. ಅದೇ ಗ್ರಾಮದವರಾಗಿ ಬೆಂಗಳೂರಲ್ಲಿರುವ ಹಿರಿಯ ಸಾಹಿತಿಯೋರ್ವರಿಂದ ನಾಲ್ಕು ಪುಟಗಳಷ್ಟು ಆ ಗ್ರಾಮದ ಕುರಿತು ಬರೆಯಿಸಿಕೊಂಡು ಬಂದಿದ್ದರು! "ಇನ್ನೂ ವಿವರ ಬೇಕಿದ್ದಲ್ಲಿ ಕೇಳಿ" ಎಂಬ ಆಶ್ವಾಸನೆ ಕಣ್ಣಂಚ ತೇವವಾಗಿಸಿತ್ತು.

ಇನ್ನೊಂದು ಗ್ರಾಮದ ಹಿರಿಯರು ತಮ್ಮ ಗ್ರಾಮದ ವಿಶೇಷತೆಗಳ ಕುರಿತು ಆವೇಶಭರಿತರಾಗಿ ವಿವರಿಸುತ್ತಾ, ಐತಿಹಾಸಿಕ ಸಂಗತಿಗಳನ್ನು ಕಣ್ಣಿಗೆ ಕಟ್ಟುವಂತೆ ಹೇಳುತ್ತಾ ಹೇಳುತ್ತಾ, ತಾವು ಪಾಂಡುರಂಗ–ರುಕುಮಾಯಿಯ ಭಕ್ತ, ತಾನವರನ್ನು ಕಾಣ್ತೀನಿ, ಮಾತಾಡ್ತೀನಿ ಎನ್ನುತ್ತಿದ್ದವರನ್ನು ಬಿಟ್ಟ ಕಣ್ಣಿಂದ ನೋಡುತ್ತಾ ರಾಮಕೃಷ್ಣ ಪರಮಹಂಸರನ್ನು ನೆನೆಯುತ್ತಿದ್ದೆ. ಈ ಮುದುಕ ಬಾಯಿಗೆ ಬಂದಂತೆ ಬಡಬಡಿಸ್ತಿದ್ದಾನೆ ಅಂದುಕೊಳ್ತೀರೇನೋ ಎನ್ನುತ್ತಿದ್ದಂತೇ 'ನಿಮ್ಮನ್ನ ನಂಬ್ತೀನಿ' ಎಂಬ ಮಾತು ತನ್ನಿಂತಾನೇ ಬಂದಿತ್ತು. ಅವರ ಮನೆಯಿಂದ ಅನತಿ ದೂರದಲ್ಲಿ ಒಂದಷ್ಟು ಮಾಸ್ತಿ ಕಲ್ಲುಗಳಿವೆ ಎಂದಾಗ ಅಂದು ಬಸ್‌ನಲ್ಲಿ ಬಂದಿದ್ದ ನಾನು ಕೊಡೆ ಬಿಚ್ಚಿ ಸುರಿಮಳೆಯಲ್ಲಿ ಹೊರಡುತ್ತಲೇ ತಾವೂ ಕೋಲೂರುತ್ತಾ ಹೊರಡುವುದೇ?! ಅಲ್ಲಿ ಹಲವಾರು ಇಕ್ಕೈ ಒಕ್ಕೈ ಮಾಸ್ತಿಕಲ್ಲುಗಳು, ಕಾದಾಟದ ದೃಶ್ಯದ ಕಲ್ಲುಗಳಿದ್ದವು. ಸ್ವಲ್ಪ ದೂರದಲ್ಲಿ ಎತ್ತರದ ಬಂಡೆಹಾಸು, ಕೆಳಗಡೆ ದೊಡ್ಡ ಹಳ್ಳ. ಇದು ರಸಋಷಿಯ 'ಜಲಶಿಲಾಕಲಲೀಲೆ'ಯೇ ಸೈ !... (ಅನತಿ ದೂರದಲ್ಲಿಯೇ ಅದೂ ಇತ್ತೆನ್ನಿ.) ಅನಂತತೆಯು ಸಾಕ್ಷಾತ್ಕಾರಗೊಂಡ ಕ್ಷಣವಿದೆಂದೆನಿಸಿತ್ತು.

ಮತ್ತೊಂದು ಗ್ರಾಮದ ಕೂಡು ಕುಟುಂಬದ ಮನೆಗೆ ಹೋಗಿದ್ದೆ. ಯಜಮಾನರುಗಳು ಸಾಕಷ್ಟೇ ಮಾಹಿತಿ ನೀಡಿದ್ದರು. ಮನೆಯಿಂದ ಸ್ವಲ್ಪ ದೂರದಲ್ಲಿ ಚರಿತ್ರಾರ್ಹ ಸ್ಥಳವೊಂದಿತ್ತು. "ಅದನ್ನು ನಾನು ತೋರಿಸ್ತೀನಿ" ಎನ್ನುತ್ತಾ ಯಜಮಾನಿತಿಯೊಬ್ಬರು ಚಪ್ಪಲಿ ಮೆಟ್ಟಿ ಹೊರಟೇಬಿಟ್ಟರು. ಮೈತುಂಬ ಮನೆಗೆಲಸಗಳಿದ್ದ ನಡುಹಗಲ ಸಮಯ. ನಿಮಗೆ ತೊಂದರೆ ಕೊಟ್ಟೆನೆಂಬ ಔಪಚಾರಿಕ ಮಾತನ್ನಾಡಿದೆ. "ಮನೆಗೆಲಸ ಎಂದಾದರೂ ಮುಗಿಯಿತೆಂದಿದೆಯೇ? ನಿಮ್ಮೊಂದಿಗೆ ಹೊರಗೆ ಬಂದೆ, ನನಗೂ ಇವನ್ನೆಲ್ಲ ಇನ್ನೊಮ್ಮೆ ನೋಡಿದಂತಾಯ್ತಲ್ಲ !" ಎಂದಾಗ ದೈನಂದಿನ ಏಕತಾನತೆಯ ಕೋಶದಿಂದ ಹೊರಬಂದು ನೋಟ ನೋಡುವ, ಕಲಿವ ಕಲಿಸುವ ಮಹಿಳೆಯ ಸೃಜನಶೀಲ ಮನೋಭಾವದ ಸೆಳಕೊಂದರ ದರ್ಶನದಿಂದ ರೋಮಾಂಚನವಾಗಿತ್ತು.

ಕೃಷ್ಣ ಎಂಬ ನನ್ನ ಹಳೆಯ ಶಿಷ್ಯನೊಬ್ಬ ತಾಲ್ಲೂಕಿನ ಪ್ರೇಕ್ಷಣೀಯ ಸ್ಥಳಗಳ ಕುರಿತು ಪತ್ರಿಕೆಗಳಿಗೆ ಬರೆಯಲಾರಂಭಿಸಿದ್ದ. ಅವನನ್ನು ಸಂಪರ್ಕಿಸಿ, 'ನನಗಿಷ್ಟು ಸಹಕರಿಸು' ಎಂದೆ. ತುಂಬ ಸಂತೋಷಪಟ್ಟ. ಆತ ಗ್ರಾಮಪಂಚಾಯ್ತಿಯೊಂದರಲ್ಲಿ ಕಂಪ್ಯೂಟರ್ ನಿರ್ವಾಹಕ. ಕಾರ್ಯ ಬಾಹುಳ್ಯವಿದ್ದಾಗ ಭಾನುವಾರಗಳಲ್ಲೂ ಕಚೇರಿಯಲ್ಲಿರುತ್ತಿದ್ದ ಕರ್ಮಯೋಗಿ. ಯಾವುದೇ ಗ್ರಾಮಪಂಚಾಯತಿಗೆ ಹೋಗುವಾಗಲೂ 'ಮೊದಲೊಮ್ಮೆ ನನಗೆ ತಿಳಿಸಿ ಮೇಡಂ' ಎನ್ನುವ. ಅಂತೆಯೇ ಮೆಸೇಜಿಸ್ತಿದ್ದೆ. ಗ್ರಾಮ ಪಂಚಾಯ್ತಿಗೆ ಕಾಲಿಡುತ್ತಿದ್ದಂತೇ 'ಬನ್ನಿ ಮೇಡಂ, ನಿಮಗೆ ಬೇಕಾದ ಮಾಹಿತಿ ಕೊಡೆಂದು ಕೃಷ್ಣ ಫೋನ್ ಮಾಡಿದ್ದ' ಎಂಬ ಸ್ವಾಗತದೊಂದಿಗೆ ನನ್ನ ಕೆಲಸ ಸರಾಗವಾಗಿ ಮುಗಿದಿರುತ್ತಿತ್ತು. ತನ್ನ ಪಂಚಾಯ್ತಿ ವ್ಯಾಪ್ತಿಯ ಗ್ರಾಮಗಳನ್ನೆಲ್ಲ ತಾನೇ ನನಗೆ ತೋರಿಸಬೇಕೆಂಬ ಉತ್ಸುಕತೆ ಆತನಿಗೆ. ಇಲ್ಲಿಗೆಲ್ಲ ಬೈಕೇ ಸರಿ ಎನ್ನುತ್ತಾ ತನ್ನ ಬೈಕಲ್ಲೇ ತಿರುಗಾಡಿಸಿದಾತ ಸಂಪಾದಿಸಿದ್ದ ಜನರ ಪ್ರೀತ್ಯಾದರ ಕಂಡು ಬೆರಗಾಗಿದ್ದೆ. ಇದೊಂದು ಮುಂದೆ ಜಾಜ್ವಲ್ಯಮಾನವಾಗಿ ಬೆಳಗಬಲ್ಲ ಪ್ರಭೆಯ ಸೊಡರ ಕುಡಿ ಎಂದು ಹೆಮ್ಮೆಪಡುತ್ತಿದ್ದೆ. ಆದರೇನು? ವಿಧಿಯ ಬಿರುಗಾಳಿ ಅಪಘಾತದ ನೆವದಲ್ಲಿ ಬೀಸಿ ಈ ಕಿರು ಸೊಡರ ನಂದಿಸಿತ್ತು. ಅದೂ ಈ ಕಾಯಕಯೋಗಿ ತನ್ನ ಕರ್ತವ್ಯ ನಿಮಿತ್ತ ತನ್ನ ಬೈಕಲ್ಲಿ ಪ್ರಯಾಣಿಸುತ್ತಿದ್ದಾಗ ಉಸಿರುಗಟ್ಟಿದಂಥ ಮೂಗುಬ್ಬಸದ ಸ್ಥಿತಿ ನನ್ನನ್ನು ಬಹಳ ದಿನಗಳು ಕಾಡಿತ್ತು.

ವಿವಿಧ ಇಲಾಖೆಗಳ ಸಂಪರ್ಕ ತಂದೊಡ್ಡಿದ ಪೇಚಿನ ಮೋಜಿನ ಪ್ರಸಂಗಗಳು ಹಲವು. ದೂರದ ಊರಲ್ಲಿದ್ದ ಕಚೇರಿಯಿಂದ ಪಡೆಯಬೇಕಿದ್ದ ಮಾಹಿತಿಗಾಗಿ ಮಹಿಳಾ ಅಧಿಕಾರಿಯನ್ನು ಅವರ ಸಮಯಕ್ಕಾಗಿ ಸಂಪರ್ಕಿಸಿದ್ದೆ. ಆಕೆ ಅಲಕ್ಷ್ಯದಿಂದ ಮಾತಾಡಿ ಫೋನನ್ನು ತಮ್ಮ ಪತಿದೇವರಿಗೆ ಕೊಟ್ಟರು. ಆತ, "ಹಾಗೆಲ್ಲಾ ನಾವು (!?) ಮಾಹಿತಿ ಕೊಡುವಂತಿಲ್ಲ. ಮೊದಲು ತಹಶೀಲ್ದಾರರಿಗೆ ಅರ್ಜಿ ಕೊಡಿ, ನಂತರ ನೋಡೋಣ" ಎಂದರು. ಸರಿ, ಇನ್ನೇನು 'ಹೊಳೆ ತನಕ ಓಟ, ದೊರೆ ತನಕ ದೂರು' ಎಂದುಕೊಂಡು ಶಿರಸ್ತೇದಾರರ ಬಳಿ ದೂರು ಒಯ್ದೆ. ಅವರು ನನ್ನೆದುರೇ ಆಕೆಗೆ ಫೋನ್ ಮಾಡಿದರು. 'ನನಗೆ ಬೇಕಿರುವ ಆ ಮಾಹಿತಿಗಳು ತಮಗೆ ತುರ್ತಾಗಿ ಬೇಕಿವೆ, ಕೂಡಲೇ ಕಳಿಸಿಕೊಡಿ' ಎಂದರು. ಆ ಊರಿಗೆ ಮಾಹಿತಿಗಾಗಿ ಪ್ರಯಾಣಿಸುವುದೂ ತಪ್ಪಿ ಇದ್ದಲ್ಲೇ ಪಡೆದಿದ್ದೆ. ಹಾಗೆಂದು ಕೆಲವು ಇಲಾಖೆಗಳ ಮಹಿಳಾ ಅಧಿಕಾರಿಗಳ ಕರ್ತವ್ಯ ಶ್ರದ್ಧೆಯು, 'ದಕ್ಷತೆ' ಎಂದರೆ ಅದರ ಪ್ರತಿರೂಪವೇ ಮಹಿಳೆಯಲ್ಲದೆ ಮತ್ತ್ಯಾರು ಎಂಬಂತಿರುತ್ತಿತ್ತು.

ಗ್ರಾಮಾಂತರ ಸಂಚಾರ ಅನಾವರಣಗೊಳಿಸುತ್ತಿದ್ದ ಪ್ರಕೃತಿಯ ಸೊಬಗೋ !... ವರ್ಣನಾತೀತವಾದದ್ದು. ಇಗೋ, ಮರಿಮೀನುಗಳೊಂದಿಗೆ ಚಿನ್ನಾಟವಾಡುತ್ತಾ ಹರಿವ ಈ ಮುದ್ದು ಹಳ್ಳ, ಇದರಾಚೆಗಿನ ಭತ್ತದ ಗದ್ದೆಗಳು, ಅಡಿಕೆ ಕೋಗುಗಳು, ಬೆಟ್ಟಗುಡ್ಡ ಸಾಲುಗಳು, ಅವುಗಳ ಒಡಲ ನೀಲವಾಗಿ ಕಾಣುವ ಮರಗಳು. ಗರಿಬಿಚ್ಚಿದ ನವಿಲಕ್ಕಿಗಳು, ಪುಟಪುಟಿಸುವ ಚಿಟ್ಟಣಿಲುಗಳು, ಕಿವಿದುಂಬುವ ಕುಕಿಲು, ಬೆಟ್ಟದ ಮೇಲಿಂದ ಕಲ್ಲುಬಂಡೆಗಳೆಡೆಯಿಂದ ಬೆಳ್ನೊರೆಗರೆಯುತ್ತಾ ಮಲ್ಲಿಗೆ ಪಕಳೆಗಳನ್ನು ಹೊಮ್ಮಿಸುತ್ತಿರುವಂತೆ ಧಬಧಬನೆ ಧುಮ್ಮಿಕ್ಕುವ ಜಲಧಾರೆ – ಮನಸ್ಸಿನ ಬೇನೆ ಬೇಸರಿಕೆಗಳೆಲ್ಲ ತಮ್ಮ ಕ್ಷುದ್ರತೆಗೆ ತಾವೇ ನಾಚಿ ಬುಡಮುಟ್ಟ ಬಾಲ ಮುದುರಿಸಿ ಬದಿ ಸರಿದುಬಿಡುತ್ತವೆ.

ಇಂಥ ರಸ ಪ್ರಸಂಗಗಳಂತೆಯೇ ಮನಸು ಮುದುಡಿಸುವ ಕಹಿ ಪ್ರಸಂಗಗಳೂ ಇದ್ದೇ ಇವೆಯಾದರೂ 'ಎನ್ನ ಪಾಡೆನಗಿರಲಿ, ಅದರ ಹಾಡನ್ನಷ್ಟೇ ನೀಡುವೆನು ರಸಿಕ ನಿನಗೆ' ಎಂಬ ಕವಿವಾಣಿಗೆ ಮಣಿದಿದ್ದೇನೆ. ಈ ಕಾರ್ಯದ ಫಲಿತಾಂಶ ಅದೇನೇ ಇರಲಿ; ಗುಡ್ಡಕ್ಕಿಂತ ಗುಡ್ಡ ದೊಡ್ಡದೆಂಬಂತೆ ಇದರಲ್ಲಿ ಪರಿಪೂರ್ಣತೆಯೆಂಬುದು ಬಿಸಿಲ್ಗುದುರೆ. ಇದರಲ್ಲಿನ ತೊಡಗಿಸಿಕೊಳ್ಳುವಿಕೆಯಿಂದ ಜೀವನ ವಿಶ್ವವಿದ್ಯಾಲಯದ ವಿದ್ಯಾರ್ಥಿನಿಯಂತಾದ ಸುಮ್ಮಾನ ಮನದುಂಬಿತು. ಸೌಂದರ್ಯದಲ್ಲಿ ಕಾಶ್ಮೀರ ನನ್ನ ತಾಲ್ಲೂಕು. ಆದರೇನು, ಆಧುನೀಕರಣಕ್ಕೆ ಮೊಗದಿರುವಲಾದೀತೆ? ಪರಿಣಾಮವಾಗಿ, ಇಲ್ಲಿನ ಕಾಡುಗಳ ಸ್ವಾಭಾವಿಕ ಸಸ್ಯವರ್ಗಗಳು ಅಕೇಶಿಯಾ ಮೋಹಿನಿಗೆ ಮರುಳಾದಂತಿವೆ. ವಿಶಾಲವಾದ ಭತ್ತದ ಗದ್ದೆಗಳು ಅಡಿಕೆಮರಗಳಿಗಂಜಿ ಹಿಮ್ಮೆಟ್ಟಿವೆ. ತುಂಬಿ ಹರಿವ ಜೀವನದಿ ತುಂಗೆ, ವಿವಿಧ ಹಳ್ಳಗಳು ಮರಳು ಲೂಟಿಕೋರರಿಂದಾಗಿ ಹತ್ತಿಬತ್ತಿಯಂತಾಗಿವೆ. ತಕ್ಕ ತಾವಿಲ್ಲದೆ ವನ್ಯಮೃಗಗಳ ಸಂಖ್ಯೆ ಕ್ಷೀಣಿಸಿದೆ. ಇಂಥ ಅಪಸವ್ಯಗಳನ್ನೆಲ್ಲ ನೇರ್ಪುಗೊಳಿಸಿಕೊಳ್ಳಬೇಕೆಂಬ ಜಾಗೃತಿ ಜನಮನದಲ್ಲಿ ಮೂಡಿ, ಪ್ರಕೃತಿ ಮಾತೆಯ ಮಸುಳಿಸಿದ ಮುಗುಳ್ನಗು ಮತ್ತೆಂದು ಮೂಡೀತೋ ಎಂಬ ತವಕ ನನ್ನದರಂತೆ ನಿಮ್ಮದು, ಎಲ್ಲರದು ಅಲ್ಲವೇ?

**ಕೆ. ಆರ್. ಉಮಾದೇವಿ ಉರಾಳ**

ನಿವೃತ್ತ ಉಪನ್ಯಾಸಕಿ, 'ವನಸುಮ', ಆಜಾದ್ ರಸ್ತೆ, ತೀರ್ಥಹಳ್ಳಿ – ೫೭೭ ೪೩೨

# ಮಾಧ್ಯಮದ ಮೇಲಾಟ, ಗ್ರಾಹಕರ ಪರದಾಟ

ಹೊಸತು-೨೦

ವಿಶೇಷ ಲೇಖನ

ಇತ್ತೀಚೆಗೆ ಒಬ್ಬ ನಾಯಕ ನಟರ ಫ್ಯಾನ್ ಬೆಂಕಿ ಹಚ್ಚಿಕೊಂಡು ಆತ್ಮಹತ್ಯೆ ಮಾಡಿಕೊಂಡ. ಆ ನಟ ತನ್ನದೇ ಆದ ಕಾರಣಕ್ಕಾಗಿ ಹುಟ್ಟುಹಬ್ಬ ಆಚರಣೆ ಮಾಡಿಕೊಳ್ಳಲಿಲ್ಲ ಎಂಬ ಕಾರಣಕ್ಕೆ ನೊಂದು ಬೆಂಕಿಹಚ್ಚಿಕೊಂಡ. ಆಸ್ಪತ್ರೆಯಲ್ಲಿ ಆತನನ್ನು ನೋಡಲು ಬಂದ ನಾಯಕ ನಟ ಯಾಕೆ ಹೀಗೆ ಮಾಡಿಕೊಂಡೆ ಎಂದು ಕೇಳಿದರೆ, ಆ ಯುವಕ 'ಹ್ಯಾಪಿ ಬರ್ತ್ ಡೇ ಅಣ್ಣ' ಎಂದ. ಹಾಗೆಂದ ಕೆಲ ಸಮಯದ ನಂತರ ಆ ಯುವಕ ಕೊನೆಯುಸಿರೆಳೆದ. ಇದು ಯಾವುದೋ ಸಿನಿಮಾದ ನಾಟಕೀಯ ದೃಶ್ಯವಲ್ಲ, ಇದೇ ಜನವರಿ ೯ರಂದು ನಡೆದ ವಾಸ್ತವ ಘಟನೆ. ಇಲ್ಲಿ ನಾವು ಆ ನಟರ ಹೆಸರನ್ನಾಗಲೀ ಆತನ ಅಭಿಮಾನಕ್ಕೆ ಪಕ್ಕಾಗಿ ಜೀವ ಕಳೆದುಕೊಂಡ ೨೮ರ ಯುವಕನ ಹೆಸರನ್ನಾಗಲೀ ಬರೆದಿಲ್ಲ; ಏಕೆಂದರೆ ಇದು ಇಂಥ ಹುಚ್ಚು ಅಭಿಮಾನದ ಅಭಿವ್ಯಕ್ತಿಯ ಒಂದು ಮಾದರಿ ಉದಾಹರಣೆಯಷ್ಟೇ. ಜೀವ ಕಳೆದುಕೊಳ್ಳದಿದ್ದರೂ ನಮ್ಮ ಯುವಜನ ತಮ್ಮ ನೆಚ್ಚಿನ ಸಿನಿಮಾ ತಾರೆಯರ ಕುರಿತು ಅಭಿಮಾನದ ಹೆಸರಿನಲ್ಲಿ ಕೈಗೊಳ್ಳುವ ಕೆಲಸಗಳು ಈ ಹುಡುಗರ ಭವಿಷ್ಯದ ಕುರಿತು ದಿಗಿಲನ್ನು ಹುಟ್ಟಿಸುತ್ತವೆ, ಇವರನ್ನು ಹೆತ್ತ ತಂದೆತಾಯಂದಿರ ಕುರಿತು ಕನಿಕರ ಎನ್ನಿಸುತ್ತದೆ.

ಕಥೆಕಾದಂಬರಿಯಲ್ಲಿ ತಲ್ಲೀನರಾಗುವ ಓದುಗರು ಅದರ ಪುಟಗಳಲ್ಲಿ ವರ್ಣಿಸಲಾಗಿರುವ ಪ್ರಪಂಚವನ್ನು ತಮ್ಮ ತಲೆಯಲ್ಲಿ ಸೃಷ್ಟಿಸಿಕೊಳ್ಳುತ್ತಾರೆ; ತಾವೂ ಅದರ ಒಂದು ಭಾಗವಾಗುತ್ತಾರೆ. ಅದರೊಳಗಿನ ಎಲ್ಲ ಭಾವನೆಗಳನ್ನು ಅನುಭವಿಸುತ್ತಾರೆ. ಅದರಿಂದ ಪ್ರಭಾವಿತರಾಗುತ್ತಾರೆ. ಸಿನಿಮಾ ಮತ್ತು ಟಿವಿ ಕಾರ್ಯಕ್ರಮಗಳನ್ನು ತಲ್ಲೀನತೆಯಿಂದ ವೀಕ್ಷಣೆ ಮಾಡುವಾಗಲೂ ಇದು ಇನ್ನೂ ಹೆಚ್ಚು ಪ್ರಭಾವಶಾಲಿಯಾಗಿ ಆಗುತ್ತದೆ; ಏಕೆಂದರೆ ಇಲ್ಲಿ ಕಣ್ಣೆದುರಿಗೆ ವಾಸ್ತವ ಜಗತ್ತಿನ ರೀತಿಯಲ್ಲಿ ಚಲನೆ, ಬಣ್ಣ, ಆಕಾರ, ವ್ಯಕ್ತಿಗಳು, ವಸ್ತುಗಳು, ನೈಜ ಧ್ವನಿ ಇತ್ಯಾದಿ ಇರುತ್ತದೆ. ಈಗಂತೂ ಡಿಜಿಟಲ್ ತಂತ್ರಜ್ಞಾನ ಬೆಳವಣಿಗೆಯಿಂದಾಗಿ ನೈಜವಲ್ಲದ, ಅಲೌಕಿಕವಾದ ಅನುಭವವನ್ನೂ ನಿಜ ಎನ್ನುವಂತೆ ತೋರಿಸಬಲ್ಲ ಮಾಂತ್ರಿಕ ದೃಶ್ಯ ಮತ್ತು ಧ್ವನಿಗಳನ್ನು ಸೃಷ್ಟಿಸಬಹುದಾಗಿದೆ. ಇಲ್ಲಿ ವೀಕ್ಷಕರಲ್ಲಿ ಸೃಷ್ಟಿಯಾಗುವ ಜಗತ್ತು ಭ್ರಾಮಕವಾಗಿದ್ದರೂ ಬಹಳ ಬೇಗನೇ ಅದು ನೈಜ ಜಗತ್ತಿನಂತೆ ಭಾಸವಾಗತೊಡಗುತ್ತದೆ. ಸಾಮಾನ್ಯವಾಗಿ ವೀಕ್ಷಕರು ಆ ಸಿನಿಮಾ ಅಥವಾ ಟಿವಿ ಕಾರ್ಯಕ್ರಮ ಮುಕ್ತಾಯವಾದಾಗ ಆ ಭ್ರಾಮಕ ಜಗತ್ತಿನಿಂದ ನಿಜವಾದ ಪ್ರಪಂಚಕ್ಕೆ ಮರಳುತ್ತಾರೆ.

ಟಿವಿಯವರು ಹೇಳಿದ್ದೇ ಸರಿ. ಅಂತಿಮ ನಿರ್ಣಯ ನಮ್ಮ ಕೈಯಲ್ಲೇ ಇದೆ. ಕುಟುಂಬಗಳಲ್ಲಿ ಟಿವಿಯನ್ನು ನೋಡುವುದು ಎಂದರೆ ಒಂದು ದೈನಂದಿನ ಆಚರಣೆ ಎಂಬಂತೆ ಭಾವಿಸಲಾಗುತ್ತದೆ. ಮೊದಲು ಈ ಮನೋದಾಸ್ಯದಿಂದ ಹೊರಬರಬೇಕು. ಯಾವ ಕಾರ್ಯಕ್ರಮ, ಎಷ್ಟು ಹೊತ್ತು ನೋಡಬೇಕೆಂಬುದರ ವಿವೇಚನೆ ಇರಬೇಕು; ದೊಡ್ಡವರೇ ಸಮಯ ಹಂಚಿಕೊಂಡು ಇಡೀ ದಿನ ಟಿವಿ ಹಚ್ಚಿಟ್ಟಿದ್ದರೆ ಮಕ್ಕಳು ನೋಡದೇ ಇರಲು ಸಾಧ್ಯವೇ. ನಿರಂತರವಾಗಿ ಟಿವಿ ನೋಡುವುದರಿಂದ ಆಗುವ ಹಲವಾರು ಹಾನಿಗಳ ಅರಿವು ಇರುವ ಹೊರತಾಗಿಯೂ ನೋಡುವುದೆಂದರೆ ಮೌಢ್ಯವೇ ಸರಿ.

ಎಂ. ಅಬ್ದುಲ್ ರೆಹಮಾನ್ ಪಾಷ



ಆದರೆ ಪೂರ್ತಿಯಾಗಿ ಅಲ್ಲ. ಅವರ ಮಾನಸಿಕತೆ, ಸಾಮಾಜಿಕ ವ್ಯಕ್ತಿತ್ವ, ಹೊಣೆಗಾರಿಕೆ ಇತ್ಯಾದಿಗಳನ್ನು ಅನುಸರಿಸಿ ಕೆಲವರು ಸಂಪೂರ್ಣವಾಗಿ ವಾಸ್ತವಕ್ಕೆ ಮರಳಿ ಅದನ್ನು ಮರೆತು ಬಿಡಬಹುದು, ಇನ್ನು ಕೆಲವರು ಭಾಗಶಃ ಅಥವಾ ಕೆಲವೊಮ್ಮೆ ಪೂರ್ತಿಯಾಗಿ ಅದೇ ಭ್ರಾಮಕ ಜಗತ್ತಿನಲ್ಲಿ ಬದುಕ ತೊಡಗಬಹುದು. ಮಕ್ಕಳು ಮತ್ತು ಯುವಜನರಂಥ ಎಳೆಯ ಮನಸ್ಸುಗಳು ಇದಕ್ಕೆ ಹೆಚ್ಚು ಪಕ್ಕಾಗಬಹುದಾದರೂ ಹೆಚ್ಚು ವಯಸ್ಸಾದವರು ಇದರಿಂದ ಪೂರ್ಣ ಮುಕ್ತರು ಎಂದು ಹೇಳಲು ಸಾಧ್ಯವಿಲ್ಲ.

ಚಲಿಸುವ ಚಿತ್ರಗಳ ದೃಶ್ಯ–ಧ್ವನಿ ಮಾಧ್ಯಮ ಬೀರುವ ಈ ಅನನ್ಯ ಪ್ರಭಾವವನ್ನು ಗಮನದಲ್ಲಿರಿಸಿಕೊಂಡೇ ನಾವು ಈ ಲೇಖನದಲ್ಲಿ ಹೆಚ್ಚಾಗಿ ಟಿವಿ ಕಾರ್ಯಕ್ರಮಗಳು, ಅದರಲ್ಲಿಯೇ ಪ್ರದರ್ಶಿತವಾಗುವ ಸಿನಿಮಾಗಳು ನಮ್ಮ ಮೇಲೆ ಬೀರುವ ಪ್ರಭಾವಗಳು, ಮತ್ತು ಈ ಪ್ರಭಾವಿ ಸಾಮರ್ಥ್ಯವನ್ನೇ ಮಂತ್ರದಂಡವನ್ನಾಗಿ ಬಳಸಿ ಹೇಗೆ ಟಿವಿ ಮಾಧ್ಯಮವು ಗ್ರಾಹಕರ ಮಾನಸಿಕತೆಯ ಜೊತೆ ಆಟವಾಡಿ ತಮ್ಮ ಬೇಳೆಯನ್ನು ಬೇಯಿಸಿಕೊಳ್ಳುತ್ತವೆ ಎಂಬುದನ್ನು ಪರಿಶೀಲಿಸುವ ಪ್ರಯತ್ನವನ್ನು ಮಾಡುತ್ತದೆ.

**ಒಳ್ಳೆಯದು ಕಷ್ಟ, ಕೆಟ್ಟದ್ದು ಸುಲಭ**

ದೃಶ್ಯ–ಧ್ವನಿ ಮಾಧ್ಯಮವು ನೋಡುವವರ ಮೇಲೆ ಆಳವಾದ ಪ್ರಭಾವ ಬೀರುತ್ತದೆ ಎಂಬುದಾದರೆ ಅದು ಒಳ್ಳೆಯದೂ ಆಗಬಹುದು, ಕೆಟ್ಟದ್ದೂ ಆಗಬಹುದು. ಇದು ಮಾಧ್ಯಮದಲ್ಲಿ ಪ್ರಸಾರಗೊಳ್ಳುವ ಕಾರ್ಯಕ್ರಮಗಳ ವಸ್ತು ಮತ್ತು ವಿನ್ಯಾಸ; ಹಾಗೂ ಅದನ್ನು ಸೃಷ್ಟಿ ಮಾಡಿದವರ ಉದ್ದೇಶವನ್ನು ಅವಲಂಬಿಸಿರುತ್ತದೆ. ವಿಪರ್ಯಾಸದ ಸಂಗತಿಯೆಂದರೆ ಒಳ್ಳೆಯದನ್ನು ತೋರಿಸುವಾಗ ಆದರ್ಶಪ್ರಾಯವಾಗಿ ಕಟ್ಟಿಕೊಡುವ ಸನ್ನಿವೇಶಗಳ ವಾಸ್ತವ ಜಗತ್ತಿನಲ್ಲಿ ಎಲ್ಲರಿಗೂ ಲಭ್ಯವಿರುವುದಿಲ್ಲವಾದ್ದರಿಂದ ಅದನ್ನು ನೋಡಿ ಆನಂದಿಸಬಹುದೇ ವಿನಾ ಅದನ್ನು ಅನುಸರಿಸಿ ಒಳ್ಳೆಯವರಾಗುವುದು ಅತಿ ಕಷ್ಟದ ಕೆಲಸ. ಬದಲಿಗೆ ಹೆಚ್ಚಿನ ವೀಕ್ಷಕರು ಬಡತನ, ಹತಾಶೆ, ನಿರುದ್ಯೋಗ, ಅಸಹಾಯಕತೆ, ಅಸೂಯೆಗಳ ನಡುವೆಯೇ ಬದುಕುತ್ತಿರುವುದರಿಂದ ಟಿವಿ ಕಾರ್ಯಕ್ರಮಗಳಲ್ಲಿ ತೋರಿಸುವ ಕೆಟ್ಟದ್ದೇ ಅವರ ಮೇಲೆ ಹೆಚ್ಚು ಸುಲಭವಾಗಿ ಮತ್ತು ವ್ಯಾಪಕವಾಗಿ ಪ್ರಭಾವ ಬೀರುತ್ತದೆ. ಟಿವಿ ಮಾಧ್ಯಮವು ಮಾಹಿತಿ, ಶಿಕ್ಷಣ, ಜಾಗೃತಿ, ಮಾರ್ಗದರ್ಶನ ಇತ್ಯಾದಿಗಳನ್ನು ನೀಡುವ ಕುರಿತು ಎರಡು ಮಾತೇ ಇಲ್ಲ. ಅದು ನಮಗೆ ತಿಳಿದದ್ದೇ, ಆದರೆ ಈ ಲೇಖನದಲ್ಲಿ ನಾವು ಅದು ಬೀರುವ ದುಷ್ಪರಿಣಾಮಗಳ ಕುರಿತು ಮಾತ್ರ ಗಮನ ಹರಿಸುತ್ತಿದ್ದೇವೆ.

ಸಾಮಾನ್ಯವಾಗಿ ನಾವು ಟಿವಿಯನ್ನು ಬಹಳ ಆರಾಮವಾದ, ಸೋಮಾರಿತನದ ಮನಸ್ಥಿತಿಯಲ್ಲಿ ನೋಡುತ್ತೇವೆ. ಅದಕ್ಕೆ ಒಪ್ಪಿಸಿಕೊಂಡು ನೋಡುತ್ತೇವೆ. ಇಂಥ ಮಾನಸಿಕ ಸ್ಥಿತಿಯು ಟಿವಿ, ಸಿನಿಮಾ ವೀಕ್ಷಣೆ ನಮ್ಮ ಮೇಲೆ ಪ್ರಭಾವ ಬೀರುವುದಕ್ಕೆ ಫಲವತ್ತಾಗಿರುತ್ತದೆ. ಟಿವಿ, ಸಿನಿಮಾಗಳು ಮೊದಲು ನಮ್ಮ ಆಲೋಚನಾ ಲಹರಿ, ಮನೋಭಾವದ ಮೇಲೆ ಪ್ರಭಾವ ಬೀರುತ್ತಾ ಹೋಗುತ್ತವೆ, ಅವು ಹೇಳುವುದನ್ನು ಪ್ರಶ್ನಿಸದೇ ಹಾಗೆ ಹಾಗೆಯೇ ಒಪ್ಪಿಕೊಳ್ಳುತ್ತಾ ಹೋದ ಹಾಗೆ ನಾವು ಬೆಳೆಸಿಕೊಂಡ ಇಂಥ ಮನೋಭಾವವು ನಮ್ಮ ವರ್ತನೆಯಲ್ಲಿ, ಸಂಬಂಧಗಳಲ್ಲಿ ಕಾಣಿಸಿಕೊಂಡು, ಸ್ಥಾಪಿತವಾಗಿ ಬಿಡುತ್ತದೆ. ಈ ಮನೋದಾಸ್ಯದ ಪರಿಸ್ಥಿತಿಯು ಟಿವಿ ವಾಹಿನಿಗಳನ್ನು ಜನಪ್ರಿಯಗೊಳಿಸುವ, ಅದರಲ್ಲಿ ಪ್ರಸಾರವಾಗುವ ಜಾಹಿರಾತುಗಳ ಮೂಲಕ ಗ್ರಾಹಕ ವಸ್ತುಗಳನ್ನು ಮಾರುವುದಕ್ಕೆ ಅತ್ಯಂತ ಪ್ರಶಸ್ತವಾಗಿರುತ್ತದೆ. ಇದಕ್ಕೆಂದೆ ಇಂಥ ಮನಸ್ಥಿತಿಯನ್ನು ಸಾಮೂಹಿಕವಾಗಿ ಹರಡಲು ಟಿವಿ ವಾಹಿನಿಯವರು, ಸೀರಿಯಲ್, ಸಿನಿಮಾದವರು, ಜಾಹಿರಾತುದಾರರು ಎಲ್ಲರೂ ಕೈಜೋಡಿಸಿ ಕೆಲಸ ಮಾಡುತ್ತಾರೆ, ಇದು ಉದ್ಯಮದ ಮೂಲ ಧನಿಗಳಾದ ಗ್ರಾಹಕ ವಸ್ತುಗಳ ಮಾರಾಟದಾರರಿಗೆ ಪ್ರಯೋಜನಕಾರಿಯಾಗಿರುತ್ತದೆ.

ಟಿವಿಯಲ್ಲಿ ರಂಜನೆಯ, ಮಾರ್ಗದರ್ಶನದ ಹೆಸರಿನಲ್ಲಿ ಪ್ರಸಾರವಾಗುವ ಕಾರ್ಯಕ್ರಮಗಳಲ್ಲಿ ಹೆಚ್ಚಿನ ಭಾಗ ಧಾರಾವಾಹಿಗಳು, ರಿಯಾಲಿಟಿ ಶೋಗಳು ಮತ್ತು ಸಮಾಲೋಚನಾ ಕಾರ್ಯಕ್ರಮಗಳು ಒಳಗೊಂಡಿರುತ್ತವೆ. ಅದರಲ್ಲೂ ನಾವು ಮೊದಲು ಗಮನಿಸಿ ನೋಡುತ್ತಿರುವುದು, ಮೌಢ್ಯವನ್ನು ಬಿತ್ತಿ ಪೋಷಿಸುವಂಥ ಕಾರ್ಯಕ್ರಮಗಳನ್ನು. ಫಲಜ್ಯೋತಿಷ, ವಾಸ್ತು, ಸಂಖ್ಯಾಶಾಸ್ತ್ರ, ಆತ್ಮ, ಪುನರ್ಜನ್ಮ, ಪ್ರಾಚೀನ ವೈದ್ಯ, ಮಾಂತ್ರಿಕತೆ, ಅಲೌಕಿಕ ಶಕ್ತಿಗಳು ಇತ್ಯಾದಿ ವಿಚಾರಗಳನ್ನು ಆಧರಿಸಿ ಅನೇಕ ಕಾರ್ಯಕ್ರಮಗಳು ಟಿವಿಯಲ್ಲಿ ಅವ್ಯಾಹತವಾಗಿ ಪ್ರಸಾರವಾಗುತ್ತವೆ. ಇವೆಲ್ಲವೂ ನಮ್ಮ ಬದುಕನ್ನು ಹಸನುಗೊಳಿಸುವ ಸಲುವಾಗಿ ಅವರು ನೀಡುವ ಸಲಹೆ ಸೂಚನೆಗಳಾಗಿ ಕಂಡರೂ ಆಯಾ ವ್ಯಕ್ತಿ/ಸಂಸ್ಥೆಗಳು ಒದಗಿಸುವ ಸೇವೆ ಅಥವಾ ಅವರು ಮಾರುವ ಮಾಂತ್ರಿಕ ಪರಿಹಾರದ ವಸ್ತುಗಳನ್ನು ಖರೀದಿಸುವತ್ತ ನಮ್ಮನ್ನು ಪ್ರೇರೇಪಿಸುತ್ತಿರುತ್ತವೆ. ಇದು ನಮಗೆ ಗೊತ್ತಾಗದೇ ಆಗಿರುತ್ತದೆ. ನಿಗೂಢ, ವಿಸ್ಮಯ, ಪ್ರಶ್ನಾತೀತ ಎಂಬ ವೇಶದಲ್ಲಿ ಬರುವ ಕಾರ್ಯಕ್ರಮಗಳು ನಮ್ಮಲ್ಲಿ ಭಯ, ಅವಿಶ್ವಾಸ, ಅಲೌಕಿಕತೆಯಲ್ಲಿ ನಂಬಿಕೆಯನ್ನು ಹೆಚ್ಚಿಸುತ್ತವೆ. ಸ್ವವಿಶ್ವಾಸ ಕಳೆದುಕೊಂಡ ವೀಕ್ಷಕರು ಹೆಚ್ಚು ಹೆಚ್ಚು ಪೂಜೆ ಪುನಸ್ಕಾರ, ಹಲವಾರು ದೇವರು, ಧರ್ಮಸ್ಥಳಗಳಿಗೆ, ದರಗಾಗಳಿಗೆ ಭೇಟಿ, ಹರಕೆ ಇತ್ಯಾದಿಗಳಲ್ಲಿ ಇದ್ದದ್ದನ್ನೂ ಕಳೆದುಕೊಳ್ಳುತ್ತಾರೆ.

ಸೀರಿಯಲ್‌ಗಳೂ ಇದಕ್ಕೆ ಹೊರತಾಗಿಲ್ಲ. ವಿಸ್ಮಯ, ರೋಚಕತೆ, ಮಾದಕತೆ, ದ್ವೇಷ, ಪಿತೂರಿ, ಹಿಂಸಾಚಾರ ಇವು ಅತ್ಯಂತ ಬಿಸಿಬಿಸಿಯಾಗಿ ಮಾರಾಟವಾಗುವ ವಸ್ತುಗಳು ಎಂಬುದು ಟಿವಿಯವರಿಗೆ ತಿಳಿದುಹೋಗಿದೆ. ಅವರೇ ಕಾಲಾಂತರದಿಂದ ಇವುಗಳನ್ನು ಬಗೆಬಗೆಯ ರುಚಿಗಳಲ್ಲಿ ಉಣಬಡಿಸಿ, ವೀಕ್ಷಕರಲ್ಲಿ ಅದನ್ನೇ ಚಟವನ್ನಾಗಿಸಿದ್ದಾರೆ ಕೂಡ. ಸೀರಿಯಲ್ ಮಾಡುವವರು ಇವುಗಳನ್ನೇ ತಮ್ಮ ಮೂಲಬಂಡವಾಳವನ್ನಾಗಿಸಿಕೊಳ್ಳುತ್ತಾರೆ. ಇತ್ತೀಚೆಗೆ ಇಚ್ಛಾಧಾರಿ ನಾಗಿಣಿ, ವಿಷಕನ್ನೆಯರು, ಮನುಷ್ಯರ ರೂಪದಲ್ಲಿ ಅವರ ನಡುವೆಯೇ ಇರುವ ದೇವತೆಯರು, ಆತ್ಮ, ಭೂತ, ಪ್ರೇತಗಳ ಪಾತ್ರಗಳು, ಸಮಯಕ್ಕೆ ಸರಿಯಾಗಿ ಬಂದೊದಗುವ ದೇವರುಗಳು ಇತ್ಯಾದಿ ಕಥೆಗಳು ಹೆಚ್ಚಾಗಿವೆ. ಇದನ್ನೇ ಅನುಸರಿಸಿ ಪೌರಾಣಿಕ ಕಥಾವಸ್ತುವಿನ ಧಾರಾವಾಹಿಗಳೂ ಹೆಚ್ಚಾಗತೊಡಗಿವೆ. ಇಂಥ ಕಥೆಗಳ ನಿರೂಪಣೆಯಲ್ಲಿ ಪೌರಾಣಿಕ ಮೌಲ್ಯಗಳನ್ನೆಲ್ಲಾ ಹಾಳುಗೆಡವಿ ಅದರಲ್ಲೂ ರೋಚಕತೆ, ಮಾದಕತೆಗೆ ಮಾರು ಹೋಗಿ ಪುರಾಣಗಳಿಗೂ ಅನ್ಯಾಯ ಮಾಡಲಾಗುತ್ತಿದೆ.

**ಜಾಹಿರಾತುಗಳ ಸಂಮೋಹಕ ಜಗತ್ತು**

ಟಿವಿ ಚಾನಲುಗಳನ್ನು ನೋಡಲು ಗ್ರಾಹಕರು ಪ್ರಸಾರಕರಿಗೆ ಶುಲ್ಕವನ್ನು ಕೊಡುತ್ತಾರೆ. ಆದರೆ ಅದು ನಿಜವಾಗಿಯೂ ಏನೂ ಅಲ್ಲ. ಕೋಟಿಗಟ್ಟಲೆ






ಹೂಡಿ ವಾಹಿನಿಗಳನ್ನು ಸ್ಥಾಪಿಸಿ, ಅವನ್ನು ನಡೆಸಲು ಪ್ರತಿ ತಿಂಗಳೂ ಲಕ್ಷಗಟ್ಟಲೆ ವ್ಯಯ ಮಾಡಬೇಕಾಗಿರುವ ಟಿವಿ ಚಾನಲುಗಳು ಬದುಕುವುದೇ ಅವುಗಳಲ್ಲಿ ಪ್ರಸಾರವಾಗುವ ಜಾಹಿರಾತುಗಳಿಂದ. ಸಾವಿರಾರು ಸಾವಿರಾರು ಗ್ರಾಹಕ ವಸ್ತುಗಳ ಉತ್ಪಾದಕರು ಜಾಹಿರಾತು ಸಂಸ್ಥೆಗಳನ್ನು ಸಂಪರ್ಕಿಸುತ್ತಾರೆ, ಈ ವೃತ್ತಿಪರ ಸಂಸ್ಥೆಗಳು ಗ್ರಾಹಕ ವಸ್ತು ಅಥವಾ ಸೇವೆಗಳ ಕುರಿತು ವಿಡಿಯೋ ಜಾಹಿರಾತುಗಳನ್ನು ನಿರ್ಮಿಸುತ್ತಾರೆ. ಮತ್ತು ಅವುಗಳನ್ನು ಉತ್ಪಾದಕರ ಸಮಾಲೋಚನೆಯೊಂದಿಗೆ ಯಾವ ವಾಹಿನಿಯ, ಯಾವ ಕಾರ್ಯಕ್ರಮದ ಜೊತೆಯಲ್ಲಿ ಎಷ್ಟು ಹೊತ್ತಿನಲ್ಲಿ ಪ್ರಸಾರ ಮಾಡಬೇಕು ಎಂಬುದನ್ನು ನಿರ್ಧರಿಸುತ್ತವೆ. ಇಂಥ ಜಾಹಿರಾತುಗಳನ್ನು ಆಕರ್ಷಿಸಲು, ಮತ್ತು ಪ್ರತಿ ಜಾಹಿರಾತಿನಿಂದ ಆದಷ್ಟು ಹೆಚ್ಚು ಲಕ್ಷಗಳನ್ನು ಗಳಿಸಲು ಟಿವಿ ವಾಹಿನಿಗಳಿಗೆ ಇರುವ ಒಂದೇ ಒಂದು ಉಪಾಯವೆಂದರೆ ತಮ್ಮಲ್ಲಿ ಪ್ರಸಾರವಾಗುವ ಕಾರ್ಯಕ್ರಮವನ್ನು ಆದಷ್ಟು ಹೆಚ್ಚು ಗ್ರಾಹಕರು ವೀಕ್ಷಿಸುವಂತೆ ಮಾಡುವುದು. ಇದೇ ಟಿಆರ್‌ಪಿ ಮಾನದಂಡ. ಇದನ್ನು ಪಡೆಯಲು ವಾಹಿನಿಗಳು ಅಕ್ಷರಶಃ 'ಏನು ಬೇಕಾದರೂ ಮಾಡಲು' ಸಿದ್ಧವಾಗಿಬಿಡುತ್ತವೆ. ಸಾಮಾಜಿಕ ಕಾಳಜಿ, ಪ್ರಗತಿಪರತೆ, ವೈಚಾರಿಕತೆ ಇವು ಯಾವುವೂ ಅವರ ನಿಘಂಟುಗಳಲ್ಲಿ ಇರುವುದಿಲ್ಲ. ಅವರ ಪದಕೋಶದಲ್ಲಿರುವುದು ಒಂದೇ ಪದ "ಹಣ". ಟಿವಿ ಪ್ರಸಾರವನ್ನು ಒಂದು ವಾಣಿಜ್ಯ ಉದ್ಯಮ ಎಂದು ಒಪ್ಪಿಕೊಂಡ ಮೇಲೆ ಇದೆಲ್ಲವೂ ಒಂದು ರೀತಿ ನ್ಯಾಯಸಮ್ಮತವೇ ಆಗಿಬಿಡುತ್ತದೆ.

ಜಾಹಿರಾತುಗಳು ಗ್ರಾಹಕರಿಗೆ ಪ್ರಯೋಜನಕಾರಿಯಾಗಿರುತ್ತವೆ. ನಮಗೆ ಅಗತ್ಯವಾದ ವಸ್ತು, ಸೇವೆ, ಘಟನೆ, ಕಾರ್ಯಕ್ರಮ ಇತ್ಯಾದಿಗಳ ಬಗ್ಗೆ ಉಪಯುಕ್ತ ಮಾಹಿತಿಯನ್ನು ನೀಡುತ್ತವೆ. ಈ ಮೂಲಕ ವಿಪುಲವಾದ ಆಯ್ಕೆಯನ್ನು ಸೃಷ್ಟಿಸುತ್ತವೆ. ಆದರೂ ಗ್ರಾಹಕ ವಸ್ತುಗಳ ಜಾಹಿರಾತುಗಳ ಮೂಲ ಉದ್ದೇಶ ಇದಾಗಿರುವುದಿಲ್ಲ. ಅವು ನಮಗೆ ಅಗತ್ಯವಿಲ್ಲದ ವಸ್ತುಗಳ ಬಗ್ಗೆಯೂ ನಮ್ಮಲ್ಲಿ ವಾಂಛೆಯನ್ನು ಮೂಡಿಸುತ್ತವೆ, ಒಂದೇ ಬಗೆಯ ವಸ್ತುವಿನ ಹಲವಾರು ಬ್ರಾಂಡುಗಳು ಇರುವುದರಿಂದ ಅವು ಪರಸ್ಪರ ಪೈಪೋಟಿಗೆ ಇಳಿಯುತ್ತವೆ. ಬೇರೆಯೆಲ್ಲಾ ಬ್ರಾಂಡುಗಳು ಬುರ್ನಾಸು, ನಮ್ಮದೇ ಸರ್ವಶ್ರೇಷ್ಠ ಎಂದು ಸಾಬೀತು ಮಾಡಲು ಅವು ಹವಣಿಸುತ್ತವೆ. ಹೀಗಾಗಿ ತಮ್ಮ ವಸ್ತುಗಳ ಅವಗುಣಗಳನ್ನು ಅದುಮಿಟ್ಟು, ಗುಣಗಳನ್ನು ಗುಡ್ಡ ಮಾಡಿತೋರಿಸುತ್ತವೆ. ಅತ್ಯುತ್ತಮ, ಜಗತ್ತಿನಲ್ಲಿಯೇ ನಂ. ೧, ಸರ್ವಶ್ರೇಷ್ಠವೆಂದು ಸಾಬೀತಾಗಿದೆ, ವಿಜ್ಞಾನಿಗಳೇ ಹೇಳಿದ್ದಾರೆ ಎಂಬೆಲ್ಲಾ ಗುಣವಾಚಕಗಳನ್ನು ಸೇರಿಸಿದರೂ ಅವು ಯಾವುದಕ್ಕೂ ಪುರಾವೆ ಇರಬೇಕೆಂದೇನೂ ಇಲ್ಲ. ಗ್ರಾಹಕರು ಅವುಗಳ ಮೋಹಕ ಜಾಲದಲ್ಲಿ ಸಿಲುಕಿ ಜಾಹಿರಾತುಗಳಲ್ಲಿ ಕಾಣುವ ವಸ್ತುಗಳನ್ನು, ಸೇವೆಗಳನ್ನು ಆದಷ್ಟು ಬೇಗ ಖರೀದಿಸುತ್ತಾರೆ. ಈಗಂತೂ ಆನ್‌ಲೈನ್ ಖರೀದಿಯ ಪದ್ಧತಿ ಜಾರಿಯಲ್ಲಿರುವುದರಿಂದ ಟಿವಿಯಲ್ಲಿ ಜಾಹಿರಾತನ್ನು ನೋಡಿದ ಕ್ಷಣ ಮಾತ್ರದಲ್ಲಿ ಲಕ್ಷಾಂತರ ಖರೀದಿಯ ಬೇಡಿಕೆಗಳು ದಾಖಲಾಗುವುದನ್ನು ನೋಡುತ್ತೇವೆ. ಈ ಮೂಲಕ ವಸ್ತು ಮತ್ತು ಸೇವೆಗಳ ಉತ್ಪಾದಕರು ತಮ್ಮ ಉದ್ದೇಶವನ್ನು ಸಾಧಿಸಿರುತ್ತಾರೆ, ಇದರಿಂದ ಟಿವಿ ವಾಹಿನಿಗಳೂ ಲಾಭವನ್ನು ಮಾಡಿ ಕೊಂಡಿರುತ್ತವೆ, ಗ್ರಾಹಕರು ಹೆಚ್ಚು ಹೆಚ್ಚು ಕೊಳ್ಳುಬಾಕರಾಗಿರುತ್ತಾರೆ.

**ಆಯ್ಕೆಯೇ ದೊಡ್ಡ ಸಮಸ್ಯೆ**

ಬಹಳ ವರ್ಷಗಳ ಹಿಂದೆಯೇ ವಿಜ್ಞಾನ ಕಥಾಲೇಖಕ ಆರ್ಥರ್ ಸಿ ಕ್ಲಾರ್ಕ್ ಹೇಳಿದ್ದರು, "ಇಂಟರ್‌ನೆಟ್‌ನಲ್ಲಿ ಮಾಹಿತಿಯನ್ನು ಪಡೆಯುವುದು ಎಂದರೆ ಬಾಯಾರಿಕೆಯನ್ನು ನೀಗಿಸಿಕೊಳ್ಳಲು ನಯಾಗರ ಜಲಪಾತದಲ್ಲಿ ಬಾಯಿ ಒಡ್ಡಿದ ಹಾಗೆ" ಎಂದು. ಟೆಲಿವಿಷನ್ ಚಾನಲುಗಳ ಕಥೆಯೂ ಹಾಗೇ ಆಗಿದೆ. ೧೯೯೨ರಲ್ಲಿ ಎಸ್.ಟಿ.ಎ.ಆರ್. ಸಂಸ್ಥೆ ಉಪಗ್ರಹದ ಮೂಲಕ ಆಕಾಶದಿಂದ ಲಗ್ಗೆ ಇಡುವವರೆಗೆ ಕೇಂದ್ರ ಸರಕಾರದ ವಾರ್ತಾ ಮತ್ತು ಪ್ರಸಾರ ಇಲಾಖೆಯ ಅಂಗವಾಗಿದ್ದ ದೂರದರ್ಶನ ಮಾತ್ರ ದೇಶದಲ್ಲಿ ಮೊಳಗುತ್ತಿದ್ದ ಏಕೈಕ ಟಿವಿ ಚಾನಲ್ ಆಗಿತ್ತು. ಅದು ರಾಷ್ಟ್ರೀಯ ಚಾಲನ್ ಆಗಿದ್ದರಿಂದ ಈ ದೇಶದ ಜನರೊಂದಿಗೆ ಬೆಳಿಗ್ಗೆ ೬ ಗಂಟೆಗೆ ಎದ್ದು ಸುಪ್ರಭಾತ ಹಾಡುತ್ತಿತ್ತು; ರಾತ್ರಿ ೧೦ ಗಂಟೆಗೆ ಜನಗಣಮನ ಹಾಡಿ ಮಲಗಿಬಿಡುತ್ತಿತ್ತು. ದೇಶವು ಹಾಕಿಕೊಳ್ಳುವ ಅಭಿವೃದ್ಧಿ ಯೋಜನೆಗಳ ಕುರಿತು ಜನರಲ್ಲಿ ಜಾಗೃತಿಯನ್ನು ಮೂಡಿಸುತ್ತಿತ್ತು. ವಯಸ್ಕರ ಶಿಕ್ಷಣದ ಸಾಧನವಾಗಿತ್ತು. ಮಾಹಿತಿ, ಶಿಕ್ಷಣದ ನಂತರ ಅದರ ಮೂರನೇ ಗುರಿ ರಂಜನೆಯಾಗಿತ್ತು. ಆದರೆ ಝೀ ಟಿವಿಯ ಪ್ರಸಾರದಿಂದ ಖಾಸಗಿ ಟಿವಿ ಚಾನಲುಗಳು ನೆಲೆಯೂರಿದ ನಂತರ ಅವು ಪುಂಖಾನುಪುಂಖವಾಗಿ ಬೆಳೆದವು. ೨೦೧೮ರ ಸೆಪ್ಟೆಂಬರ್ ಹೊತ್ತಿಗೆ ಭಾರತದಲ್ಲಿ ೮೭೭ ಖಾಸಗಿ ಉಪಗ್ರಹ ಟೆಲಿವಿಷನ್ ಚಾನಲುಗಳು ಕೆಲಸ ಮಾಡುತ್ತಿವೆ.

ನಾವು ಕೇಬಲ್ ಮೂಲಕವೋ ಅಥವಾ ಉಪಗ್ರಹದಿಂದ ನೇರವಾಗಿಯೋ (ಡಿಟಿಎಚ್) ನಮ್ಮ ಮನೆಯ ಟಿವಿಯಲ್ಲಿ ೧೦೦ರಿಂದ ೪೫೦ರವರೆಗೆ ಚಾನಲುಗಳನ್ನು ಪಡೆಯುತ್ತಿದ್ದೇವೆ. ಸರಾಸರಿ ೨೦೦ ಚಾನಲುಗಳು ಬರುತ್ತವೆ ಎಂದೇ ಇಟ್ಟುಕೊಳ್ಳಿ. ಪ್ರತಿಯೊಂದು ಚಾನಲು ದಿನದ ೨೪ ಗಂಟೆ ಕಾರ್ಯಕ್ರಮವನ್ನು ಪ್ರಸಾರ ಮಾಡುತ್ತದೆ. ಎಂದರೆ ಒಂದು ದಿನದಲ್ಲಿ ನಮಗೆ ೨೦೦ x ೨೪ = ೪,೮೦೦ ಗಂಟೆಗಳ ರಂಜನೆ ನಮಗೆ ಲಭ್ಯವಿದೆ. ಭಾರತೀಯರು ದಿನಕ್ಕೆ ಸರಾಸರಿ ೪ ಗಂಟೆ ಟಿವಿ ನೋಡುತ್ತಾರೆ ಎಂಬ ಅಂದಾಜಿದೆ. ಇದರ ಒಟ್ಟಾರೆ ಅರ್ಥ ಏನಾಯಿತು ಎಂದರೆ: ಈ ನಾಲ್ಕು ಗಂಟೆಗಳಲ್ಲಿ ಆಯ್ಕೆ ಮಾಡಿಕೊಂಡು ನೋಡುವುದಕ್ಕೆ ನಮಗೆ ೪,೮೦೦ ಗಂಟೆಗಳ ಕಾರ್ಯಕ್ರಮ ಲಭ್ಯವಿರುತ್ತದೆ ಎಂದರ್ಥ. ಇದೇ ನಯಾಗರ ಜಲಪಾತ, ನಮ್ಮ ಆಯ್ಕೆ ಎದುರಿಸುವ ಬೃಹತ್ ಸವಾಲು. ಇರುವಷ್ಟೇ ಜನರಲ್ಲಿ, ಅವರಿಗೆ ಲಭ್ಯವಿರುವ ಹೇರಳವಾದ ಅವಕಾಶದಲ್ಲಿ ಪ್ರತಿಯೊಬ್ಬ ವೀಕ್ಷಕರೂ ತಮ್ಮದೇ ಕಾರ್ಯಕ್ರಮವನ್ನು ನೋಡುವಂತೆ ಮಾಡುವುದು ವಾಹಿನಿಗಳ ಉದ್ದೇಶವಾಗಿರುತ್ತದೆ. ಈ ದೈತ್ಯ ಸ್ಪರ್ಧೆಯಲ್ಲಿ ವಾಹಿನಿಗಳು ಸಾಮಾಜಿಕ ನೈತಿಕತೆಯನ್ನು ಕಳೆದುಕೊಳ್ಳುತ್ತವೆ, ವೀಕ್ಷಕರು ಮಾನಸಿಕ ಸ್ವಾಸ್ಥ್ಯವನ್ನು ಕಳೆದುಕೊಳ್ಳುತ್ತಾರೆ.

**ನಿಯಂತ್ರಣ ನಮ್ಮ ಕೈಯಲ್ಲಿ**

ಟಿವಿ ಚಾನಲ್‌ನವರೋ ಸೀರಿಯಲ್ ನಿರ್ಮಾಪಕರೋ ಮಾತಿಗೆ ಸಿಕ್ಕಾಗ ನಿಮ್ಮ ಕಾರ್ಯಕ್ರಮಗಳು ಕಳಪೆಯಾಗಿವೆ ಎಂದು ಹೇಳಲು ನೋಡುತ್ತೇವೆ. ಆಗ ಅವರು ಕೊಡುವಷ್ಟು ವಿವರ ಕೊಟ್ಟು ಹೇಳುವುದಿಷ್ಟೇ, 'ನೀವು ನಮ್ಮ ಕಾರ್ಯಕ್ರಮಗಳನ್ನು ನೋಡಲೇ ಬೇಕೆಂದಿಲ್ಲ. ಅದಕ್ಕೆ ನಿಮ್ಮ ಕೈಯಲ್ಲಿ ರಿಮೋಟ್ ನಿಯಂತ್ರಕವನ್ನು ಕೊಟ್ಟಿದ್ದೇವಲ್ಲ, ಬೇಡವಾದರೆ ಬೇರೆ ಚಾನಲ್ ನೋಡಿ. ಯಾವುದೂ ಬೇಡವಾದ ಟಿವಿಯನ್ನೇ ಆಫ್ ಮಾಡಿ, ಅದೂ ನಿಮ್ಮ ಕೈಯಲ್ಲಿದೆ'. ಇದು ವಾಸ್ತವ, ಏಕೆಂದರೆ ಅವರೂ ಕಾರ್ಯಕ್ರಮಗಳನ್ನು ಪ್ರಸಾರ ಮಾಡುವುದು ಚೆನ್ನಾಗಿಲ್ಲ ಎಂದು ಟೀಕಿಸುವ ನಮ್ಮಂಥ ಅಲ್ಪಸಂಖ್ಯಾತರಿಗಲ್ಲ. ಅವರಿಗೆ ಈಗಾಗಲೇ ನಿಷ್ಠಾವಂತರಾದ ವೀಕ್ಷಕರು ಇದ್ದಾರೆ. ಅವರನ್ನು ಈಗಾಗಲೇ ಇಂಥ ನಿಷ್ಪ್ರಯೋಜಕ ಸಾಮಗ್ರಿಯನ್ನು ಯಾವುದೇ

ಪ್ರತಿಕ್ರಿಯೆಯಿಲ್ಲದೇ ರೋಬೋಟ್‌ಗಳ ತರ ನೋಡುವುದನ್ನು ಅಭ್ಯಾಸ ಮಾಡಿಸಿಬಿಟ್ಟಿದ್ದಾರೆ. ಅಲ್ಲದೇ, ಅವರು ಅಪ್ಪಟ ವಾಣಿಜ್ಯ ದೃಷ್ಟಿಯಿಂದ ನೋಡುವಾಗ ನಾವು ಹೇಳುವ ಸಾಮಾಜಿಕ ಕಾಳಜಿ, ಉತ್ತಮ ಗುಣಮಟ್ಟ ಇವೆಲ್ಲವೂ ಅವರಿಗೆ ತುಂಬ ದುಬಾರಿಯಾಗಿಬಿಡುತ್ತವೆ. ಹಾಗಾದರೆ ಇವತ್ತಿನ ವಾಹಿನಿಗಳ ಕಾರ್ಯಕ್ರಮಗಳ ದುಷ್ಪ್ರಭಾವದಿಂದ ಉಳಿದುಕೊಳ್ಳುವುದು, ಎಳೆಯ ಮನಸ್ಸುಗಳನ್ನು ಉಳಿಸುವುದು ಹೇಗೆ?

ಟಿವಿಯವರು ಹೇಳಿದ್ದೇ ಸರಿ. ಅಂತಿಮ ನಿರ್ಣಯ ನಮ್ಮ ಕೈಯಲ್ಲೇ ಇದೆ. ಕುಟುಂಬಗಳಲ್ಲಿ ಟಿವಿಯನ್ನು ನೋಡುವುದು ಎಂದರೆ ಒಂದು ದೈನಂದಿನ ಆಚರಣೆಯೆಂಬಂತೆ ಭಾವಿಸಲಾಗುತ್ತದೆ. ಮೊದಲು ಈ ಮನೋದಾಸ್ಯದಿಂದ ಹೊರಬರಬೇಕು. ಯಾವ ಕಾರ್ಯಕ್ರಮ, ಎಷ್ಟು ಹೊತ್ತು ನೋಡಬೇಕು ಎಂಬುದರ ವಿವೇಚನೆಯಿರಬೇಕು; ದೊಡ್ಡವರೇ ಸಮಯ ಹಂಚಿಕೊಂಡು ಇಡೀ ದಿನ ಟಿವಿಯನ್ನು ಹಚ್ಚಿಟ್ಟಿದ್ದರೆ ಮಕ್ಕಳು ನೋಡದೇ ಇರಲು ಸಾಧ್ಯವೇ. ನಿರಂತರವಾಗಿ ಟಿವಿ ನೋಡುವುದರಿಂದ ಆಗುವ ಹಲವಾರು ಹಾನಿಗಳ ಅರಿವು ಇರುವ ಹೊರತಾಗಿಯೂ ನೋಡುವುದೆಂದರೆ ಮೌಢ್ಯವೇ ಸರಿ.

ಸಾಮುದಾಯಿಕ, ಸಾಮಾಜಿಕ ಸಂಸ್ಥೆಗಳು ಮಾಧ್ಯಮ ಜಾಗೃತಿ ಶಿಬಿರಗಳನ್ನು ನಡೆಸುವ ಕುರಿತು ಗಂಭೀರವಾಗಿ ಆಲೋಚಿಸಬೇಕು. ಟಿವಿ ಚಾನಲುಗಳು ಮಾರುವ ಸಾಮಗ್ರಿಗೆ ವೀಕ್ಷಕರೇ ಗ್ರಾಹಕರು. ಜಾಗೃತ ಗ್ರಾಹಕರೇ ಸಾಮಗ್ರಿಯ ಗುಣಮಟ್ಟವನ್ನು ನಿರ್ಣಯಿಸುವಂತಾಗಬೇಕು. ಕೆಟ್ಟ ಕಾರ್ಯಕ್ರಮಗಳನ್ನು ನಿರಾಕರಿಸಿ, ಒಳ್ಳೆಯ ಕಾರ್ಯಕ್ರಮಗಳನ್ನು ಉತ್ತೇಜಿಸುವುದಾದರೆ ಟಿವಿ ಚಾನಲುಗಳು ಅಂಥ ಕಾರ್ಯಕ್ರಮಗಳನ್ನೇ ಮಾಡುತ್ತಾರೆ. ಅವರಿಗೇ ಹೆಚ್ಚು ನೋಡಬೇಕು ಅಷ್ಟೆ!

**ಕಾನೂನಾತ್ಮಕ ನಿರ್ಬಂಧಗಳು**

ಕೇಂದ್ರ ವಾರ್ತಾ ಮತ್ತು ಪ್ರಸಾರ ಇಲಾಖೆಯ ವ್ಯಾಪ್ತಿಯಲ್ಲಿ ಕೆಲಸ ಮಾಡುವ ಸೆನ್ಸಾರ್ ಮಂಡಳಿ (ಕೇಂದ್ರ ಚಲನಚಿತ್ರ ಪ್ರಮಾಣ ಮಂಡಳಿ)ಯು ಚಿತ್ರಮಂದಿರಗಳಲ್ಲಿ ಪ್ರಸಾರವಾಗುವ ಎಲ್ಲಾ ಬಗೆಯ ಚಲನಚಿತ್ರಗಳು, ಜಾಹಿರಾತು ಚಿತ್ರಗಳನ್ನು ಪರಿಶೀಲಿಸಿ, ಆಕ್ಷೇಪಣೀಯ ಸಾಮಗ್ರಿ ಇದ್ದರೆ ಅದನ್ನು ಕತ್ತರಿಸಿ ಹಾಕಿ, ಚಿತ್ರದ ವಸ್ತು, ನಿರೂಪಣೆ ಇತ್ಯಾದಿಗಳ ಆಧಾರದ ಮೇಲೆ U (ಮುಕ್ತ ಪ್ರದರ್ಶನ), UA (ದೊಡ್ಡವರ ಉಸ್ತುವಾರಿಯಲ್ಲಿ ಮಕ್ಕಳು ನೋಡಬಹುದಾದ) ಮತ್ತು A (೧೮ ವರ್ಷಕ್ಕಿಂತ ಮೇಲ್ಪಟ್ಟವರು ಮಾತ್ರ ನೋಡಬಹುದಾದ) – ಎಂಬ ವರ್ಗೀಕರಣ ಮಾಡಿ, ಆ ಪ್ರಕಾರ ಪ್ರಮಾಣ ಪತ್ರಗಳನ್ನು ನೀಡುತ್ತದೆ. ಈ ಪ್ರಮಾಣ ಪತ್ರಗಳು ಸಾರ್ವಜನಿಕ ಚಿತ್ರ ಮಂದಿರಗಳಲ್ಲಿ ಪ್ರದರ್ಶನಕ್ಕೆ ಮಾತ್ರ ಅನುಮತಿ ನೀಡುತ್ತವೆ. ಇದೇ ಸಿನಿಮಾಗಳು, ಜಾಹಿರಾತು ಚಿತ್ರಗಳು ಟೆಲಿವಿಷನ್ ಚಾನಲುಗಳ ಮೂಲಕ ಪ್ರಸಾರ ಮಾಡಬೇಕು ಎಂದಾಗ ಅವುಗಳನ್ನು ಮತ್ತೊಮ್ಮೆ ಪರಿಶೀಲಿಸಿ ಪರಿಷ್ಕರಿಸಿ ಪ್ರಮಾಣ ಪತ್ರಗಳನ್ನು ನೀಡಲಾಗುತ್ತದೆ. ಏಕೆಂದರೆ ಟಿವಿಯನ್ನು ಮನೆಗಳಲ್ಲಿ, ಸಾಮಾನ್ಯವಾಗಿ ಮನೆಮಂದಿಯೆಲ್ಲ ಒಟ್ಟಿಗೆ ಕುಳಿತು ನೋಡುತ್ತಾರೆ. ಹೀಗಾಗಿ ಇದು ಚಿತ್ರಮಂದಿರಕ್ಕಿಂತ ಹೆಚ್ಚು ಆತ್ಮೀಯ ಪರಿಸರದಲ್ಲಿರುತ್ತದೆ. ಪ್ರಸಾರವಾಗುವ ಸಾಮಗ್ರಿ ಈ ಸನ್ನಿವೇಶವನ್ನು ಗ್ರಹಿಸಿರಬೇಕಾಗುತ್ತದೆ. ಆದರೆ ವಿಪರ್ಯಾಸದ ಸಂಗತಿ ಎಂದರೆ, ಈಗಾಗಲೇ ಒಂದು ಬಗೆಯ ನಿರ್ಬಂಧಕ್ಕೆ ಒಳಗಾಗಿ ಪ್ರಮಾಣ ಪತ್ರ ಪಡೆದಿರುವ ಚಿತ್ರಸಾಮಗ್ರಿಯ ಬಗ್ಗೆ ಇಷ್ಟೊಂದು ಕಾಳಜಿ ವಹಿಸಲಾಗುತ್ತದೆ. ಆದರೆ, ಟಿವಿಗಾಗಿಯೇ ನಿರ್ಮಾಣವಾದ ಸೀರಿಯಲ್‌ಗಳು, ರಿಯಾಲಿಟಿ ಶೋಗಳು ಇತ್ಯಾದಿಗಳಿಗೆ ಯಾವುದೇ ರೀತಿಯ ಸೆನ್ಸಾರ್ ಆಗಲೀ, ಪ್ರಮಾಣವಾಗಲೀ ಇಲ್ಲ ಎನ್ನುವುದೇ ಶತಮಾನದ ವಿಪರ್ಯಾಸ! ಸೆನ್ಸಾರ್ ಮಂಡಳಿ ಟಿವಿ ಪ್ರಸಾರ ಸಾಮಗ್ರಿಯನ್ನು ಸೆನ್ಸಾರ್ ಮಾಡುವುದಿಲ್ಲ.

ಆದರೂ ಟಿವಿ ಸಾಮಗ್ರಿಯ ಗುಣಸ್ವಭಾವವನ್ನು ನಿಯಂತ್ರಿಸುವ ಇತರ ಕಾನೂನುಗಳಿವೆ. ಉದಾಹರಣೆಗೆ, ಎಲ್ಲ ಟಿವಿ ಚಾನಲಿನವರು 'ಕೇಬಲ್ ಟೆಲಿವಿಷನ್ ನೆಟ್‌ವರ್ಕ್ (ರೆಗ್ಯುಲೇಷನ್) ಆ್ಯಕ್ಟ್, ೧೯೯೫'ಅನ್ನು ಪಾಲಿಸಬೇಕಾಗುತ್ತದೆ. ಆದರೆ ಇದನ್ನು ಕಾರ್ಯರೂಪಕ್ಕೆ ತರುವ, ಪಾಲನೆಯಾಗದಿದ್ದರೆ ದಂಡ ವಿಧಿಸುವ ಒಂದು ಇಲಾಖೆ ಅಥವಾ ಮಂಡಲಿ ಇಲ್ಲ. ೨೦೦೮ರಲ್ಲಷ್ಟೇ ಕೇಂದ್ರ ಸರಕಾರ 'ಎಲೆಕ್ಟ್ರಾನಿಕ್ ಮಿಡಿಯಾ ಮಾನಿಟರಿಂಗ್ ಸೆಂಟರ್' ಎಂಬ ಒಂದು ಸಂಸ್ಥೆಯನ್ನು ಸ್ಥಾಪಿಸಿದೆ. ಅದು ಸದ್ಯಕ್ಕೆ ಸುಮಾರು ೬೦೦ ಟಿವಿ ಚಾನಲುಗಳ ಪ್ರಸಾರಗಳ ಮೇಲೆ ನಿಗಾ ಇಡುತ್ತದೆ. ಈ ವರ್ಷದ ಹೊತ್ತಿಗೆ ಸುಮಾರು ೧೫೦೦ ಚಾನಲುಗಳನ್ನು ಅವಲೋಕಿಸುವ ಗುರಿಯನ್ನು ಈ ಕೇಂದ್ರ ಹೊಂದಿದೆ. ಇದು 'ಕೇಬಲ್ ಟೆಲಿವಿಷನ್ ನೆಟ್‌ವರ್ಕ್ (ರೆಗ್ಯುಲೇಷನ್) ಆ್ಯಕ್ಟ್, ೧೯೯೫ರ ಕಾನೂನಿನ 'ಕಾರ್ಯಕ್ರಮ ಸಂಹಿತೆ'ಯಲ್ಲಿ ಮತ್ತು 'ಜಾಹಿರಾತು ಸಂಹಿತೆ'ಯಲ್ಲಿ ವಿಧಿಸಲಾದ ನಿಬಂಧನೆಗಳನ್ನು

प्ररूप VI/FORM VI — नियम 35 (1) देखिए/Sec. Rule 35 (1)

भारत सरकार/GOVERNMENT OF INDIA

केन्द्रीय फिल्म प्रमाणन बोर्ड/CENTRAL BOARD OF FILM CERTIFICATION

यह प्रमाणपत्र केवल थिएटर में प्रदर्शित करने बावत विधिमान्य है

THIS CERTIFICATE IS VALID FOR THEATRICAL RELEASE ONLY

No. 10986

1A072601201800012 Feature — भाग-I / Part-I

प्रमाणपत्र सं. Certificate No. DIL/2/17/2018-HYD — तारीख Dated 06/02/2018 — श्रेणी Category — अव UA — अभिभावक मार्गदर्शन PARENTAL GUIDANCE

फिल्म Film: "INTTELLIGENT" (TELUGU) (Color) (Cinemascope) — Duration 130.30 min:sec

निम्नलिखित परीक्षण समिति के सदस्यों द्वारा परीक्षण के पश्चात तथा उक्त परीक्षण समिति की सिफारिशों पर बोर्ड एतद्द्वारा यह प्रमाणित करता है कि पीछे संलग्न भाग -२ में उपदर्शित काट-छांट और उपान्तरों के अधीन फिल्म इस चेतावनी के प्रष्ठांकन के साथ सार्वजनिक प्रदर्शन के लिए उपयुक्त है कि १२ वर्ष से कम आयु के किसी बालक को फिल्म देखने की अनुज्ञा दी जाए या नहीं , इस प्रश्न पर उस बालक के माता पिता या संरक्षक द्वारा विचार किया जाना चाहिए।

After examination of the film by the members of the **Examining Committee** mentioned below and on the recommendation of the said **Examining Committee**, the Board hereby certifies that the film is fit for **public exhibition with an endorsment of caution that the question as to whether any child below the age of 12 years may be allowed to see the film should be considered by the parents or guardian of such child**, and also subject to excision and modification listed in part II on the reverse :

1. P PADMACHANDRASEKHAR
2. KESHABOINA KAVITHA
3. CHANNA NATRAJ BHATT
4. C BALAPRAKASH
5. **PVR RAJASEKHARAM ( E.O. )**

यह और प्रमाणित किया जाता है कि उपरोक्त बोर्ड द्वारा अधिरोपित कांट-छांट और उपान्तरों को यास्तव में कार्यान्वित किया गया है।
Further certified that the excisions and modifications imposed by the Board have actully been carried out.

आवेदक का नाम Name of Applicant: CHILLARA KALYAN - HYDERABAD — अध्यक्ष — (PVR RAJASEKHARAM) Regional Officer

निर्माता का नाम Name of Producer: CHILLARA KALYAN - HYDERABAD(C K ENTERTAINMENTS PVT LTD) — For Chairman — CBFC ,HYDERABAD

ಪಾಲಿಸಲಾಗುತ್ತಿದೆಯೇ ಇಲ್ಲವೇ ಎಂಬುದನ್ನು ಪರಿಶೀಲಿಸುತ್ತದೆ. ಉಲ್ಲಂಘನೆಯಾಗಿದ್ದರೆ ಎಚ್ಚರಿಕೆ, ದಂಡ, ನಿಷೇಧ ಇತ್ಯಾದಿ ಕ್ರಮಗಳನ್ನು ತೆಗೆದುಕೊಳ್ಳುತ್ತದೆ.

ಇದರ ಜೊತೆಯಲ್ಲಿ, ಟಿಲಿವಿಷನ್ ಉದ್ಯಮದ ಕ್ಷೇತ್ರದವರೇ ಸ್ವನಿಯಂತ್ರಣವನ್ನು ಜಾರಿಗೆ ತರುವುದರ ಮೂಲಕ ಟಿವಿ ಪ್ರಸಾರದ ಗುಣಮಟ್ಟವನ್ನು ಕಾಯ್ದುಕೊಳ್ಳುವ ಕ್ರಮವನ್ನು ತೆಗೆದುಕೊಂಡಿದ್ದಾರೆ. ಉದ್ಯಮದ ಸಹಭಾಗಿಗಳ ಹಿತಾಸಕ್ತಿಯನ್ನು ಸಂರಕ್ಷಣೆ ಮಾಡುವ ಉದ್ದೇಶದಿಂದ ೧೯೯೯ರಲ್ಲಿ ಸ್ಥಾಪಿತವಾದ ಈ ಸರಕಾರೇತರ ಸಂಸ್ಥೆಯು, ತಮ್ಮ ಸದಸ್ಯ ಖಾಸಗಿ ಟಿವಿ ಚಾನಲ್‌ಗಳು ಪ್ರಸಾರ ಮಾಡುವ ಸಾಮಗ್ರಿಯ ಗುಣಮಟ್ಟದ ಮೇಲೆ ನಿಗಾ ಇಡುತ್ತದೆ. ಈ ರೀತಿಯ ಸ್ವನಿಯಂತ್ರಣವನ್ನು ಜಾರಿಗೆ ತರುವ ಸಲುವಾಗಿಯೇ ೨೦೧೧ರಲ್ಲಿ ಬ್ರಾಡ್‌ಕಾಸ್ಟಿಂಗ್ ಕಂಟೆಂಟ್ ಕಂಪ್ಲೇಂಟ್ ಕೌನ್ಸಿಲ್ (ಬಿಸಿಸಿಸಿ) ಎಂಬ ವ್ಯವಸ್ಥೆಯನ್ನು ಸ್ಥಾಪಿಸಿದೆ.




ಇವೆಲ್ಲವೂ ಕೇಬಲ್ ಟೆಲಿವಿಷನ್ ನೆಟ್‌ವರ್ಕ್ (ರೆಗ್ಯುಲೇಷನ್) ಆ್ಯಕ್ಟ್ ೧೯೯೫ರ ಕಾರ್ಯಕ್ರಮ ಸಂಹಿತೆಯ ನಿಬಂಧನೆಗಳನ್ನು ಜಾರಿಗೆ ತರುವ ಪ್ರಯತ್ನವನ್ನು ಮಾಡುತ್ತವೆ. ಯಾವುದೇ ಟಿವಿ ಚಾನಲಿನಲ್ಲಿ ಪ್ರಸಾರವಾದ ಕಾರ್ಯಕ್ರಮ ಈ ನಿಬಂಧನೆಗಳನ್ನು ಉಲ್ಲಂಘಿಸಿದ್ದು, ಅಥವಾ ತಮಗೆ ಇನ್ಯಾವುದೇ ರೀತಿಯಲ್ಲಿ ಆಕ್ಷೇಪಣೀಯವೆಂದು ಕಂಡುಬಂದಲ್ಲಿ ವೀಕ್ಷಕರು, ವೈಯಕ್ತಿಕವಾಗಿ ಅಥವಾ ಸಾಂಸ್ಥಿಕವಾಗಿ ಬಿಸಿಸಿಸಿಗೆ ದೂರನ್ನು ನೀಡಬಹುದು.

ಇದರ ನಿಯಮಾವಳಿಗಳ ಪ್ರಕಾರ ಪ್ರತಿಯೊಂದು ಟಿವಿ ಚಾನಲು ತಮ್ಮ ಸಂಸ್ಥೆಯಲ್ಲಿ ಸ್ಟ್ಯಾಂಡರ್ಡ್ ಅಂಡ್ ಪ್ರಾಕ್ಟೀಸಸ್ ಡಿಪಾರ್ಟ್‌ಮೆಂಟ್ ಎಂಬ ವಿಭಾಗವನ್ನು ಸ್ಥಾಪಿಸಬೇಕು, ಅದರ ಮುಖ್ಯಸ್ಥರು ಯಾರು, ಅವರ ಸಂಪರ್ಕ ವಿವರಗಳೇನು ಎಂದು ಪ್ರತಿಯೊಂದು ಚಾನಲಿನವರು ತಮ್ಮ ಅಧಿಕೃತ ವೆಬ್‌ಸೈಟಿನಲ್ಲಿ ಎದ್ದುಕಾಣುವ ಹಾಗೆ ಪ್ರಕಟಿಸಬೇಕು ಎಂದಿದೆ (ಕನ್ನಡದ ಮೂರು ನಾಲ್ಕು ಚಾನಲುಗಳ ವೆಬ್‌ಸೈಟುಗಳನ್ನು ಹುಡುಕಾಡಿದರೂ ಈ ಮಾಹಿತಿ ನನಗೆ ಸಿಗಲಿಲ್ಲ ಎನ್ನುವ ಮಾತು ಬೇರೆ). ಕಾರ್ಯಕ್ರಮ ಪ್ರಸಾರದ ವೇಳೆಯಲ್ಲಿಯೂ ಆಗಾಗ 'ಈ ಕಾರ್ಯಕ್ರಮದ ಕುರಿತು ನಿಮಗೆ ಯಾವುದೇ ರೀತಿಯ ದೂರು ಇದ್ದಲ್ಲಿ ಬಿಸಿಸಿಸಿಯನ್ನು ಸಂಪರ್ಕಿಸಬಹುದು' ಎಂಬ ಸೂಚನೆಯನ್ನು ಪಟ್ಟಿಯ ರೂಪದಲ್ಲಿ ಓಡಿಸಬೇಕು ಎಂದೂ ನಿಯಮವಿದೆ.

ಯಾವುದೇ ಚಾನಲಿನಲ್ಲಿ ಪ್ರಸಾರವಾಗುವ ಕಾರ್ಯಕ್ರಮವು ಸಂಹಿತೆಯನ್ನು ಉಲ್ಲಂಘನೆ ಮಾಡಿದೆ, ಅಥವಾ ನಿಮಗೆ ನಿರ್ದಿಷ್ಟ ಕಾರಣಕ್ಕಾಗಿ ಆಕ್ಷೇಪಾರ್ಹವಾಗಿ ಕಂಡಿದೆ ಎಂದರೆ ನಿಮ್ಮ ದೂರನ್ನು ಎರಡು ಮಟ್ಟಗಳಲ್ಲಿ ಬಗೆಹರಿಸಲಾಗುತ್ತದೆ. ಮೊದಲನೆಯದಾಗಿ ನೀವು ಆಯಾ ಚಾನಲಿನ ಸ್ಟ್ಯಾಂಡರ್ಡ್ಸ್ ಅಂಡ್ ಪ್ರಾಕ್ಟೀಸಸ್ ಡಿಪಾರ್ಟ್‌ಮೆಂಟಿಗೆ ಅಂಚೆ/ಇಮೇಲ್ ಮೂಲಕ ದೂರನ್ನು ನೀಡಬೇಕು. ಅದರಲ್ಲಿ ನಿಮ್ಮ ಹೆಸರು, ವಯಸ್ಸು, ಸಂಪೂರ್ಣ ಸಂಪರ್ಕ ವಿವರ, ನೀವು ಆಕ್ಷೇಪಿಸುತ್ತಿರುವ ಕಾರ್ಯಕ್ರಮದ ಹೆಸರು, ಪ್ರಸಾರವಾದ ದಿನಾಂಕ ಮತ್ತು ಸಮಯ, ಆ ಕಾರ್ಯಕ್ರಮದ ಯಾವ ಭಾಗ, ಯಾವ ಅಂಶ ನಿಮಗೆ ಆಕ್ಷೇಪಾರ್ಹವಾಗಿ ಕಂಡಿತು ಮತ್ತು ಏಕೆ ಎಂಬುದನ್ನು ಬರೆದು ಕಳಿಸಬೇಕು. ಇದನ್ನು ಪ್ರಸಾರವಾದ ಒಂದು ವಾರದ ಒಳಗೆ ಮಾಡಬೇಕು. ಚಾನಲಿನವರು ಎರಡು ದಿನದ ಒಳಗಾಗಿ ನಿಮ್ಮ ದೂರು ತಲುಪಿದ್ದಕ್ಕೆ ಸ್ವೀಕೃತಿಯನ್ನು ಕಳಿಸಬೇಕು. ನಂತರ ಅವರು ನಿಮ್ಮ ದೂರನ್ನು ಪರಿಶೀಲಿಸುತ್ತಾರೆ. ನಿಮ್ಮ ದೂರು ಮೇಲ್ನೋಟಕ್ಕೆ ಸಮರ್ಥನೀಯವಲ್ಲದ್ದು, ದುರುದ್ದೇಶ ಅಥವಾ ಪೂರ್ವಗ್ರಹದಿಂದ ಕೂಡಿದ್ದು ಎಂದು ಕಂಡುಬಂದರೆ ಹಾಗೆಂದು ಕೂಡಲೇ ನಿಮಗೆ ಉತ್ತರವನ್ನು ಬರೆಯಬೇಕು. ಇಲ್ಲವಾದರೆ 'ಕೇಬಲ್ ಟೆಲಿವಿಷನ್ ನೆಟ್‌ವರ್ಕ್ (ರೆಗ್ಯುಲೇಶನ್) ಆ್ಯಕ್ಟ್ ೧೯೯೫ ಮತ್ತು ಬಿಸಿಸಿಸಿಯ ಸ್ವನಿಯಂತ್ರಣ ನಿಬಂಧನೆಗಳನ್ನು ಮೀರಿದೆ ಎಂದು ಕಂಡು ಬಂದಲ್ಲಿ ಸಂಬಂಧಪಟ್ಟ ಕಾರ್ಯಕ್ರಮದ ವಿಭಾಗದವರನ್ನು ಕರೆದು ವಿಚಾರಣೆ ನಡೆಸಬೇಕು. ಉಲ್ಲಂಘನೆಯಾಗಿರುವುದು ಹೌದು ಎಂದು ಕಂಡುಬಂದಲ್ಲಿ ಆ ಕಾರ್ಯಕ್ರಮವನ್ನು ಬದಲಾಯಿಸಬೇಕು ಅಥವಾ ಕೈಬಿಡಬೇಕು. ಮತ್ತು ದೂರುದಾರರಲ್ಲಿ ಕ್ಷಮೆ ಕೋರಿ ಎರಡು ವಾರದ ಒಳಗೆ ಉತ್ತರವನ್ನು ಕಳಿಸಬೇಕು.

ಚಾನಲಿನ ಮಟ್ಟದಲ್ಲಿ ನಿಮ್ಮ ದೂರಿಗೆ ಸಿಕ್ಕ ಉತ್ತರದಿಂದ ನಿಮಗೆ ತೃಪ್ತಿ ಅನ್ನಿಸದೇ ಇದ್ದರೆ, ಅಥವಾ ನೇರವಾಗಿಯೂ ನೀವು ಬಿಸಿಸಿಸಿಗೆ ದೂರನ್ನು ಸಲ್ಲಿಸಬಹುದು. ಆಕ್ಷೇಪಾರ್ಹ ಕಾರ್ಯಕ್ರಮವನ್ನು ನೋಡಿದ ೧೪ ದಿನಗಳೊಳಗಾಗಿ ದೂರನ್ನು ಸಲ್ಲಿಸಬೇಕು. ಇಂಗ್ಲಿಷ್ ಅಥವಾ ಹಿಂದಿ ಭಾಷೆಯಲ್ಲಿ ಬರೆದ ದೂರನ್ನು ಅಂಚೆಯ ಮೂಲಕ ಸೆಕ್ರೆಟರಿ, ಬಿಸಿಸಿಸಿ, ಕೇ/ಆ ಇಂಡಿಯನ್ ಬ್ರಾಡ್‌ಕಾಸ್ಟಿಂಗ್ ಫೌಂಡೇಷನ್, ಬಿ–೩೦೪, ೩ ಫ್ಲೋರ್, ಅನ್ಸಲ್ ಪ್ಲಾಜ಼ಾ, ಖೇಲ್‌ಗಾವ್ ಮಾರ್ಗ್, ನ್ಯೂ ಡೆಲ್ಲಿ– ೧೧೦ ೦೪೯ ವಿಳಾಸಕ್ಕೆ ಅಥವಾ ibf@ibfindia.com ವಿಳಾಸಕ್ಕೆ ಇಮೇಲ್ ಮೂಲಕ ಕಳಿಸಬಹುದು; ಆದರೆ ಇಮೇಲ್ ಮೂಲಕ ಕಳಿಸಿದ ದೂರಿನ ಮುದ್ರಿತ ಪ್ರತಿಯನ್ನು ಅಂಚೆಯ ಮೂಲಕವೂ ಕಳಿಸಬೇಕು. ಹೆಚ್ಚಿನ ವಿವರಗಳು ಮತ್ತು ದೂರನ್ನು ಸಲ್ಲಿಸಲು ಬಳಸಬಹುದಾದ ನಮೂನೆಯು ಅವರ www.ibfindia.com ವೆಬ್ತಾಣದಲ್ಲಿ ಸಿಗುತ್ತದೆ. ಅವರೂ ವಿಚಾರಣೆ ನಡೆಸಿ ಹದಿನಾಲ್ಕು ದಿನಗಳ ಒಳಗಾಗಿ ಕ್ರಮವನ್ನು ಕೈಗೊಳ್ಳುತ್ತಾರೆ. ಹಾಗೂ ಆ ಕುರಿತು ನಿಮಗೆ ಬರೆಯುತ್ತಾರೆ.

ಇಷ್ಟೆಲ್ಲಾ ವ್ಯವಸ್ಥೆ ಇರುವ ಹೊರತಾಗಿಯೂ ನಮ್ಮ ಟಿವಿ ಚಾನಲುಗಳ ವಸ್ತು ಸಾಮಗ್ರಿ ಎಷ್ಟೊಂದು ಹದಗೆಟ್ಟಿದೆ, ನಿಬಂಧನೆಗಳನ್ನು ಹೇಗೆ ಹಾಡುಹಗಲೇ ಉಲ್ಲಂಘಿಸಲಾಗುತ್ತಿದೆ ಎಂಬುದನ್ನು ಅರ್ಥ ಮಾಡಿಕೊಳ್ಳಲು ಕೇಬಲ್ ಟೆಲಿವಿಷನ್ ನೆಟ್‌ವರ್ಕ್ (ರೆಗ್ಯುಲೇಷನ್) ಆ್ಯಕ್ಟ್ ೧೯೯೫ರ ಸೆಕ್ಷನ್ ೫ರಲ್ಲಿರುವ 'ಕಾರ್ಯಕ್ರಮ ಸಂಹಿತೆ'ಯಲ್ಲಿ ಯಾವ ಬಗೆಯ ಕಾರ್ಯಕ್ರಮಗಳನ್ನು ಪ್ರಸಾರ ಮಾಡಬಾರದು ಎಂಬುದರ ಒಂದು ಪಟ್ಟಿಯಿದೆ. ಅದರಲ್ಲಿ ನಾಲ್ಕು ಮಾತ್ರ ಇಲ್ಲಿವೆ ನೋಡಿ: (ಎ) ಸದಭಿರುಚಿ ಮತ್ತು ಸಭ್ಯತೆ, ಶಿಷ್ಟತೆಗೆ ಧಕ್ಕೆ ತರುವಂಥ, (ಡಿ) ಅಶ್ಲೀಲ, ಮಾನನಷ್ಟಕರ, ಉದ್ದೇಶಪೂರ್ವಕ, ಸುಳ್ಳು ಮತ್ತು ಸೂಚಿತ ದ್ವಂದ್ವಾರ್ಥದ ಮತ್ತು ಅರೆಸತ್ಯವಾದ, (ಐ) ಅತೀಂದ್ರಿಯ ನಂಬಿಕೆ ಮತ್ತು ಕುರುಡು ನಂಬಿಕೆಗಳನ್ನು ಪ್ರೋತ್ಸಾಹಿಸುವಂಥ, (ಕೆ) ಸ್ತ್ರೀಯ ಮೈಕಟ್ಟು, ಆಕೆಯ ದೈಹಿಕ ಆಕೃತಿ, ಅಥವಾ ದೇಹ ಅಥವಾ ಅದರ ಯಾವುದೇ ಅಂಗ ಇವುಗಳನ್ನು ಅಸಭ್ಯ ರೀತಿಯಲ್ಲಿ, ಅಥವಾ ಸ್ತ್ರೀಗೆ ಅವಹೇಳನಕಾರಿಯಾಗಿ ತೋರಿಸುವ ಮೂಲಕ ಸ್ತ್ರೀಯರಿಗೆ ಕಳಂಕ ತರುವಂಥ, ಈ ಮೂಲಕ ಸಾರ್ವಜನಿಕ ನೈತಿಕತೆಯನ್ನು ತುಚ್ಛೀಕರಿಸುವಂಥ, ಅಲ್ಲಗಳೆಯುವಂಥ, ಭ್ರಷ್ಟಗೊಳಿಸುವಂಥ ಅಥವಾ ಘಾಸಿಗೊಳಿಸುವಂಥ – ಕಾರ್ಯಕ್ರಮಗಳನ್ನು ಪ್ರಸಾರ ಮಾಡತಕ್ಕದ್ದಲ್ಲ.

ವ್ಯಾಪಾರೀ ಉದ್ದೇಶವನ್ನು ಪೂರೈಸಿಕೊಳ್ಳಲು ಟಿವಿ ವಾಹಿನಿಗಳು ಎಲ್ಲಾ ನೀತಿ ಬಿಟ್ಟಿದ್ದನ್ನು ನಾವು ನೋಡಿದ್ದೇವೆ, ಆದರೆ ನಿಯಮಗಳನ್ನೂ ಈ ರೀತಿಯಲ್ಲಿ ಕಾಲಡಿ ಹಾಕಿ ತುಳಿದಾಡುತ್ತಿರುವುದಕ್ಕೆ ಗ್ರಾಹಕರ ನಿಷ್ಕ್ರಿಯತೆಯೇ ಮುಖ್ಯ ಕಾರಣ ಎನ್ನಬಹುದು.

**ಎಂ. ಅಬ್ದುಲ್ ರೆಹಮಾನ್ ಪಾಷ**
'ನಮ್ಮನೆ', ನಂ. ೮೧/೩೭–೩, ೪ನೇ ಅಡ್ಡರಸ್ತೆ
೧೨ನೇ 'ಡಿ' ಮುಖ್ಯರಸ್ತೆ, ಶಿವನಗರ, ಬೆಂಗಳೂರು – ೫೬೦ ೦೧೦













# ಅಂಗವೈಕಲ್ಯತೆಗೆ ಅಂಜದ **ಅರುಣ್!**



**ಮ**ನದ ನೋವುಗಳು ನಮ್ಮನ್ನು ಏನೂ ಮಾಡದಂತೆ ಹಿಂದಕ್ಕೆ ಎಳೆಯುತ್ತವೆ. ಜಗತ್ತಿನಲ್ಲಿ ಅತಿದೊಡ್ಡ ಕಷ್ಟದ ಕೆಲಸವೆಂದರೆ ಮನದೊಳಗೆ ನೋವನ್ನು ಇಟ್ಟುಕೊಂಡು ಜನರನ್ನು ನಗಿಸುವುದು. ಚಾರ್ಲಿ ಚಾಪ್ಲಿನ್ ತಾನು ನೊಂದು ಬೆಂದಿದ್ದರೂ ಅದನ್ನೆಲ್ಲಾ ಬದಿಗೊತ್ತಿ ಜಗತ್ತನ್ನೇ ನಗಿಸುತ್ತಿದ್ದ. ಇದರಂತೆ ಇಲ್ಲೊಬ್ಬ ಅಪರೂಪ ಕಲಾವಿದ ತನ್ನ ನೋವನ್ನು ಮನದಲ್ಲೇ ಅಡಗಿಸಿಕೊಂಡು ನಾಡಿನ ಜನರನ್ನು ನಗಿಸುತ್ತಿದ್ದಾನೆ.

ಹೈದರಾಬಾದ್ ಕರ್ನಾಟಕದ ರಾಯಚೂರಿನ ಅರುಣ್ ನಂದಗಿರಿ ಓರ್ವ ಪ್ರಖ್ಯಾತ ವ್ಯಂಗ್ಯ ಚಿತ್ರಕಾರ. ಇವರ ವ್ಯಂಗ್ಯ ಚಿತ್ರಗಳು ನಾಡಿನ ಅನೇಕ ಪತ್ರಿಕೆಗಳಲ್ಲಿ, ನಿಯತಕಾಲಿಕೆಗಳಲ್ಲಿ ಪ್ರಕಟವಾಗಿವೆ ನೀವೂ ನೋಡಿ ನಕ್ಕಿರಬಹುದು. ಆದರೆ ಈ ವ್ಯಂಗ್ಯ ಚಿತ್ರಕಾರನ ಹಿಂದಿನ ವ್ಯಥೆ ಅನೇಕರಿಗೆ ತಿಳಿದಿರಲಿಕ್ಕಿಲ್ಲ... ೩೪ರ ಹರೆಯದ ಅರುಣ್‌ಗೆ ಹುಟ್ಟಿನಿಂದಲೂ ದೇಹ ಅತಿಕುಬ್ಜಗೊಂಡು, ಅದು ಅಂಗವೈಕಲ್ಯತೆಗೊಂಡಿದೆ. ವೈದ್ಯ ಲೋಕ ಈ ರೋಗಕ್ಕೆ ಆಸ್ಟ್ರೋಜನಿಟಿಕ್ ಇಂಪರ್ಫೆಕ್ಟ್ ಎನ್ನುತ್ತದೆ.







ಈ ವಿಚಿತ್ರ ರೋಗದಿಂದ ನೋಡಲು ಪುಟ್ಟ ಪಾಪುವಿನಂತೆ ಕಾಣುವ ಈತನ ದೇಹ ಬಹುತೇಕ ಅಂಗವೈಕಲ್ಯತೆಗೆ ತುತ್ತಾಗಿದೆ... ಎಷ್ಟರಮಟ್ಟಿಗೆ ಅಂದರೆ ಅರುಣ್ ನಡೆಯಲಾರ, ಕುಳಿತುಕೊಳ್ಳಲಾರ, ಅಲುಗಾಡದೇ ಒಂದೇ ಕಡೆ ಮಲಗಿದ್ದಲ್ಲಿಯೇ ಮಲಗಬೇಕು. ಈ ಅವಸ್ಥೆಯಲ್ಲಿಯೇ ಎಲ್ಲರೂ ನಕ್ಕು ನಲಿಯುವ ವ್ಯಂಗ್ಯಚಿತ್ರಗಳನ್ನು ರಚಿಸುತ್ತಾರೆ. ಮನದಲ್ಲಿ ಹೇಳಿಕೊಳ್ಳಲಾಗದ ನೋವು ತುಂಬಿಕೊಂಡಿದ್ದರೂ ಅದನ್ನು ಹೊರ ಸೂಸದೇ ಬದಲಾಗಿ ಅದನ್ನು ವ್ಯಂಗ್ಯಚಿತ್ರಗಳಾಗಿ ಪರಿವರ್ತನೆ ಮಾಡಿ ನೋವನ್ನು ಮರೆಯಲು ಯತ್ನಿಸುತ್ತಾರೆ.

ಮಿತ್ರ ಅರುಣ್ ಮಲಗಿದ್ದಲ್ಲಿಯೇ ಮಲಗಿದ್ದರೇನಂತೆ ಆತನ ವ್ಯಂಗ್ಯಚಿತ್ರಗಳು ಇವರ ಕಾಲುಗಳಾಗಿ ಇಡೀ ನಾಡನ್ನೇ ಸುತ್ತುತ್ತಿವೆ. ಅಂದರೆ ನಾಡಿನ ಬಹುತೇಕ ಎಲ್ಲಾ ಪತ್ರಿಕೆಗಳಲ್ಲಿ ವ್ಯಂಗ್ಯಚಿತ್ರಗಳು ಪ್ರಕಟವಾಗಿವೆ, ಪ್ರಕಟವಾಗುತ್ತಲೇ ಇವೆ.

ಈತನ ತಂದೆ–ತಾಯಿ, ಅಣ್ಣಂದಿರು, ಅಕ್ಕಂದಿರು ಈತನಿಗೆ ವಿಶೇಷ ಪ್ರೀತಿ ತೋರಿಸಿ ಅಂಗವಿಕಲತೆಯ ಮನೋಭಾವನೆಯನ್ನೇ ತೊಡೆದುಹಾಕಿದ್ದಾರೆ ಹಾಗೂ ಸ್ನೇಹಿತರ ನೆರವಿನಿಂದ 'ಅರುಣ್ ಕಂಡ ಪ್ರಪಂಚ' ಎಂಬ ಇವರ ವ್ಯಂಗ್ಯ ಚಿತ್ರ ಪುಸ್ತಕ ಹೊರತಂದಿದ್ದಾರೆ. ಅಂಗವೈಕಲ್ಯತೆಯನ್ನು ಮೆಟ್ಟಿನಿಂತ ಇವರ ಪ್ರತಿಭೆ ಕಂಡು ರಾಯಚೂರಿನ ಜಿಲ್ಲಾಡಳಿತ ರಾಜ್ಯೋತ್ಸವ ಪ್ರಶಸ್ತಿ ನೀಡಿ ಗೌರವಿಸಿದೆ. ವ್ಯಂಗ್ಯಚಿತ್ರಗಳಷ್ಟೇ ಅಲ್ಲದೆ ರೇಖಾಚಿತ್ರ, ಕವನ, ಇತರೆ ಲೇಖನಗಳನ್ನು ಬರೆಯುವ ಇವರ ಪ್ರತಿಭೆ ಗುರುತಿಸಿ ಸ್ಥಳೀಯ ಪತ್ರಿಕೆ ರಾಯಚೂರ ವಾಣಿ ಇಪ್ಪತ್ತು ವರ್ಷಗಳ ಹಿಂದೆಯೇ ಅರುಣ್ ಅವರ ಕಲೆಗೆ ವೇದಿಕೆ ನೀಡಿ ಪ್ರೋತ್ಸಾಹಿಸಿದೆ.

ಸಮಯ ಕಳೆಯಲು ಮಲಗಿದ್ದಲ್ಲೇ ಟಿವಿ, ದಿನಪತ್ರಿಕೆ, ಮೊಬೈಲ್‌ನಲ್ಲಿ ಮಾತನಾಡುತ್ತಾರೆ. ತೀರಾ ಸ್ವಾಭಿಮಾನಿಯಾದ ಅರುಣ್ ಅನುಕಂಪ ಬೇಡ, ಅವಕಾಶ ಕೊಡಿ ಹಾಗೂ ಅಂಗವೈಕಲ್ಯತೆ ಎನ್ನುವುದು ಅದು ದೇಹಕ್ಕೆ ಸಂಬಂಧಿಸಿದ್ದು, ಮನಸ್ಸಿಗಲ್ಲ ಎನ್ನುವ ಜೀವನೋತ್ಸಾಹ ಇತರ ಅಂಗವಿಕಲರಿಗೆ ಅಷ್ಟೇ ಅಲ್ಲದೆ ಸಾಮಾನ್ಯ ಜನರಿಗೂ ಉತ್ತಮ ಮಾದರಿಯಾಗಿದೆ. ಆಶಾಭಾವನೆಯೊಂದಿಗೆ ಎಲ್ಲರೊಂದಿಗೆ ನಗುಮುಖದಿಂದಲೇ ಮಾತನಾಡುತ್ತಾರೆ. ಒಟ್ಟಿನಲ್ಲಿ ಅರುಣ್ ನನಗೇನೂ ಆಗಿಲ್ಲ ಎಂಬಂತೆ, ಜಗ್ಗದೇ ಕುಗ್ಗದೇ, ಸದೃಢ ಮನಸ್ಸಿನಿಂದ ಬಾಳುತ್ತಿರುವುದು ಪ್ರಶಂಸನೀಯವಾಗಿದೆ.




**ಈರಣ್ಣ ಬೆಂಗಾಲಿ**
ರಾಯಚೂರು

# ಬದಲಾಗುತ್ತಾ ಬೆಳೆದ ಸೇನ್

ಟಿ. ಎಸ್. ವೇಣುಗೋಪಾಲ್

ಮೃಣಾಲ್ ಸೇನ್ ಹುಟ್ಟಿದ್ದು ಪೂರ್ವ ಬಂಗಾಲದಲ್ಲಿ. ಆಮೇಲೆ ಓದು ಮುಂದುವರೆಸಲು ಪಶ್ಚಿಮ ಬಂಗಾಳಕ್ಕೆ ಬಂದರು. ಬಂಗಾಳದ ವಿಭಜನೆಯ ನೋವು ಅವರನ್ನು ಗೀಳಾಗಿ ಕಾಡಲಿಲ್ಲ. ಕೊಲ್ಕತ್ತಾದಲ್ಲಿ ಬೆರೆತು ಕೊಲ್ಕತ್ತದವರೇ ಆಗಿಬಿಟ್ಟರು. ಜೀವನದುದ್ದಕ್ಕೂ ಅವರ ಕಾಳಜಿಯೆಲ್ಲಾ ಕೊಲ್ಕತ್ತಾ ಮತ್ತು ಅಲ್ಲಿಯ ಜನರ ಬಗ್ಗೆಯೇ ಆಗಿತ್ತು. ಕೊಲ್ಕತ್ತಾ ಅವರಿಗೆ ಸ್ಫೂರ್ತಿಯ ತಾಣವಾಗಿದ್ದಂತೆಯೇ ಕಿರಿಕಿರಿಯ ಜಾಗವೂ ಆಗಿತ್ತು. ತಮ್ಮ ಸುತ್ತಲ ಆಗುಹೋಗುಗಳ ಕುರಿತಂತೆ ಸದಾ ಅವರಿಗೆ ಒಂದು ರೀತಿಯ ಅತೃಪ್ತಿ ಕಾಡುತ್ತಿತ್ತು. ಈ ಅತೃಪ್ತಿಯನ್ನು ಒಂದಲ್ಲ ಒಂದು ರೀತಿಯಲ್ಲಿ ವ್ಯಕ್ತಪಡಿಸುತ್ತಲೇ ಇದ್ದರು.

ಅವರಿಗೆ ಸಿನಿಮಾದಲ್ಲಿ ಅಂತಹ ಆಸಕ್ತಿಯೇನಿರಲಿಲ್ಲ. ಅವರು ಅಷ್ಟಾಗಿ ಸಿನಿಮಾಗಳನ್ನು ನೋಡುತ್ತಲೂ ಇರಲಿಲ್ಲ. ಆಕಸ್ಮಿಕವಾಗಿ ಓದಿದ ರುಡೋಲ್ಫ್ ಅರ್ನ್‌ಹೈಮ್ ಅವರ 'ದಿ ಆರ್ಟ್ ಆಫ್ ಫಿಲ್ಮ್' ಪುಸ್ತಕ ಅವರ ಒಲವನ್ನೇ ಬದಲಿಸಿಬಿಟ್ಟಿತು. ಅದು "ಸಿನಿಮಾದಲ್ಲಿ ಇವೆಲ್ಲಾ ಸಾಧ್ಯವಾ?" ಎಂಬ ಬೆರಗನ್ನು ಅವರಲ್ಲಿ ಮೂಡಿಸಿತು. ನಂತರ ವ್ಲಾಡಿಮಿರ್ ನಿಲ್ಸನ್ ಅವರ 'ಸಿನಿಮಾ ಆಸ್ ಗ್ರಾಫಿಕ್ ಆರ್ಟ್' ಪುಸ್ತಕ ಓದಿದರು. ನಿಲ್ಸನ್ ಖ್ಯಾತ ನಿರ್ದೇಶಕ ಐಸೆನ್‌ಸ್ಟೀನ್ ಅವರ ಶಿಷ್ಯ.

ಅಲ್ಲಿಂದ ಮುಂದೆ ಮೃಣಾಲ್ ಹೆಚ್ಚೆಚ್ಚು ಸಿನಿಮಾಗಳನ್ನು ನೋಡಲು ಪ್ರಾರಂಭಿಸಿದರು. ಹೆಚ್ಚಾಗಿ ಭಾರತೀಯ ಸಿನಿಮಾಗಳನ್ನು ನೋಡುತ್ತಿದ್ದರು. ಅವರಿಗೆ ಅವು ಇಷ್ಟವಾಗುತ್ತಿರಲಿಲ್ಲ. ಅವುಗಳನ್ನು ತುಂಬ ದ್ವೇಷಿಸುತ್ತಿದ್ದರು. ಸಿನಿಮಾ, ಅದರ ಕಲಾತ್ಮಕತೆ, ಇತ್ಯಾದಿ ವಿಷಯಗಳ ಬಗ್ಗೆ ಬರೆಯಲು ಪ್ರಾರಂಭಿಸಿದರು. ಕೊಲ್ಕತ್ತೆಯ ಕಾಲೇಜುಗಳಲ್ಲಿ ರ್‍ಯಾಡಿಕಲ್ ಚಳುವಳಿ ವ್ಯಾಪಕವಾಗಿದ್ದ ಕಾಲ ಅದು. ಸೂಕ್ಷ್ಮ ಮನಸ್ಸಿನ ವಿದ್ಯಾರ್ಥಿಯೂ ಅದರಿಂದ ಪ್ರಭಾವಿತವಾಗದೇ ಇರುವುದಕ್ಕೆ ಸಾಧ್ಯವಿರಲಿಲ್ಲ. ಕೊಲ್ಕತ್ತೆಯಲ್ಲಂತೂ ಅದು ಸಾಧ್ಯವೇ ಇರಲಿಲ್ಲ. ಮೃಣಾಲ್ ಸೇನ್ ಅದರ ಸಮ್ಮೋಹಿನಿಗೆ ಒಳಗಾದರು. ಇಪ್ಟಾ (ಇಂಡಿಯನ್ ಪೀಪಲ್ಸ್ ಥಿಯೇಟರ್ ಅಸೋಸಿಯೇಷನ್) ಪ್ರದರ್ಶಿಸುತ್ತಿದ್ದ ನಾಟಕಗಳನ್ನು ನೋಡಿದರು. ಅದು ಅವರ ಮೇಲೆ ಸಾಕಷ್ಟು ಪರಿಣಾಮ ಬೀರಿದವು. ಅವರು ನೇರವಾಗಿ ಇಪ್ಟಾದಲ್ಲಿ ಪಾಲ್ಗೊಳ್ಳದಿದ್ದರೂ ಅದರಿಂದ ರಂಗಭೂಮಿಯ ಚಟುವಟಿಕೆಗಳಲ್ಲಿ ಅವರಿಗೆ ಆಸಕ್ತಿ ಕೆರಳಿತು. ಅವರ ಸಾಮಾಜಿಕ ಪ್ರಜ್ಞೆ ತೀವ್ರಗೊಂಡಿತು.

ಇಂಪೀರಿಯಲ್ ಲೈಬ್ರರಿಯಲ್ಲಿ ಕುಳಿತು ಸಿಕ್ಕ ಪುಸ್ತಕಗಳನ್ನೆಲ್ಲಾ ಓದಲು ಪ್ರಾರಂಭಿಸಿದರು. ಆ ಸಮಯದಲ್ಲಿ ಅವರಿಗೆ ಋತ್ವಿಕ್ ಘಟಕ್, ಸಲೀಲ್ ಚೌಧುರಿ ಮುಂತಾದವರ ಪರಿಚಯವಾಯಿತು.



ಆತ್ಮಾವಲೋಕನದ ಪ್ರಕ್ರಿಯೆಯಲ್ಲಿ ಬದುಕನ್ನು ನೋಡುವ ಅವರ ದೃಷ್ಟಿಯೂ ಬದಲಾಗುತ್ತಾ ಬಂತು. ದೊಡ್ಡ ದೊಡ್ಡ ನಾಟಕೀಯ ಘಟನೆಗಳು ನಿಜಜೀವನದಲ್ಲಿ ಅಪರೂಪ. ಅದರ ಸುತ್ತ ಕಥೆ ಹೆಣೆಯುವುದು ವಾಸ್ತವಕ್ಕೆ ವಿಮುಖವಾಗುವ ಪಲಾಯನದಂತೆ ಅವರಿಗೆ ಕಾಣಿಸತೊಡಗಿತು. ವಾಸ್ತವ ಬದುಕಿನಲ್ಲಿ ಅಂತಹ ದೊಡ್ಡ ದೊಡ್ಡ ಘಟನೆಗಳು ನಡೆಯುತ್ತಿರುವುದಿಲ್ಲ. ಬೆಳಗ್ಗಿನಿಂದ ರಾತ್ರಿಯವರೆಗೆ ನಗಣ್ಯ ಅಂತ ತಳ್ಳಿಹಾಕಿಬಿಡಬಹುದಾದ ಸಣ್ಣಪುಟ್ಟ ಘಟನೆಗಳೇ ನಡೆಯುತ್ತಿರುತ್ತವೆ. ಅವೇ ನಮ್ಮ ಬದುಕಿನ ಭಾಗಗಳಾಗಿರುತ್ತವೆ ಮತ್ತು ನಮ್ಮ ಬದುಕನ್ನು ರೂಪಿಸುತ್ತಿರುತ್ತವೆ. ಅವುಗಳ ನಡುವೆಯೇ ನಾವು ಬೆಳೆಯುತ್ತಿರುತ್ತೇವೆ. ನಮ್ಮ ವಿವೇಚನೆಯೂ ರೂಪುಗೊಳ್ಳುತ್ತಿರುತ್ತದೆ. ಹಾಗಿದ್ದಾಗ ಅಂತಹ ಸಣ್ಣಪುಟ್ಟ ಘಟನೆಗಳನ್ನೇ ಬಳಸಿಕೊಂಡು ಚಿತ್ರಕತೆಯನ್ನು ಏಕೆ ಕಟ್ಟಬಾರದು ಅನ್ನುವ ಪ್ರಶ್ನೆ ಅವರನ್ನು ಕಾಡತೊಡಗಿತು.



ಇವಿಷ್ಟೇ ಅವರಿಗೆ ಸಿನಿಮಾ ರಂಗಕ್ಕೆ ಕಾಲಿಡುವುದಕ್ಕೆ ಇದ್ದ ತಯಾರಿ. ಒಂದು ಕಡೆ ಐಸೆನ್‌ಸ್ಟೀನ್ ಮತ್ತು ಅವರ ಗೆಳೆಯರ ಮಾದರಿಯ ರಷ್ಯನ್ ಸಿನಿಮಾ ಕುರಿತ ಓದು. ಇನ್ನೊಂದು ಕಡೆ ಭಾರತೀಯ ಮುಖ್ಯವಾಹಿನಿಯ ಅವರು ಇಷ್ಟಪಡದ ಸಿನಿಮಾಗಳನ್ನು ನೋಡಿದ ಅನುಭವ. ೧೯೫೬ರಲ್ಲಿ ಯಾರೋ ಒಂದು ಕಥೆ ತಂದರು. ಸೇನ್ ಚಿತ್ರಕಥೆ ಬರೆದರು. 'ರಾತ್ಭೋರ್' ಸಿನಿಮಾ ಮಾಡಿಯೇ ಬಿಟ್ಟರು. ಅದೊಂದು ಕೆಟ್ಟ ಸಿನಿಮಾ. ತೆಗೆದವರಿಗೇ ನೋಡುವುದಕ್ಕೆ ನಾಚಿಕೆಯಾಗುವಂತಹ ಸಿನಿಮಾ. "ಅದೊಂದು ಘೋರ ದುರಂತ. ಅದು ಇಡೀ ಜಗತ್ತಿನಲ್ಲಿ ತಯಾರಾದ ಅತ್ಯಂತ ಕೆಟ್ಟ ಸಿನಿಮಾಗಳಲ್ಲಿ ಕೆಟ್ಟ ಸಿನಿಮಾ" ಅಂತ ಅವರೇ ಹೇಳಿಕೊಂಡಿದ್ದಾರೆ. ಅದನ್ನು ನೋಡಿ ಅವರಿಗೇ ಎಷ್ಟು ಕಸಿವಿಸಿಯಾಯಿತೆಂದರೆ, ಕೆಲವು ದಿನ ಮನೆ ಬಿಟ್ಟು ಹೊರಗೆ ಬರಲೇ ಇಲ್ಲ. ಯಾರೊಂದಿಗೂ ಮಾತೂ ಆಡುತ್ತಿರಲಿಲ್ಲ. ಎರಡು ವರ್ಷ ಏನೂ ಮಾಡಲಿಲ್ಲ. ಪಾಪ ಔಷಧಿ ಮಾರುವ ಕೆಲಸ ಬಿಟ್ಟು ಆ ಸಿನಿಮಾ ತೆಗೆದಿದ್ದರು.

ನಂತರ 'ನೀಲ್ ಆಕಾಶೇರ್ ನೀಚೆ' ಸಿನಿಮಾ ತೆಗೆದರು. ಅದು ಅಷ್ಟು ಕಳಪೆಯಾಗಿರಲಿಲ್ಲ. ಆದರೆ ಅಂತಹ ಒಳ್ಳೆಯ ಸಿನಿಮಾವೂ ಅಲ್ಲ. ಅವರಿಗೆ ಅದು ಅಷ್ಟೇನೂ ಇಷ್ಟವಾಗಿರಲಿಲ್ಲ. ಆದರೂ ಕೆಲವರು ಮೆಚ್ಚಿಕೊಂಡಿದ್ದರು. ಅದನ್ನು ನೋಡಿದ ನೆಹರೂ ಮೆಚ್ಚಿಕೊಂಡಿದ್ದಷ್ಟೇ ಅಲ್ಲ, ಗೆಳೆಯರಿಗೆ ನೋಡಲು ಶಿಫಾರಸ್ಸು ಬೇರೆ ಮಾಡುತ್ತಿದ್ದರು.

ಅವರ ಮೂರನೇ ಸಿನಿಮಾ 'ಭೈಷೆ ಶ್ರಾವಣ್.' ಅದು ಸಿನಿಮಾ ಕ್ಷೇತ್ರದಲ್ಲಿ ಮೃಣಾಲ್ ಅವರಿಗೆ ಒಂದು ಸ್ಥಾನವನ್ನು ತಂದುಕೊಟ್ಟಿತು. ವೆನಿಸ್ ಫಿಲ್ಮೋತ್ಸವದಲ್ಲಿ ಪ್ರದರ್ಶನಗೊಂಡಿತು. ವಿಮರ್ಶಕರ ಮೆಚ್ಚುಗೆಯನ್ನೂ ಗಳಿಸಿತು. ಅದರಲ್ಲಿ ಸಾಮಾಜಿಕ ಅಸಮಾನತೆಯನ್ನು ಅರ್ಥ ಮಾಡಿಕೊಳ್ಳಲು ಪ್ರಯತ್ನಿಸಿದ್ದಾರೆ. ಬಂಗಾಲದ ಬರಗಾಲದ ಚಿತ್ರಣ ಅದರಲ್ಲಿದೆ, ಆದರೆ ಅದು ಬರಗಾಲವನ್ನು ಕುರಿತ ಸಿನಿಮಾ ಅಲ್ಲ. ಒಂದು ಮಿಲಿಯನ್ ಜನ ಸತ್ತರು ಅನ್ನುವ ವರದಿ ನಿಮಗಲ್ಲಿ ಸಿಗುವುದಿಲ್ಲ. ಅಂತಹ ದೊಡ್ಡ ದುರಂತದಲ್ಲಿ ಮನುಷ್ಯ ತನ್ನಲ್ಲಿ ಉಳಿದಿರಬಹುದಾದ ಅಲ್ಪ ಸ್ವಲ್ಪ ಮಾನವೀಯ ಸಜ್ಜನಿಕೆಯನ್ನೂ ಹೇಗೆ ಕಳೆದುಕೊಳ್ಳುತ್ತಾನೆಂಬುದನ್ನದು ತೋರಿಸುತ್ತದೆ. ಅಲ್ಲಿ ಮುಖ್ಯವಾಗುವುದು ಮಾನವ ಸಂಬಂಧಗಳು. ಅದರ ಮೂಲಕ "ನಾನು ನಡೆಯುವುದನ್ನು ಕಲಿತೆ" ಎಂದು ಸೇನ್ ಹೇಳಿಕೊಂಡಿದ್ದಾರೆ.

ಭೈಷೆ ಶ್ರಾವಣ್ ನಂತರ ಅವರ ಸಿನಿಮಾ ಶೈಲಿಯಲ್ಲಿ ಒಂದಿಷ್ಟು ಬದಲಾವಣೆ ಕಾಣಿಸಿಕೊಂಡಿತು. ಬಹುಶಃ ಅವರು ಅಂತರರಾಷ್ಟ್ರೀಯ ಸಿನಿಮಾಗಳಿಗೆ ತೆರೆದುಕೊಂಡಿದ್ದು ಕಾರಣವಿರಬಹುದು. ಆ ಸಮಯದಲ್ಲಿ ಅವರು ತೆಗೆದ 'ಭುವನ್ ಶೋಮ್' ಭಾರತದ ಹೊಸ ಅಲೆಯ ಸಿನಿಮಾದ ಒಂದು ಪ್ರಮುಖ ಮೈಲುಗಲ್ಲು ಎನ್ನುತ್ತಾರೆ. ಅದರಲ್ಲಿ ಬಹುಪಾಲು ಜನರಿಗೆ ಅದು ಸಿನಿಮಾದ ಮೊದಲ ಅನುಭವ, ಮೊದಲ ಪ್ರಯತ್ನ. ಅದರ ಛಾಯಾಗ್ರಾಹಕ ಕೆ. ಕೆ. ಮಹಾಜನ್ ಆಗಷ್ಟೇ ಡಿಪ್ಲಮೊ ಮುಗಿಸಿ ಬಂದಿದ್ದರು. ನಾಯಕಿಯಾಗಿ ನಟಿಸಿರುವ ಸುಹಾಸಿನಿ ಕ್ಯಾಮೆರಾಕ್ಕೆ ಮುಖ ತೋರಿಸಿದ್ದು ಅದೇ ಮೊದಲ ಬಾರಿ. ಅಷ್ಟೇ ಅಲ್ಲ ಅದರಲ್ಲಿ ಕಂಠದಾನ ಮಾಡಿರುವ ಅಮಿತಾಬ್ ಬಚ್ಚನ್ ಅವರದ್ದೂ ಕೂಡ ಮೊದಲ ಚಿತ್ರ ಅದು. ಅದಕ್ಕಾಗಿ ಅವರು ಪಡೆದ ೩೦೦ ರೂಪಾಯಿ ಅವರ ಚಿತ್ರ ಬದುಕಿನ ಮೊದಲ ಸಂಭಾವನೆ! ಅದರಲ್ಲಿ ಸೊಗಸಾಗಿ ನಟಿಸಿರುವ ಉತ್ಪಲ್‌ದತ್ ಅವರ ಮೊದಲ ಹಿಂದಿ ಚಿತ್ರ ಅದು. 'ಭುವನ್ ಶೋಮ್' ಚಿತ್ರದ ರಚನೆಯಲ್ಲೂ ಒಂದು ಹೊಸ ಪ್ರಯತ್ನವಿದೆ. ಆ್ಯನಿಮೇಷನ್ ಬಳಸಿದ್ದಾರೆ. ತಮಾಷೆಯ ಅಂಶ ಇದೆ. ಆ ಮೂಲಕ ಚಾಪ್ಲಿನ್ ಅಂಶ ಕಾಣುತ್ತದೆ. ಹಲವು ರೀತಿಯ ಪಾತ್ರಗಳು ಬರುತ್ತವೆ. ಹೀಗೆ ಹಲವು ಕಾರಣಕ್ಕೆ ಅದು ಆಸಕ್ತಿ ಕೆರಳಿಸಿತ್ತು.

೧೯೬೦ರ ಕೊನೆಯ ಭಾಗದಲ್ಲಿ ಕೊಲ್ಕತ್ತೆಯ ರಾಜಕೀಯ ವಾತಾವರಣ ಪ್ರಕ್ಷುಬ್ಧವಾಗಿತ್ತು. ಅದು ಸೇನ್ ಅವರ ರಾಜಕೀಯ ನಿಲುವು ತೀವ್ರವಾಗಿದ್ದ ಸಮಯ. ಸಿನಿಮಾ ಅವರಿಗೆ ಒಂದು ಸಾಮಾಜಿಕ ಬದಲಾವಣೆಯ ಮಾಧ್ಯಮವಾಗಿತ್ತು. ಸಿನಿಮಾವನ್ನು ಒಂದು ರಾಜಕೀಯ ಪ್ರಚಾರದ ವೇದಿಕೆಯಾಗಿ ಬಳಸಿಕೊಳ್ಳುವುದಕ್ಕೆ ಅವರಿಗೆ ಯಾವುದೇ ಹಿಂಜರಿಕೆಯೂ ಇರಲಿಲ್ಲ. ಆದರೆ ಅದಕ್ಕೊಂದು ಭಾವನಾತ್ಮಕ ಸಮರ್ಥನೆ ಇರಬೇಕೆಂದು ಭಾವಿಸಿದ್ದರು. ಸಿನಿಮಾ ಅಂದರೆ ಹೀಗೇ ಇರಬೇಕು, ಅದರ ಸ್ವರೂಪ ಹೀಗೇ ಇರಬೇಕು. ಇಂತಹ ಥಿಯರಿಗಳು ಅವರಿಗೆ ಸರಿ ಅಂತ ತೋರಲಿಲ್ಲ. ತಮ್ಮದೇ ಆದ ಕ್ರಮವನ್ನು ಕಂಡುಕೊಂಡರು. ಕೆಲವೊಮ್ಮೆ ಅದು ರಿಯಲಿಸ್ಟಿಕ್ ಮಾದರಿಯಲ್ಲಿದ್ದರೆ, ಕೆಲವೊಮ್ಮೆ ಅದು ಸರ್ರಿಯಲಿಸ್ಟ್ ಹಾದಿಯನ್ನು ಹಿಡಿಯುತ್ತಿತ್ತು. ಕಚ್ಚಾ ಡಾಕ್ಯುಮೆಂಟರಿಯ ದೃಶ್ಯಗಳನ್ನು ಕಥೆಯೊಳಗೆ ಹೆಣೆಯುತ್ತಿದ್ದರು. ಪ್ರಜ್ಞಾಪೂರ್ವಕವಾಗಿಯೇ ಈ ಶೈಲಿಯನ್ನು ಆರಿಸಿಕೊಂಡಿದ್ದರು.



ಆ ಅವಧಿಯಲ್ಲಿ ರ‍್ಯಾಡಿಕಲ್ ಚಳುವಳಿಗಳನ್ನು ಪ್ರಬಲವಾಗಿ ಹತ್ತಿಕ್ಕಲಾಗುತ್ತಿತ್ತು. ಎಡಪಂಥೀಯ ಚಳುವಳಿಗಾರರು ತಮ್ಮ ಮನೆಮಠಗಳನ್ನು ಬಿಟ್ಟು ತಲೆಮರೆಸಿಕೊಂಡು ಹೋಗುತ್ತಿದ್ದ ಕಾಲ ಅದು. ಯಾವುದೇ ಚಳುವಳಿಗಳು, ಮೆರವಣಿಗೆಗಳು ನಡೆಯುವುದಕ್ಕೆ ಸಾಧ್ಯವೇ ಇರಲಿಲ್ಲ. ಆ ಸಮಯದಲ್ಲಿ 'ಕಲ್ಕತ್ತಾ ೭೧' ಚಿತ್ರ ಬಿಡುಗಡೆಯಾಯಿತು. ಅದು ಮಾನವನ ಶೋಷಣೆಯ ಕರಾಳಮುಖವನ್ನು ಚಿತ್ರಿಸುತ್ತಿತ್ತು. ಕಲ್ಕತ್ತೆಯ ಮೂರು ಪ್ರಮುಖ ಥಿಯೇಟರುಗಳಲ್ಲಿ ಅದರ ಮೂರು ಷೋಗಳು, ಮೂರು ವಾರಗಳ ಕಾಲ ನಿರಂತರವಾಗಿ ಹೌಸ್ ಫುಲ್ ಆದವು.

ಅದು ಅಷ್ಟು ಯಶಸ್ವಿಯಾಗುವುದಕ್ಕೆ ಸಿನಿಮಾ ಮಾತ್ರ ಕಾರಣವಾಗಿರಲಿಲ್ಲ. ಆ ಸಮಯ ಹಾಗಿತ್ತು. ಅದೊಂದು ರೀತಿ ಜನ ಟಿಕೆಟ್ ಕೊಂಡು ಪ್ರತಿಭಟನಾ ಸಭೆಗಳಲ್ಲಿ ಭಾಗವಹಿಸಿದ ಅನುಭವ. ಪೊಲೀಸರು ಎಷ್ಟೋ 'ವಾಂಟೆಡ್' ಜನರನ್ನು ಸಿನಿಮಾ ಕ್ಯೂನಲ್ಲಿ ಅರೆಸ್ಟ್ ಮಾಡಿಕೊಂಡು ಹೋಗುತ್ತಿದ್ದರು. ಸೇನ್ ಎರಡು ಮೂರು ವರ್ಷಗಳ ಹಿಂದಿನಿಂದಲೇ ಕೊಲ್ಕತ್ತೆಯಲ್ಲಿ ನಡೆಯುತ್ತಿದ್ದ ಹಲವಾರು ಮೆರವಣಿಗೆಗಳನ್ನು ಚಿತ್ರಿಸಿಕೊಂಡಿದ್ದರು. ಅವೆಲ್ಲವನ್ನೂ ಆ ಚಿತ್ರದಲ್ಲಿ ಬಳಸಿಕೊಂಡಿದ್ದರು. ಅದರಲ್ಲಿ ಚಿತ್ರಿತರಾಗಿದ್ದ ಎಷ್ಟೋ ಹುಡುಗರು ಪೊಲೀಸರಿಂದ ಕೊಲೆಗೀಡಾಗಿದ್ದರು. ಅವರನ್ನು ನೋಡಲು ಅವರ ಮನೆಯವರು, ಸ್ನೇಹಿತರು ಸಿನಿಮಾಕ್ಕೆ ಬರುತ್ತಿದ್ದರು. ಮತ್ತೆ ಮತ್ತೆ ನೋಡುತ್ತಿದ್ದರು. ಎದೆಬಿರಿಯುವಂತೆ ಅಳುತ್ತಿದ್ದರು.





ಅವರನ್ನು ಸಮಾಧಾನಪಡಿಸುವುದೇ ಒಂದು ಸಾಹಸದ ಕೆಲಸವಾಗಿತ್ತು.

'ಕಲ್ಕತ್ತಾ ೭೧', ಅದಕ್ಕೆ ಮೊದಲು ತೆಗೆದಿದ್ದ 'ಇಂಟರ್‌ವ್ಯೂ' ಹಾಗೂ ಅದಾದ ಮೇಲೆ ತೆಗೆದ 'ಪದಾತಿಕ್' ರಾಜಕೀಯ ತ್ರಿವಳಿಗಳಾಗಿದ್ದವು. ಮೂರನೇ ಸಿನಿಮಾ ತೆಗೆಯುವ ವೇಳೆಗೆ ಸೇನ್ ಸ್ವಲ್ಪ ಮಟ್ಟಿಗೆ ಬದಲಾಗಿದ್ದರು. ಮೊದಲೆರಡು ಸಿನಿಮಾಗಳಲ್ಲಿ ಅವರಿಗೆ ಎಡಪಂಥೀಯ ಚಳುವಳಿಯ ಬಗ್ಗೆ ಮೆಚ್ಚುಗೆ ಹಾಗೂ ಗೌರವ ಇತ್ತು. ನಂತರವೂ ಅದೇ ಗೌರವ ಉಳಿದಿತ್ತು. ಆದರೆ 'ಪದಾತಿಕ್' ಸಿನಿಮಾದಲ್ಲಿ ಅವರು ಹೆಚ್ಚು ಧ್ಯಾನಸ್ಥರಾಗಿದ್ದರು. ಅದು ಪೊಲೀಸರಿಂದ ಹಾಗೂ ತನ್ನ ಸಂಗಾತಿಗಳಿಂದ ತಪ್ಪಿಸಿಕೊಂಡು ಹೋಗುತ್ತಿದ್ದ ಒಬ್ಬ ಯುವ ಕಾಮ್ರೇಡನ ಮನಸ್ಥಿತಿಯನ್ನು ಚಿತ್ರಿಸುತ್ತದೆ. ಅಲ್ಲಿ ನಕ್ಸಲೀಯ ಚಳುವಳಿಯ ಸಾಮರ್ಥ್ಯ ಹಾಗೂ ಮಿತಿಯನ್ನು ವಿಶ್ಲೇಷಿಸುತ್ತಾರೆ. ಒಂದು ರಾಜಕೀಯ ಸೋಲಿನ ಮೂಲವನ್ನು ಸೇನ್ ನೈತಿಕ ಸೋಲಿನಲ್ಲಿ ಕಾಣುತ್ತಾರೆ. ಚಳುವಳಿಗಳು ಮಾನವನ ಸಂಬಂಧಗಳನ್ನು ಅರ್ಥ ಮಾಡಿಕೊಳ್ಳುವಲ್ಲಿ ಸೋತಿರುವುದಕ್ಕೆ ಕಾರಣಗಳನ್ನು ಹುಡುಕುತ್ತಾರೆ. ಆ ಮೂಲಕ ಒಂದು ಸ್ವವಿಮರ್ಶೆಯನ್ನು ಮಾಡಿಕೊಳ್ಳುತ್ತಾರೆ. ಅವರು ಚಳುವಳಿಯಿಂದ ಹೊರಗೆ ನಿಂತು ಅದನ್ನು ಅವಹೇಳನ ಮಾಡುವುದಿಲ್ಲ, ನಿಂದಿಸುವುದಿಲ್ಲ. ಉಪದೇಶ ಮಾಡುವುದಿಲ್ಲ. ಯಾವಾಗಲೂ ಸ್ವವಿಮರ್ಶೆ ಎನ್ನುವುದು ನಿಂದನೆಯಾಗಿಬಿಡುವ ಅಪಾಯ ಇರುತ್ತದೆ. ಅವೆರಡರ ನಡುವಿನ ಅಂತರ ತುಂಬ ಕಡಿಮೆ. ಸೇನ್‌ಗೆ ಇದರ ಬಗ್ಗೆ ಸ್ಪಷ್ಟತೆಯಿತ್ತು. ರಾಜಕೀಯದಿಂದ ಸೇನ್ ದೂರ ಬಂದಿದ್ದಾರೆ ಅನ್ನುವ ಟೀಕೆಗಳು ಬಂದವು. ಅವರಲ್ಲಿ ಮಿಲಿಟೆನ್ಸಿ ಕಡಿಮೆಯಾಗಿದೆ ಅಂತ ಹಲವರು ವಿಮರ್ಶೆ ಬರೆದರು.

ಸೇನ್ ತಮ್ಮ ಮೊದಲ ಸಿನಿಮಾಗಳಲ್ಲಿ ಶೋಷಣೆ ಹಾಗೂ ಅದರ ಕಾರಣವನ್ನು ಶೋಧಿಸುತ್ತಿದ್ದರು. ಜೊತೆಗೆ ತುಂಬ ಕ್ರೋಧ ಇತ್ತು. "ನಾನು ತುಂಬ ಕೂಗುತ್ತಿದ್ದೆ. ಹೊಸ ಸಮಾಜದ ನಿರ್ಮಾಣದ ಬಗ್ಗೆ ಮಾತನಾಡುತ್ತಿದ್ದೆ. ಅದ್ಭುತ ಭವಿಷ್ಯದ ಬಗ್ಗೆ ಮಾತನಾಡುತ್ತಿದ್ದೆ. ಅದು ಸದ್ಯದಲ್ಲೆ ಬಂದು ಬಿಡುತ್ತೆ ಅಂತ ನಂಬಿದ್ದೆ. ಬಹುಶಃ ಅದು ತುಂಬ ಸರಳೀಕರಣವಾದ ತೀರ್ಮಾನವಾಗಿತ್ತು ಅಂತ ಈಗ ಅನ್ನಿಸುತ್ತದೆ. ಆಗ ನನ್ನ ನಂಬಿಕೆಗಳೇ ಹಾಗಿದ್ದವು. ಆಗ ಅದೇ ಪ್ರಧಾನವಾದ ಸಾಮಾಜಿಕ ಹಾಗೂ ರಾಜಕೀಯ ನಂಬಿಕೆಗಳಾಗಿದ್ದವು. ಈಗ ಅಲ್ಲಿಂದ ದೂರ ಬಂದಿದ್ದೇನೆ. ಆತ್ಮಾವಲೋಕನ, ಸ್ವವಿಮರ್ಶೆ ಮಾಡಿಕೊಳ್ಳಬೇಕಾಗಿದೆ. ನನ್ನ ಒಳಗನ್ನು ಅರ್ಥಮಾಡಿಕೊಳ್ಳಬೇಕಾಗಿದೆ. 'ಏಕ್ ದಿನ್ ಪ್ರತಿದಿನ್' ಸಿನಿಮಾದಲ್ಲಿ ನನ್ನ ಕಾಳಜಿಯೆಲ್ಲವೂ ಒಳಗಿನ ಜಗತ್ತು, ಅದರ ನಿಗೂಢತೆ, ಅದರ ನಿರಾಶೆಗಳು, ಗೊಂದಲಗಳು ಹಾಗೂ ಸಾಮರ್ಥ್ಯ ಇವೆಲ್ಲವನ್ನೂ ಅರ್ಥಮಾಡಿಕೊಳ್ಳುವತ್ತ ಇತ್ತು."

ಸಾಮಾಜಿಕ ಬದಲಾವಣೆಗಾಗಿ ಸಿನಿಮಾವನ್ನು ಬಳಸಿಕೊಳ್ಳಬಹುದೆಂದು ಅವರು ಬಲವಾಗಿ ನಂಬಿದ್ದರು. ಅದು ಸ್ವಲ್ಪಮಟ್ಟಿಗೆ ನಿಜವಿರಬಹುದು. ಸಿನಿಮಾದಿಂದ "ಈಗಾಗಲೇ ಮಿಲಿಟೆಂಟ್ ಆಗಿರುವವರು ಇನ್ನಷ್ಟು ಮಿಲಿಟೆಂಟ್ ಆಗಬಹುದು. ಆದರೆ ಹೊರಗುಳಿದವರನ್ನು ಪ್ರೇರೇಪಿಸುವುದಕ್ಕೆ ಅದರಿಂದ ಸಾಧ್ಯವಾಗುವುದಿಲ್ಲ." 'ಬ್ಯಾಟಲ್ ಷಿಪ್ ಪೊಟೆಮ್ಕಿನ್' ಅಂತಹ ಹತ್ತು ಸಿನಿಮಾ ತೆಗೆದರೂ ಸರ್ಕಾರವೊಂದನ್ನು ಉರುಳಿಸೋದು ಸಾಧ್ಯವಿಲ್ಲ ಎಂಬುದನ್ನು ಸೇನ್ ಮನಗಂಡರು. ಬದಲಾವಣೆ ಆಗಬೇಕಾದರೆ ನಿಜವಾಗಿ ಬೇಕಿರುವುದು ಸೂಕ್ತವಾದ ವಾತಾವರಣ. ಅಂತಹ ವಾತಾವರಣದ ಸೃಷ್ಟಿಗೆ ಸಿನಿಮಾದಂತಹ ಮಾಧ್ಯಮಗಳು ಸಹಾಯಕವಾಗಬಲ್ಲವು. "ಸಾಹಿತ್ಯ ಹಾಗೂ ಇತರ ಮಾಧ್ಯಮಗಳಂತೆ ಸಿನಿಮಾಕ್ಕೂ ಒಂದು ಸಾಮಾಜಿಕ ಜವಾಬ್ದಾರಿ ಇದೆ. ಅದು ಒಂದು ವಾತಾವರಣವನ್ನು ಸೃಷ್ಟಿಸುತ್ತದೆ. ಒಂದು ರೀತಿಯ ಚರ್ಚೆಯನ್ನು ಅದು ಪ್ರಚೋದಿಸಬಹುದು. ಅದಕ್ಕೆ ಬೇಕಾದ ಮಾಹಿತಿಯನ್ನು ಒದಗಿಸುವುದು ನನ್ನ ಕೆಲಸ. ಅದು ತಟಸ್ಥ ನಿಲುವಿನಿಂದ ಬಂದ ಮಾಹಿತಿಯಲ್ಲ. ಅದರಲ್ಲಿ ನನ್ನ ನಿಲುವು ಇರುತ್ತದೆ. ಈ ಚರ್ಚೆಯ ಪ್ರಕ್ರಿಯೆಯಲ್ಲಿ ನಿಮ್ಮನ್ನು ಪ್ರೇಕ್ಷಕರಾಗಿ ಸಕ್ರಿಯವಾಗಿ ತೊಡಗುವಂತೆ ಸಿನಿಮಾ ಮಾಡಬಹುದು." ನಿಯೊ ರಿಯಲಿಸಂನ ಪ್ರವರ್ತಕ ಜವಟೇನಿ ಕೂಡ ಅಂತಹುದೇ ಒಂದು ತೀರ್ಮಾನಕ್ಕೆ ಬಂದಿದ್ದ. "ಸಿನಿಮಾ ಸಮಾಜವನ್ನು ಬದಲಿಸುತ್ತೆ ಅಂದು ಕೊಂಡಿದ್ದೆ. ಸಿನಿಮಾ ಹ್ಯಾಸ್ ಫೇಲ್ಡ್ ಮಿ ಮಿಸರಬಲಿ" ಎಂದು ಜವಟೇನಿಯೇ ಸೇನ್‌ಗೆ ಹೇಳಿದ್ದರಂತೆ. ಸಿನಿಮಾದಿಂದ ಫ್ಯಾಸಿಸಂಅನ್ನು ತಪ್ಪಿಸುವುದಕ್ಕೆ ಸಾಧ್ಯವಿಲ್ಲ. ಹೆಚ್ಚೆಂದರೆ ಫ್ಯಾಸಿಸಂ ಕಡೆ ಹೋಗುತ್ತಿರುವ ಸಮಾಜದಲ್ಲಿ ಒಂದು ಚರ್ಚೆ ಸಾಧ್ಯವಾಗುವಂತಹ ವಾತಾವರಣವನ್ನು ಸೃಷ್ಟಿಸಬಹುದು.

ಸೇನರ ನಿಲುವು ಬದಲಾಗುವುದಕ್ಕೆ ಬದಲಾದ ರಾಜಕೀಯ ಪರಿಸ್ಥಿತಿಯೂ ಕಾರಣ. ಅವರು ನಂಬಿಕೊಂಡಿದ್ದ ಎಡಪಕ್ಷಗಳು ನಿರಾಸೆ ಮೂಡಿಸಿದ್ದವು. ಹಾಗಾಗಿ ಒಂದು ಆತ್ಮಾವಲೋಕನದ, ಸ್ವವಿಮರ್ಶೆಯ ಅವಶ್ಯಕತೆ ಇತ್ತು. ತಪ್ಪನ್ನು ಬೇರೆಯವರಲ್ಲಿ, ಹೊರಗಡೆ ಹುಡುಕದೆ ತಮ್ಮಲ್ಲೇ ನೋಡಿಕೊಳ್ಳುವ ಅವಶ್ಯಕತೆ ಜರೂರಾಗಿತ್ತು.

ಇಂತಹ ಆತ್ಮಾವಲೋಕನದ ಪ್ರಕ್ರಿಯೆಯಲ್ಲಿ ಬದುಕನ್ನು ನೋಡುವ ಅವರ ದೃಷ್ಟಿಯೂ ಬದಲಾಗುತ್ತಾ ಬಂತು. ದೊಡ್ಡ ದೊಡ್ಡ ನಾಟಕೀಯ ಘಟನೆಗಳು ನಿಜಜೀವನದಲ್ಲಿ ಅಪರೂಪ. ಅದರ ಸುತ್ತ ಕಥೆ ಹೆಣೆಯುವುದು ವಾಸ್ತವಕ್ಕೆ ವಿಮುಖವಾಗುವ ಪಲಾಯನದಂತೆ ಅವರಿಗೆ ಕಾಣಿಸತೊಡಗಿತು. ವಾಸ್ತವ ಬದುಕಿನಲ್ಲಿ ಅಂತಹ ದೊಡ್ಡ ದೊಡ್ಡ ಘಟನೆಗಳು ನಡೆಯುತ್ತಿರುವುದಿಲ್ಲ. ಬೆಳಗ್ಗಿನಿಂದ ರಾತ್ರಿಯವರೆಗೆ ನಗಣ್ಯ ಅಂತ ತಳ್ಳಿಹಾಕಿಬಿಡಬಹುದಾದ ಸಣ್ಣಪುಟ್ಟ ಘಟನೆಗಳೇ ನಡೆಯುತ್ತಿರುತ್ತವೆ. ಅವೇ ನಮ್ಮ ಬದುಕಿನ ಭಾಗಗಳಾಗಿರುತ್ತವೆ ಮತ್ತು ನಮ್ಮ ಬದುಕನ್ನು ರೂಪಿಸುತ್ತಿರುತ್ತವೆ. ಅವುಗಳ ನಡುವೆಯೇ ನಾವು ಬೆಳೆಯುತ್ತಿರುತ್ತೇವೆ. ನಮ್ಮ ವಿವೇಚನೆಯೂ ರೂಪುಗೊಳ್ಳುತ್ತಿರುತ್ತದೆ. ಹಾಗಿದ್ದಾಗ ಅಂತಹ ಸಣ್ಣಪುಟ್ಟ ಘಟನೆಗಳನ್ನೇ ಬಳಸಿಕೊಂಡು ಚಿತ್ರಕತೆಯನ್ನು ಏಕೆ ಕಟ್ಟಬಾರದು ಅನ್ನುವ ಪ್ರಶ್ನೆ ಅವರನ್ನು ಕಾಡತೊಡಗಿತು. ನಾಟಕೀಯವಾಗಿ ತೋರಬಹುದಾದ 'ಪ್ರಮುಖ' ಘಟನೆಗಳನ್ನು ಬಿಟ್ಟು ಇಂತಹ ಅಮುಖ್ಯ ಘಟನೆಗಳು, ದಿನನಿತ್ಯದ ಬದುಕಿನ ತೀರಾ ಸಾಮಾನ್ಯವಾದ ಘಟನೆಗಳು ಅವರ ಚಿತ್ರದ ವಸ್ತುಗಳಾದವು. "ನಾನು ಪ್ರತಿದಿನದ ಆಗುಹೋಗುಗಳಿಂದ ಸಣ್ಣ ಸಣ್ಣ ವಿಷಯಗಳನ್ನು ಹೆಕ್ಕಿಕೊಂಡು, ಅವುಗಳಿಗೆ ಒಂದು ರೂಪ ಕೊಟ್ಟು, ಅವುಗಳ ಮೂಲಕ ಒಂದು ಪರಿಕಲ್ಪನೆಯನ್ನು ಬೆಳೆಸಲು ಪ್ರಯತ್ನಿಸಿದೆ, " ಎನ್ನುತ್ತಾರೆ ಸೇನ್.

ಕ್ರಮೇಣ ಅವರ ಗಮನ ನಗರ ಜೀವನದ ಕಡೆಗೆ



ತಿರುಗಿತ್ತು. ಎಲ್ಲಾ ಒತ್ತಡ, ಹತಾಶೆಗಳ ನಡುವೆಯೂ ಜನರಲ್ಲಿ ವ್ಯಕ್ತವಾಗುತ್ತಿದ್ದ ಬದುಕುಳಿಯುವ ಹಂಬಲ (ಇನ್ಸ್‌ಟಿಂಗ್ಟ್) ಅವರ ಆಸಕ್ತಿಯನ್ನು ಕೆರಳಿಸಿತು. ಅದರಲ್ಲೂ ಇಂತಹ ಇನ್‌ಸ್ಟಿಂಗ್ಟ್ ಅನ್ನು ಅವರು ಮಧ್ಯಮವರ್ಗದಲ್ಲಿ ಪ್ರಧಾನವಾಗಿ ಕಂಡರು. ಏಕ್‌ದಿನ್ ಪ್ರತಿದಿನ್ ಸಿನಿಮಾದ ವಸ್ತುವೇ ಇದಾಯಿತು. ಅದರಲ್ಲಿ ಒಂದು ಕುಟುಂಬದ ಇಡೀ ಜವಾಬ್ದಾರಿಯನ್ನು ಮನೆಯ ಹಿರಿಮಗಳು ನೋಡಿಕೊಳ್ಳು ತ್ತಿರುತ್ತಾಳೆ. ಇಡೀ ಕುಟುಂಬ ಅವಳ ದುಡಿಮೆಯನ್ನು ಆಧರಿಸಿರುತ್ತದೆ. ಒಂದು ದಿನ ಕೆಲಸಕ್ಕೆ ಹೋದವಳು ಮತ್ತೆ ಬರುವುದಿಲ್ಲ. ಮನೆಯವರು ಕಾಯುತ್ತಾ ಪರಸ್ಪರ ದೋಷಾರೋಪಣೆ ಮಾಡಿಕೊಳ್ಳುತ್ತಾ ರಾತ್ರಿ ಕಳೆಯುತ್ತಾರೆ. ಎಲ್ಲರೂ ನೈತಿಕವಾಗಿ ಅದಕ್ಕೆ ಜವಾಬ್ದಾರರು. ಆದರೆ ಸಿನಿಮಾ ಹತಾಶೆಯಲ್ಲಿ ಮುಗಿಯುವುದಿಲ್ಲ. ಅಮ್ಮ ಮರುದಿನ ಒಲೆ ಹಚ್ಚುತ್ತಾಳೆ. ಮತ್ತೆ ಜೀವನ ಪ್ರಾರಂಭವಾಗುತ್ತದೆ. ಹತಾಶೆಯ ಆಂತರ್ಯದಲ್ಲೇ ನಮ್ಮಲ್ಲಿ ಮುಂದೆ ಸಾಗುವುದಕ್ಕೆ, ಬದುಕನ್ನು ಮುಂದುವರಿಸುವುದಕ್ಕೆ ಬೇಕಾದ ಶಕ್ತಿಯೂ ಇರುತ್ತದೆ. ಈ ಶಕ್ತಿಯಿಂದಾಗಿಯೇ ನಮಗೆ ಎಂತಹ ಬಿಕ್ಕಟ್ಟಿನ ನಡುವೆಯೂ ಬದುಕನ್ನು ಸಾಗಿಸುವುದಕ್ಕೆ ಸಾಧ್ಯವಾಗುವುದು.

ಹೀಗೆ ಒಳಗಿನೆಡೆಗಿನ ಪಯಣ ಮುಖ್ಯವಾದಂತೆಲ್ಲಾ ಅವರು ಶತ್ರುಗಳನ್ನು ಹೊರಗೆ ಹುಡುಕುವುದನ್ನು ಬಿಟ್ಟು ತಮ್ಮೊಳಗೇ ಹುಡುಕಲು ಪ್ರಯತ್ನಿಸಿದರು. "ನಮ್ಮನ್ನು ಸಂತರು ಅಂದುಕೊಂಡುಬಿಡುತ್ತೇವೆ. ನಮ್ಮ ಸುತ್ತ ಇರುವವರು ಕೂಡ ನಮ್ಮನ್ನು ಸಂತ ರನ್ನಾಗಿಸುತ್ತಿರುತ್ತಾರೆ. ಆ ಬಗ್ಗೆ ನಾವು ಎಚ್ಚರದಿಂದಿರಬೇಕು. ಸದಾ ಆತ್ಮಾವಲೋಕನ ಮಾಡಿಕೊಳ್ಳುತ್ತಿರಬೇಕು." 'ಏಕ್ ದಿನ ಅಚಾನಕ್' ಸಿನಿಮಾ ಒಂದರ್ಥದಲ್ಲಿ ಅವರ ಆತ್ಮಚರಿತ್ರೆ. ಸಿನಿಮಾದಲ್ಲಿ ಹೀರೋ ಒಂದು ಗಂಟೆಯೊಳಗೆ ಬರುತ್ತೇನೆ ಎಂದು ಹೇಳಿ ಹೋದವನು ಬರುವುದಿಲ್ಲ. ಅವನು ಕಣ್ಮರೆಯಾಗಿ ಒಂದು ವರ್ಷವಾಗಿರುತ್ತದೆ. ಸಿನಿಮಾ ಅಂತ್ಯವಾಗುತ್ತದೆ. ಆ ಒಂದು ವರ್ಷದ ಅವಧಿಯಲ್ಲಿ ಮಕ್ಕಳು ಆತ್ಮಾವಲೋಕನ ಮಾಡಿಕೊಳ್ಳುತ್ತಾರೆ. ಆ ಪ್ರಕ್ರಿಯೆಯಲ್ಲಿ ನರಳುತ್ತಾರೆ. ಆ ನರಳುವಿಕೆಯಲ್ಲೇ ಬೆಳೆಯುತ್ತಾರೆ. ಅಪ್ಪ ನಿಜವಾಗಿ ಏನು ಅನ್ನುವುದನ್ನು ಅರ್ಥಮಾಡಿಕೊಳ್ಳುತ್ತಾರೆ. ಆ ಪ್ರಕ್ರಿಯೆಯಲ್ಲಿ ಮೃಣಾಲ್ ಸೇನ್ ತಮ್ಮನ್ನೂ ಪರೀಕ್ಷೆಗೆ ಒಡ್ಡಿಕೊಳ್ಳುತ್ತಾರೆ.

ಅವರ 'ಕರೀಜ್' ಸಿನಿಮಾ ಇನ್ನೊಂದು ಬಗೆಯಲ್ಲಿ ಇದೇ ಕೆಲಸ ಮಾಡುತ್ತದೆ. ಅದರಲ್ಲಿ ಮನೆಕೆಲಸದ ಹುಡುಗ ಸಾಯುತ್ತಾನೆ. ಬಡಹುಡುಗನ ತಂದೆಯನ್ನು ಸಮಾಧಾನಪಡಿಸುವ ಪ್ರಯತ್ನ ನಡೆಯುತ್ತದೆ. ಮಗನ ಸಾವಿನಿಂದ ಘಾಸಿಗೊಂಡ ಅಪ್ಪ ಶವಸಂಸ್ಕಾರ ಮಾಡಿ ಮಾಲಿಕನ ಮನೆಗೆ ಬರುತ್ತಾನೆ. ನೀವು ಘರ್ಷಣೆಯ



ನಿರೀಕ್ಷೆಯಲ್ಲಿ ಇರುತ್ತೀರಿ. ಆದರೆ ಘರ್ಷಣೆ ಆಗುವುದಿಲ್ಲ. ವಾಸ್ತವ ಜೀವನದಲ್ಲೂ ಆಗುವುದಿಲ್ಲ. ಬಹುಶಃ ಕ್ರಾಂತಿಕಾರಿ ಅಂತ್ಯ ಅಂದರೆ, ಅವನು ಮನೆ ಒಡೆಯನ ಕೆನ್ನೆಗೆ ಹೊಡೆಯಬೇಕಿತ್ತು. ಅಥವಾ ಆ ಥರದ್ದು ಏನೋ ಮಾಡಬೇಕಿತ್ತು. ಆದರೆ ಅಂತಹ ಯಾವುದೇ ಘಟನೆಯೂ ಜರುಗುವುದಿಲ್ಲ. ನಮಸ್ಕರಿಸಿ ಬರುತ್ತಾನೆ. ಅವನು ಹೊಡೆಯದೇ ಬಿಟ್ಟ ಏಟು ನಮ್ಮನ್ನು, ನಿಮ್ಮನ್ನು, ಮನೆಯ ಒಡೆಯನನ್ನು ಬಡಿಯುತ್ತದೆ.

ಹೀಗೆ ಸೇನ್ ಸಿನಿಮಾದಿಂದ ಸಿನಿಮಾಕ್ಕೆ, ದಿನದಿಂದ ದಿನಕ್ಕೆ ಬದಲಾಗುತ್ತಾ, ಬೆಳೆಯುತ್ತಾ ಸಾಗಿದರು. ಪ್ರತಿ ಸಿನಿಮಾ ಆದ ಮೇಲು ಇದೊಂದು ರಿಹರ್ಸಲ್ ಆಗಿದ್ದರೆ ಚೆನ್ನಾಗಿತ್ತು. ಎಷ್ಟೊಂದು ತಪ್ಪುಗಳಿವೆ ಸರಿಪಡಿಸಿಕೊಳ್ಳಬಹುದಿತ್ತು, ಇನ್ನೂ ಚೆನ್ನಾಗಿ ಮಾಡಬಹುದಿತ್ತು ಅಂತ ಅನ್ನಿಸುತ್ತಿತಂತೆ. ತಮ್ಮನ್ನು ತಾವು ಪ್ರಶ್ನಿಸಿಕೊಳ್ಳುತ್ತಾ ನಮ್ಮಂತಹವರನ್ನು ಸದಾ ಪ್ರಶ್ನಿಸಿಕೊಳ್ಳುವುದಕ್ಕೆ ತಮ್ಮ ನಡೆಗಳ ಮೂಲಕ ಒತ್ತಾಯಿಸುತ್ತಾ ಹೋದರು. ಈ ಕಾರಣಕ್ಕೆ ಮೃಣಾಲ್ ಸೇನ್ ಅಂತಹವರು ನಮಗೆ ತುಂಬ ಮುಖ್ಯರಾಗುತ್ತಾರೆ.


ಟಿ. ಎಸ್. ವೇಣುಗೋಪಾಲ್

ಸಿ. ಎಚ್. – ೭೩, ೭ನೇ ಮುಖ್ಯರಸ್ತೆ, ಸರಸ್ವತಿಪುರಂ, ಮೈಸೂರು – ೫೭೦ ೦೦೯


# ಗಜಲ್



**ಜೀವ** ನದಿಯಲ್ಲಿ ನಾವೆ ಏರಿ ಕುಳಿತೆ ನಾವಿಕಳಾಗಿ
ಪ್ರೀತಿ ಹುಟ್ಟನ್ನು ಹಾಕಿ ಸಾಗಿದೆ ದೂರ ದೂರ

ಹುಣ್ಣಿಮೆ ರಾತ್ರಿಯಲಿ, ನಕ್ಷತ್ರಗಳ ಬೆಳಕಿನಲಿ
ನಂಬುಗೆಯ ಇಂಬಿನಲಿ ಸಾಗಿದೆ ದೂರ ದೂರ

ಬದುಕ ಮುಳ್ಳಿನ ದಾರಿಯಲಿ ಹೂವಿನ
ಹಡದಿಯನೇ ಹಾಸಿ ಸಾಗಿದೆ ದೂರ ದೂರ

ಒಲವೆಂಬ ಹೃದಯದಲಿ ನಲುಮೆಯ ಜ್ಯೋತಿ'
ಬೆಳಗಿಸಿ ಶಾಂತಿಯ ಅರಸುತ್ತ ಸಾಗಿದೆ ದೂರ ದೂರ

ಗೆಲುವಿನಂಚಿನ ಮಂಜಿನಲಿ ಕಾಣದ ದಾರಿಯನು
ಹುಡುಕುತ್ತ ತಡಕುತ್ತ ಸಾಗಿದೆ ದೂರ ದೂರ


**ಶಾಂತಾದೇವಿ ಹಿರೇಮಠ**

ನಂದೀಶ್ವರ ಶಾಲೆಯ ಹತ್ತಿರ, ನಂದಿ ನಗರ, ಕೊಪ್ಪಳ – ೫೮೩ ೨೩೧




‘ಈ ಜೀವನದಲ್ಲಿ ದೊಡ್ಡದಾಗಿ ಪ್ರೀತಿ ಕೊಡಲೂ ಬತ್ತಿಲ್ಲೆ. ಪ್ರೀತಿ ಪಡ್ಯೆಲೂ ಬತ್ತಿಲ್ಲೆ. ನಿನ್ನ ಪ್ರೀತಿ ದೊಡ್ಡದು ವಿನಯ’ ಎಂದಳು. ‘ಅಯ್ಯಯ್ಯೋ ಹಂಗೆಲ್ಲ ಏನಿಲ್ಲೆ. ನಿನ್ನ ಹತ್ತಿರ ಮಾತ್ರ ಈ ವಿಷಯ ಹಂಚ್ಕಂಡದ್ದು, ನಿಂಗೆ ಈ ವಿಷ್ಯ ಗೊತ್ತಿದ್ದು ಹೇಳಿ ತೋರ್ಸ್ಕಳಡಾ. ಪಾಪ! ನನ್ನ ರೂಪಿ ಮುಜುಗರ ಪಟ್ಲಂಗು’ ಎಂದ. ‘ನಿನ್ನ ಮನ, ಮನೆ ಎರಡೂ ದೊಡ್ಡದಪ್ಪಾ ವಿನಯ’

# ವಿನಯ

ಸಂಧ್ಯಾ ಹೆಗ್ಡೆ

**‘ಬದುಕು** ವಿಚಿತ್ರಗಳ ಸಂತೆ, ಒಮ್ಮೊಮ್ಮೆ ಆಶ್ಚರ್ಯ ಎನಿಸುವಷ್ಟು ಬದಲಾವಣೆಯನ್ನು ಪಡೆಯುತ್ತೆ.’ ಕೀರ್ತಿ ಹೀಗೆಂದುಕೊಳ್ಳುವುದಕ್ಕೆ ಕಾರಣವೂ ಇದೆ. ಮೊನ್ನೆ ಗೆಳತಿ ಪ್ರತಿಭಾ ಮನೆಗೆ ಕರೆದಿದ್ದಳು. ಹೋಗುವುದಕ್ಕೆ ಕೀರ್ತಿಗೂ ಇಷ್ಟವೇ. ಈ ಚಳ್ಳೆಪಿಳ್ಳೆ ಮಕ್ಕಳನ್ನೇನು ಮಾಡುವುದು ಎಂದುಕೊಂಡಿದ್ದಳು. ಕೀರ್ತಿಯ ಗಂಡ ಈ ಸಲ ಕಳಿಸುವುದಕ್ಕೆ ಒಪ್ಪಿದ್ದು ಆಶ್ಚರ್ಯ ‘ನಾಲ್ಕು ದಿನದ ಮಟ್ಟಿಗೆ ಹಾಯಾಗಿ ಇದ್ದು ಬಂದುಬಿಡುವೆ’ ಎಂದು ಕೀರ್ತಿ ಮನಸ್ಸಿನಲ್ಲೇ ಅಂದುಕೊಂಡಳು. ಉಡುಪಿಯ ಪ್ರತಿಭಾಳ ಮನೆಗೆ ಹೋಗಲು ಲಗೇಜ್ ಪ್ಯಾಕ್ ಆಯಿತು. ತನ್ನೆರಡು ಪುಟ್ಟಮಕ್ಕಳಿಗೆ ಟಾಟಾ ಹೇಳಿ ಗಂಡನ ಪೆಚ್ಚುಮೋರೆ ನೋಡಿಕೊಂಡು ‘ಬೇಗ ಬಂದುಬಿಡುತ್ತೇನೆ ರೀ’ ಎನ್ನುತ್ತಾ ಬಸ್ಸನ್ನೇರಿ ಹೊರಟಾಯಿತು. ಸಿಂಗಲ್ ಸ್ಲೀಪರಲ್ಲಿ ತನ್ನ ಲಗೇಜ್ ಇಟ್ಟು ನಿರಾಳವಾದಳು ಕೀರ್ತಿ. ವಾಚ್‌ನಲ್ಲಿ ಗಂಟೆ ನೋಡಿಕೊಂಡರೆ ಇನ್ನೂ ಒಂಬತ್ತು. ನಾಳೆ ಬೆಳಿಗ್ಗೆ ಆರಕ್ಕೆಲ್ಲಾ ಉಡುಪಿಯಲ್ಲಿರಬಹುದು ಎಂದುಕೊಂಡಳು. ಗೆಳತಿಗೆ ಫೋನ್ ಮಾಡಿದ್ದೂ ಆಯಿತು. ‘ನಿನ್ನನ್ನು ಕರೆತರಲು ನಾನು ಬರುತ್ತೇನೆ’ ಎಂದಿದ್ದಳು ಪ್ರತಿಭಾ. ಹಾಗಾಗಿ ದಾರಿ ತಪ್ಪಬಹುದೆಂಬ ಚಿಂತೆಯಿಲ್ಲ. ಎಷ್ಟೋ ವರ್ಷಗಳ ನಂತರ ನಡೆಯುತ್ತಿದ್ದ ಭೇಟಿ, ಮನಸ್ಸು ಹಿಂದಕ್ಕೋಡಿತು.



ಪ್ರತಿಭಾ ಮತ್ತು ಕೀರ್ತಿ ಬಾಲ್ಯದ ಗೆಳತಿಯರು. ಹದಿನೈದು ವರ್ಷ ಒಟ್ಟಿಗೆ ಆಡಿ-ಹಾಡಿ, ನಕ್ಕು-ನಲಿದು ಬೆಳೆದವರು. ಆಮೇಲೆ ಒಬ್ಬೊಬ್ಬರ ದಿಕ್ಕು ಒಂದೊಂದು ಕಡೆ. ಕೀರ್ತಿ ಓದಲೆಂದು ದೂರದೂರಿಗೆ ಹೋದರೆ, ಪ್ರತಿಭಾ ಹೊನ್ನಾವರದಲ್ಲೇ ಡಿಗ್ರಿ ಮುಗಿಸಿ ಉಡುಪಿಯ ಅನುಕೂಲಸ್ಥರ ಮನೆಯ ಸೊಸೆಯಾದಳು. ಆದರೂ ಬಾಲ್ಯದ ಒಡನಾಟ, ಸ್ನೇಹ ಕಡಿಮೆಯಾಗಿರಲಿಲ್ಲ. ಎರಡು ವರ್ಷದ ಹಿಂದೆ ಪ್ರತಿಭಾ ಮಗನ ಉಪನಯನಕ್ಕೆ ಕರೆದಿದ್ದಳು. ಕೀರ್ತಿ ಅವಳ ಒತ್ತಾಯಕ್ಕೆ ತನ್ನ ಸಂಸಾರ ಸಮೇತ ಬಂದದ್ದು ಮತ್ತೊಮ್ಮೆ ಒಡನಾಟ ಮರುಕಳಿಸಿತ್ತು. ಅವತ್ತು ಒಂದು ದಿನದ ಮಟ್ಟಿಗೆ ಬಂದು ಹೋಗಿದ್ದ ಕೀರ್ತಿ, ಇಂದು ತಾನೊಬ್ಬಳೇ ಸಂಸಾರ ಬಿಟ್ಟು ಬಂದಿದ್ದಳು. ಕೀರ್ತಿ ಮತ್ತು ಪ್ರತಿಭಾಳದ್ದು ಅಪರೂಪದ ಗೆಳೆತನ. ಸ್ನೇಹ ಹಸಿರಾಗಿರಲು ಇಬ್ಬರೂ ತಮಗರಿವಿಲ್ಲದೆ ಶ್ರಮಿಸಿದ್ದರು. ಒಬ್ಬರ ಮೇಲೊಬ್ಬರಿಗೆ ಅತ್ಯಂತ ಪ್ರೀತಿ. ಮೂವತ್ತರ ಆಸುಪಾಸಿನಲ್ಲಿ ಅದು ಇನ್ನೂ ಹೆಚ್ಚು ಮಧುರವಾಗಿತ್ತು. ಕೀರ್ತಿಯ ಮನಸ್ಸು ಬಾಲ್ಯದ ದಿನಗಳತ್ತ ಓಡತೊಡಗಿತು.

ಚಿಕ್ಕಂದಿನಿಂದಲೂ ಅಷ್ಟೇ. ಕೀರ್ತಿ ಮತ್ತು ಪ್ರತಿಭಾ ಯಾವತ್ತೂ ಜಗಳವಾಡುತ್ತಿರಲಿಲ್ಲ. ಅವರದೊಂದು ದೊಡ್ಡ ಗ್ಯಾಂಗೇ ಇತ್ತು. ಮಕ್ಕಳ ಸೈನ್ಯ ಅಂತ ಕರೆಯಬಹುದು. ಹತ್ತು-ಹನ್ನೆರಡು ಮಕ್ಕಳು ಸೇರಿಕೊಂಡು ಗುಡ್ಡೆ, ಬೆಟ್ಟ, ಬೇಣ ಅಂತ ಸುತ್ತುತ್ತಿದ್ದದ್ದೇ ಹೆಚ್ಚು. ಮನೆಗೆ ಬರುವುದು ಸ್ನಾನ ಮತ್ತು ಊಟಕ್ಕೆ ಮಾತ್ರ. ಅದೂ ಒಂದೊಂದು ದಿನ ಊಟ ಗೆಳೆಯರ ಬಳಗದ ಯಾವುದಾದರೂ ಒಂದು ಮನೆಯಲ್ಲಿ ನಡೆದುಹೋಗುತ್ತಿತ್ತು. ಇದಕ್ಕೆ ಅಂತಸ್ತಿನ ಭೇದವಿರಲಿಲ್ಲ. ಹಿರಿಯರ ಆಕ್ಷೇಪಣೆಯೂ ಇಲ್ಲದ ಉದಾರ ಕಾಲವದು. ಎಷ್ಟು ಚಂದ ಇತ್ತು ನಮ್ಮ ಬಾಲ್ಯ! ಕೆರೆ, ಹೊಳೆಯ ಸ್ನಾನ, ಬೆಟ್ಟದ ಮುಳ್ಳೆಹಣ್ಣು, ಅಡಿಕೆ ತೋಟದ ಮಧ್ಯದ ಸಿಹಿ ಮಾವಿನ ಹಣ್ಣುಗಳು, ಆಡಿದ ಎಷ್ಟೋ ಆಟಗಳು, ಮಾಡಿದ ಲೆಕ್ಕವಿಲ್ಲದಷ್ಟು ಕೀಟಲೆಗಳು... ಒಂದೇ, ಎರಡೇ ಎಲ್ಲಾ ಸಿಹಿ ಸಿಹಿ ನೆನಪುಗಳು. ಪ್ರೀತಿ, ಶುಭಾ, ನಂದು, ಗುಂಡ, ಶೆಣ್ಣಿ, ಶ್ವೇತಾ, ಲಕ್ಕಿ ಎಲ್ಲರೂ ಈಗ ಅವರವರ ಜೀವನದಲ್ಲಿ ಸುಖವಾಗಿದ್ದಾರೆ... ಅರೇ! ಅವರ ಗುಂಪಲ್ಲಿ ವಿನಯ ಎನ್ನುವವನೂ ಒಬ್ಬ ಇದ್ದನಲ್ಲ. ಅವನ ಕಥೆ ಮಾತ್ರ ಕೀರ್ತಿಗೆ ಗೊತ್ತಿಲ್ಲ. ಮತ್ತೆಲ್ಲರ ಬದುಕಿನ ತುಣುಕು ಸುದ್ದಿಗಳು ಆಗೀಗ ಸಿಗುತ್ತಿದ್ದವು. ವಿನಯನದು ಮಾತ್ರ ಸಿಕ್ಕಿಲ್ಲ. ಏನಾದನೊ? ಈ ಹುಡುಗ! ಮೂರು ತಿಂಗಳ ಕೂಸನ್ನು ಬಿಟ್ಟು ಆತನ ತಾಯಿ ಬಾಣಂತಿ ನಂಜೇರಿ ಸತ್ತಿದ್ದಳು. ಅವನನ್ನು ಸಾಕಿದ್ದು ಅವನ ತಾಯಿಯ ತಾಯಿ-ಅಜ್ಜಿಯೇ. ಕೀರ್ತಿಯ ಗುಂಪಿನಲ್ಲಿ ಆತ ತಾಯಿ ಸತ್ತ ಕಾರಣಕ್ಕೆ ಹೆಚ್ಚಿನ ಪ್ರೀತಿ ಮತ್ತು ಕರುಣೆಯನ್ನೂ, ಜೊತೆಗೆ ತರಲೆ ಬುದ್ಧಿಗೆ ಬೈಗುಳವನ್ನೂ ಸಂಪಾದಿಸುತ್ತಿದ್ದ. ಆದರೂ ಅವರೆಲ್ಲರಿಗೂ ವಿನಯನೆಂದರೆ ‘ಅಬ್ಬೆ ಸತ್ತ ಮಾಣಿ, ಪಾಪ!’ ಎಂಬ ಕರುಣೆಯೇ ಜಾಸ್ತಿ ಇದ್ದರಿಂದ ಎಲ್ಲರೂ ಅವನಿಗೆ ತಿಂಡಿ ಕೊಡುತ್ತಿದ್ದರು. ‘ಗೌರಕ್ಕನ ಮೊಮ್ಮಗ ಪಾಪ’ ಎಂದೇ ಕೇರಿಯಲ್ಲಿ

ಅವನ ವಿಷಯವಾಗಿ ಮಾತನಾಡುತ್ತಿದ್ದರು. ಕುಳ್ಳ ದೇಹದ, ಗಿಡ್ಡ ಕೈಕಾಲುಗಳ ವಿನಯ ಒಂಥರಾ ತಮಾಷೆಯಾಗಿ ಕಾಣುತ್ತಿದ್ದ. ನೋಡಲು ಹಾಗಿದ್ದರೂ ತುಂಬ ತಾಕತ್ತಿನ ಹುಡುಗ. ಎಷ್ಟು ಎತ್ತರದ ದರೆಯನ್ನಾದರೂ ಡುಬುಕ್ಕನೆ ಹಾರುತ್ತಿದ್ದ. ಎತ್ತರದ ಜಂಬೆ ಹಣ್ಣಿನ ಮರವನ್ನು ಚಕಚಕನೆ ಹತ್ತುತ್ತಿದ್ದ. ಮಾವಿನಹಣ್ಣು ಅವನು ಯದ್ವಾ ತದ್ವಾ ಬೀಸಿದ ಕಲ್ಲಿಗೆ ಉದುರುವುದು. ಮುಳ್ಳೆಹಣ್ಣು ಕೊಯ್ಯುವಾಗ ಕೊಕ್ಕೆ ಹಿಡಿತ ತಪ್ಪಿ ಅವನ ಕೈ ಗಾಯವಾಗಿ ಸಣ್ಣಗೆ ರಕ್ತ ಜಿನುಗಿದರೂ ಅಳಲಾರ. ಮತ್ತೆ ಸಹಾಯಕ್ಕೆ ಬಂದೇ ಬರುವ. ಊರಿನವರು ಅಟ್ಟಣಿಗೆಯ ಮೇಲೆ ಒಣಗಿಸಿದ ಹಲಸಿನ ಹಪ್ಪಳ, ಮಾವಿನ ಹಪ್ಪಳ, ಬಿಂಬಲಕಾಯಿ ಎಲ್ಲ ಗೋಗರೆದು, ಬೈಸಿಕೊಂಡು ತರಲು ಮರ್ಯಾದಸ್ಥರಾದ ಉಳಿದವರಿಗೆ, ಅಷ್ಟೆಲ್ಲ ಮರ್ಯಾದಿಗೆ ಅಂಜದ ವಿನಯನೇ ಬೇಕು. ಸ್ವಲ್ಪ ಹೆಚ್ಚು ಕಡಿಮೆ ಆದರೂ ಅವನಿಗೆ ಒಂದೊಂದು ಗುದ್ದು ಹೇರುತ್ತಿದ್ದರು. ಕೇಳಿ ಪಡೆದುಕೊಂಡು ಬರುವಾಗ ಅವನು ಒಮ್ಮೊಮ್ಮೆ ಸ್ನೇಹಿತರ ಹೆಸರು ಹೇಳಿಬಿಡುತ್ತಿದ್ದ. ಇವರಿಗೆ ಕೋಪ ಬರುತ್ತಿತ್ತು. ಆಗೆಲ್ಲ ವಿನಯನಿಗೆ ಗುದ್ದು ಕಟ್ಟಿಟ್ಟ ಬುತ್ತಿ. ಅದಕ್ಕೆ ಅವನೇನೂ ಅಳುತ್ತಿರಲಿಲ್ಲ. ಬದಲಾಗಿ, ಅವನಿಗೆ ನಗು ಬರುತ್ತಿತ್ತು. 'ನನಗೆ ನಿನ್ನ ಗುದ್ದು ತಾಗಲೇ ಇಲ್ಲ ಹಿ... ಹಿ... ಹಿ...' ಎನ್ನುತ್ತಿದ್ದ. 'ಸಾಯ್ಲಿ ಪಾಪ' ಅಂತ ಬಿಡುತ್ತಿದ್ದರು. ಹಿರಿಯರಿಗೆ ಗೊತ್ತಾಗದೆ ಮಾಡುವ ಕೆಲಸಗಳಿಗೆ ವಿನಯನೇ ಬೇಕು. ಬಿಂಬಲಕಾಯಿ, ಎಳೆ ಮಾವಿನ ಕಾಯಿಯನ್ನು ಕೊಚ್ಚಿ, ಉಪ್ಪು, ತೆಂಗಿನೆಣ್ಣೆ, ಹಸಿಮೆಣಸು ಹಾಕಿ 'ಪಚ್ಚುಳಿ' ಮಾಡುತ್ತಿದ್ದರು. ಅದರ ರುಚಿ ಆಹಾ... ಸ್ನೇಹಿತರ ಇಂತಹ ಕೆಲಸಕ್ಕೆ ಯಾರೆಲ್ಲ ಎಣ್ಣೆ, ಉಪ್ಪು, ಮೆಣಸು ಕೊಡಬೇಕು. ಕೀರ್ತಿ ಅಜ್ಜಿಯನ್ನು ಕಾಡಿ–ಬೇಡಿ ಹಾಗೂ ಹೀಗೂ ಎಣ್ಣೆ ತರುತ್ತಿದ್ದಳು. ಹಸಿಮೆಣಸಿನಕಾಯಿ ತೋಟದಲ್ಲಿ ಸಿಗುತ್ತಿತ್ತು. ಉಪ್ಪನ್ನು ವಿನಯ ಯಾರಿಗೂ ತಿಳಿಯದಂತೆ ಚಡ್ಡಿ ಕಿಸೆಯಲ್ಲಿ ತುಂಬಿಕೊಂಡು ತರುತ್ತಿದ್ದ. ನಾಲ್ಕು ಗಂಟೆ ರಾತ್ರಿಯಲ್ಲಿ ಹುಳಿ ಮಾವಿನ ಹಣ್ಣು ಹೆಕ್ಕಲು ವಿನಯನೇ ಬ್ಯಾಟರಿ ತೋರಿಸಬೇಕಾಗುತ್ತಿತ್ತು. ಎಲ್ಲರೂ ದೆವ್ವ, ಭೂತಗಳಿಗೆ ಅಂಜಿ ಕೈ ಕೈ ಹಿಡಿದು ಹೊರಟರೆ ವಿನಯ ಬ್ಯಾಟರಿ ಹಿಡಿದು ಮುಂದೆ ಹೋಗುತ್ತಿದ್ದ. ಇಲ್ಲದಿದ್ದರೆ ಎಲ್ಲರೂ ಬಯ್ಯುತ್ತಿದ್ದರು. ಹೆಕ್ಕಿ ತಂದ ಚೀಲಗಟ್ಟಲೆ ಹಣ್ಣಿನಲ್ಲಿ ಎಲ್ಲ ಹಣ್ಣಿನ ಸಿಪ್ಪೆ, ಸ್ವಲ್ಪ ರಸ ವಿನಯನಿಗೆ.

ಮಕ್ಕಳು ಮಾಡುವ ಕೀಟಲೆಗಳಿಗೆ ಲೆಕ್ಕವಿರಲಿಲ್ಲ. ಹಿರಿಯರಿಂದ ಬೈಸಿಕೊಳ್ಳುವ ಕೆಲಸವನ್ನೇ ಮಾಡುತ್ತಿದ್ದರು. ಸಾಮಾನ್ಯವಾಗಿ ಅವರ ಕೆಲಸಗಳು ಹೀಗಿರುತ್ತಿದ್ದವು: ರಾಮನ ಪಾದುಕೆ ಅಂತ ಹೇಳಿ ಯಾರದಾದರೂ ಹೊಸ ಚಪ್ಪಲಿಯನ್ನು ಹೂವು, ಅಕ್ಷತೆ ಹಾಕಿ ಪೂಜೆ ಮಾಡುವುದು, ಪುಟ್ಟ ಬೆಕ್ಕಿನ ಮರಿಯನ್ನು ಚೀಲದಲ್ಲಿ ಕಟ್ಟಿಬಿಡುವುದು, ಯಾರದಾದರೂ ಮನೆಯ ಹೂವು ಕಿತ್ತು ಕಲ್ಲು ದೇವರಿಗೆ ಏರಿಸಿ ಅವರ ದೇವರ ಪೂಜೆಗೆ ಹೂವಿಲ್ಲದಂತೆ ಮಾಡುವುದು, ನಿನ್ನೆ ನೆಟ್ಟ ಗಿಡ ಬೇರು ಬಿಟ್ಟಿದೆಯೋ, ಇಲ್ಲವೋ ಅಂತ ತಿಳಿಯಲು ಅದನ್ನು ಕಿತ್ತು ನೋಡುವುದು, ಯಾರದೋ ಮನೆಯಲ್ಲಿ ಮಲಗಿದ್ದ ಪಾಪುವಿನ ತೊಟ್ಟಿಲನ್ನು ನಾಲ್ಕು ಐದು ಜನ ಸೇರಿ ತೂಗುವುದು, ಅಡಗಿ ಕುಳಿತು ಯಾರದೋ ಹೆಸರು ಕೂಗಿ ಅಣಕಿಸುವುದು, ಕೊನೆಗೆ ಇದ್ದೇ ಇದೆಯಲ್ಲ ನೂರೆಂಟು. ಹೊಳೆಗೆ ಸ್ನಾನಕ್ಕೆ ಹೋಗುವಾಗ ಸೆಳವಿನ ಕಡೆಗೆ ಹೋಗುವುದು, ಊಟ ತಿಂಡಿ ನಿದ್ದೆಗಾಗಿ ಮನೆಗೆ ಬರದೆ ಅವರು ಹುಡುಕು ವಂತಾಗುವುದು, ಅಬ್ಬಾ! ಹಿರಿಯರು ಇರುವುದೇ ಬಯ್ಯುವುದಕ್ಕೆ ಅನ್ನಿಸುವ ಕಾಲ ಅದು. ಆದರೆ ಹೀಗೆ ಕೀಟಲೆ ಮಾಡುತ್ತಲೇ ಓದುವುದರಲ್ಲೂ ಮುಂದಿದ್ದರು. ಕೀರ್ತಿಯಂತೂ ಕ್ಲಾಸಿಗೆ ಫಸ್ಟ್ ಆಗಿದ್ದರಿಂದ ಗುಂಪಿನಲ್ಲಿ ತುಸು ಗೌರವ ಜಾಸ್ತಿ ಇತ್ತು. ಆದರೆ ವಿನಯ ಹಾಗಿರಲಿಲ್ಲ. ಐದನೆಯ ಇಯತ್ತಿನವರೆಗೂ ಅವನನ್ನು ಪಾಸು ಮಾಡಿದ್ದರು. ವಿದ್ಯೆ ತಲೆಗೆ ಹತ್ತಿರಲಿಲ್ಲ. ಅದಕ್ಕಾಗಿ ಅವನ ಮೇಲೆ ಅಸಡ್ಡೆಯಿತ್ತು. ಆದರೂ ಅವನ ಮೇಲೆ ಅದೇನೋ ಪ್ರೀತಿ. ಆತ ಅತ್ತರೆ ಅವರಿಗೆ ಸಹಿಸಲಿಕ್ಕಾಗುತ್ತಿರಲಿಲ್ಲ. ಒಮ್ಮೆ ಅವನ ಕೀಟಲೆಗೆ ಮಾವ ಅವನನ್ನು ಹೊಡೆದರು ಎಂದು ಅವನು ಅತ್ತದ್ದು ನೋಡಿ, ಆ ಮಾವ ಮಲಗಿದ್ದಾಗ ಸಣ್ಣ ಕತ್ತರಿ ಯಿಂದ ಜುಟ್ಟು ಕತ್ತರಿಸಿಬಿಡಬೇಕೆಂದು ತೀರ್ಮಾನ ಮಾಡಿದ್ದರು. ಆದರೆ ಅದು ಯಶಸ್ವಿಯಾಗಲಿಲ್ಲ.

ಮಕ್ಕಳು ಅವರಿಗಾಗದವರನ್ನು ಕೆಣಕುತ್ತಿದ್ದರು; ವಿನಯ ಅದರಲ್ಲೆಲ್ಲ ಫಸ್ಟ್. ಸಿದ್ದಜ್ಜನ ಮನೆಯ ಅಜ್ಜಿ. ಅವಳ ಹೆಸರು ಮೂಕು. ಮೂಕಾಂಬೆ ಅಂತ ಹೆಸರಿರ ಬೇಕು. ಯಾರಿಗೂ ಗೊತ್ತಿರಲಿಲ್ಲ. ಊರವರೆಲ್ಲಾ ಅವಳನ್ನು 'ಮೂಕು' ಅಂತಲೇ ಕರೆಯುತ್ತಿದ್ದರು. ಅವಳ ಮನೆಯ ಹತ್ತಿರ ಒಂದು ಮಾವಿನ ಮರವಿತ್ತು. ಊರಿನ ಮಾವಿನ ಮರದಲ್ಲೆಲ್ಲಾ ಅದರ ಹಣ್ಣು ಸಿಹಿ. ಆದರೆ ಮುದುಕಿ ಒಂದು ಹಣ್ಣನ್ನೂ ಮಕ್ಕಳಿಗೆ ತಿನ್ನಲು ಬಿಡುತ್ತಿರಲಿಲ್ಲ. ಒಂದು ಸಲ ವಿನಯ ಮಾವಿನ ಹಣ್ಣು ಹೆಕ್ಕಲು ಹೋಗಿ ಯದ್ವಾತದ್ವಾ ಬೈಸಿಕೊಂಡ. ಜೊತೆಗೆ ಮಹಾಮಂಗಳಾರತಿ. ಎಲ್ಲರಿಗೂ ಮೂಕುವಿನ ಮೇಲೆ ಕೋಪ ಬಂತು. ಎಲ್ಲರೂ ಅವಳನ್ನು ಕಂಡಾಗ ಕಾಗೆ, ಕೋತಿ, ಗುಬ್ಬಿ ಅಂತೆಲ್ಲ ಬಯ್ಯುತ್ತಿದ್ದರು. ಆದರೆ ಅವಳಿಗೆ ಅದು ಕೇಳಿಸಿದರೂ ತನಗೇ ಹೇಳಿದ್ದೆಂದು ಗೊತ್ತಾಗಿ ರಲಿಲ್ಲ. ವಿನಯ ಅವಳ ಮೇಲೆ ತೀರಾ ಕೋಪದಿಂದ ಎರಡು ಸಾಲಿನ ಕೆಟ್ಟ ಪದ್ಯವೊಂದನ್ನು ಕಟ್ಟಿದ. ಅವನು ಕಟ್ಟಿದ ಮೊದಲಿನ ಸಾಲನ್ನು ಮಾತ್ರ ಅವಳನ್ನು ಕಂಡಕೂಡಲೇ ಎಲ್ಲ ಸೇರಿ ದೊಡ್ಡದಾಗಿ ಕೂಗುತ್ತಿದ್ದರು.

*ಕೊಕ್ಕೊಕ್ಕೋ ಕೋಳಿ*
*ಮೂಕು ರಂಡೆ ಬೋಳಿ!*

– ಎರಡನೆಯ ಸಾಲನ್ನು ಉಚ್ಚರಿಸದೆ ಕೈಯನ್ನು ಬಾಯಿಗೆ ಅಡ್ಡ ಹಾಕಿ ಹತ್ತನ್ನೆರಡು ಜನ ಸೇರಿ ಪಿಸಿ–ಪಿಸಿ ನಗುತ್ತಿದ್ದರು. ಒಂದು ದಿನ ಅವಳಿಗೆ ತನ್ನ ಬಗ್ಗೆ ಏನೋ ಕೀಟಲೆ ಮಾಡುತ್ತಿದ್ದಾರೆ ಎಂದು ಗೊತ್ತಾಗಿ ಎಲ್ಲರನ್ನು ಅಟ್ಟಿಸಿಕೊಂಡು ಬಂದಿದ್ದಳು. ಮತ್ತೆ 'ಕೊಕ್ಕೊಕ್ಕೋ ಕೋಳಿ' ಎಂದು ದೊಡ್ಡದಾಗಿ ಅರಚಿ ನಕ್ಕಿದ್ದರು ಮಕ್ಕಳು. ಮುದುಕಿ ಅದೆಷ್ಟೋ ಶಾಪ ಹಾಕುತ್ತಾ ಹೋಗಿತ್ತು!

ಇದಾದ ಕೆಲವು ದಿನಗಳಲ್ಲಿ ವಿನಯನ ಅಪ್ಪ ಎರಡನೆಯ ಮದುವೆಯಾದ. ಇವನನ್ನು ಕರೆದುಕೊಂಡು ಮನೆಗೆ ಹೋದ. ಮಕ್ಕಳಿಗೆಲ್ಲ ತಾಳಲಾರದಷ್ಟು ಬೇಸರ. ಅದರ ಮೇಲೆ ಅವನ ಕಥೆ ಗೊತ್ತಾಗಲಿಲ್ಲ... ಜೋರಾಗಿ ಹಾಕಿದ ಬಸ್ ಹಾರನ್‌ಗೆ ಕೀರ್ತಿ ವಾಸ್ತವಕ್ಕೆ ಬಂದಳು.

'ನಮ್ಮನ್ನು ಬಿಡಲಾರದೆ ಅಳುತ್ತಾ ಹೋದ ವಿನಯನ ಮುಖವೇ ಕಣ್ಮುಂದೆ ಬರುತ್ತಿದೆ. ಜೊತೆಗೆ ಅವನ ಮಳ್ ಪದ್ಯ' ಕಿಸಕ್ಕನೆ ನಗು ಬಂತು. ಯಾರಾದರೂ ನೋಡಿದರೇನೋ ಎಂದು ಅತ್ತಿತ್ತ ತಿರುಗಿದರೆ ಸ್ಲೀಪರ್ ಕೋಚಿನ ಪರದೆ ಅಡ್ಡ ಬಂತು. ಅಲ್ಲಲ್ಲಿ ಸಣ್ಣ ಗೊರಕೆಯ ಸೌಂಡ್. ವಾಚ್ ನೋಡಿಕೊಂಡಳು. ಗಂಟೆ ಐದು. ಕೇವಲ ಇನ್ನು ಒಂದು ಗಂಟೆಯ ಪಯಣ. ಪ್ರತಿಭಾ ಬರುತ್ತಾಳೆ. ಅವಳಿಗೊಂದು ಕಾಲ್ ಮಾಡಿದಳು. ವಿನಯ ಏಕೆ ಇವತ್ತು ಇಷ್ಟೊಂದು ನೆನಪಾದ? ಗೊತ್ತಾಗಲಿಲ್ಲ. ಮನಸ್ಸು ಅವನನ್ನು ಕುರಿತೇ ಯೋಚಿಸುತ್ತಿತ್ತು. ಪ್ರತಿಭಾ ಎರಡು ವರ್ಷದ ಹಿಂದೆ ದೊಡ್ಡ ಬಂಗಲೆ ಯೊಂದನ್ನು ತೋರಿಸಿ 'ಇದೇ ವಿನಯನ ಮನೆ' ಎಂದಿದ್ದು ಇದಕ್ಕೆ ಕಾರಣವಿರಬಹುದೇ? ವಿನಯ ಏನಾದ? ಅಥವಾ ನಾನು ಪ್ರತಿಭಾಳ ಮನೆಗೆ ಬರಲು ತೀರ್ಮಾನ ತೆಗೆದುಕೊಂಡಿದ್ದು ವಿನಯನ ಮೇಲಿನ ಕುತೂಹಲಕ್ಕೋ? ಕೀರ್ತಿಗೆ ತನ್ನ ಮನಸ್ಸೇ ತನಗೆ ಅರ್ಥವಾಗುತ್ತಿಲ್ಲ ಎನಿಸಿತು. ಹೇಗೂ ಅಲ್ಲಿಗೇ ಹೋಗುತ್ತಿದ್ದೇನಲ್ಲ ಎನಿಸಿ ಸುಮ್ಮನಾದಳು.

ಪ್ರತಿಭಾ ಮನೆಗೆ ಕರೆದುಕೊಂಡು ಹೋಗಲು ಬಂದಳು. ಗೆಳತಿಯರ ಖುಷಿಗೆ ಪಾರವೇ ಇರಲಿಲ್ಲ. ಗಂಡ, ಮಕ್ಕಳು ಎಲ್ಲವನ್ನೂ ಮರೆತು ಹರಟಿದರು. ಪ್ರತಿಭಾ ಮುಂಚೆಯೇ ಗಂಡ, ಮಕ್ಕಳನ್ನು ಅವಳ ಅತ್ತಿಗೆಯ ಮನೆಗೆ ಕಳುಹಿಸಿ ಆಗಿತ್ತು. ಹಾಗಾಗಿ ಅವಳ ಮನೆಯಲ್ಲಿ ಗೆಳತಿಯರು ಇಬ್ಬರೇ. ಕೀರ್ತಿಗೆ ಎರಡು ದಿನ ಕಳೆದದ್ದೇ ಗೊತ್ತಾಗಲಿಲ್ಲ. ಮೂರನೆಯ ದಿನದ ಹರಟೆ ಬಾಲ್ಯದ ದಿನಗಳತ್ತ ಸಾಗಿತ್ತು. ಮಾಡುತ್ತಿದ್ದ ಕೀಟಲೆಗಳನ್ನು ನೆನೆಸಿಕೊಂಡು ಮನಸಾರೆ ನಕ್ಕರು. ಕಷ್ಟ–ಸುಖದ ಮಾತುಗಳೂ ಬಂದು ಹೋದವು. ಕೀರ್ತಿಗೆ ಫಕ್ಕನೆ ವಿನಯನ ನೆನಪಾಯಿತು. 'ಪ್ರತಿಭಾ, ವಿನಯ ಎಂತಾ ಆದ್ನೇ? ಅಷ್ಟು ದೊಡ್ಡ ಮನೆ ತೋರಿಸಿ ವಿನಯಂದು ಅಂದ್ಯಲೇ? ಅದ್ಹೆಂಗೆ?' ಎಂದಳು. ಪ್ರತಿಭಾ 'ಹೌದೆ ಅಂವ ಈಗ ೩ ಸ್ಟಾರ್ ಹೊಟೇಲುಗಳ ಮಾಲೀಕ, ಉಡುಪಿಯ ದೊಡ್ಡ ಮನ್ಶರ ಜಾಗದಲ್ಲಿ ಅಂವ ಮೊದ್ಲನೆಯಂವಾ' ಎಂದಳು.

ಕೀರ್ತಿಗೆ ಕುತೂಹಲ ಹೆಚ್ಚಾಯಿತು. ಪ್ರತಿಭಾಳ ಮನೆಯ ದಾರಿಯಲ್ಲಿ ಬರುವಾಗ ಸುಮಾರು ಅರ್ಧ ಎಕರೆ ಜಾಗವನ್ನು ಆಕ್ರಮಿಸಿ ಎದ್ದ ಸುಂದರ ಬಂಗ್ಲೆ ಯೊಂದನ್ನು ತೋರಿಸಿ ಪ್ರತಿಭಾ 'ಇದೇ ವಿನಯನ ಮನೆ' ಎಂದಿದ್ದಳು. 'ವಿದ್ಯೆಯೇ ಇಲ್ಲದ ವಿನಯ ಹೆಂಗೆ ಅಷ್ಟು ದೊಡ್ಡ ಮನ್ಶ ಆದ್ನೇ?' ಕೀರ್ತಿ ಕೇಳಿದಳು. 'ಎಲ್ಲಾ ಅವನ ಅದೃಷ್ಟ ಮಾರಾಯ್ತಿ. ಅವ್ನ ಹೆಂಡ್ತಿ ಕಾಲ್ಗುಣ. ಫಾರಿನ್‌ನಿಂದ ಅವನ ಹೆಂಡ್ತಿ ದುಡ್ಕ ತಗಂಡಿ ಬಂದ ದುಡ್ನೆಲ್ಲ ಇಲ್ಲಿ ಸುರತ್ತು. ಬಿಸ್ನೆಸ್ಸೂ ಆತು. ವಿನಯ ದೊಡ್ಡಂವ ಆದ' ಪ್ರತಿಭಾ ಹೇಳಿದಳು. ಕೀರ್ತಿಯ ಕುತೂಹಲ ಕಡಿಮೆಯಾಗಲಿಲ್ಲ. ಓದು,

# ಒಂದಾಗಿದ್ದೇವೆ, ಎಚ್ಚರ!




ಸೆರಗಿನಡಿಯಲಿ ಮರೆ
ಮುಖಗಳ ಚಹರೆ
ಯಾಕೆ ಸುಮ್ಮನೆ!
ಏಕಪತ್ನೀವ್ರತ ಕಠೋರ
ನಿಷ್ಠೆಗೆ ಸ್ವರ್ಣ ಪ್ರತಿಮೆಯಾಗಿ
ಕಂಕಣ ಕಟ್ಟಿಸಿಕೊಂಡ ವೈದೇಹಿ
ದೇಹದೊಳಗೊಂದು ಮನಸ್ಸು ಇತ್ತೇ?

ಪಂಚಪಾಂಡವರಲಿ
ಹರಿದು ಹಂಚಿಹೋದ
ಪಾಂಚಾಲಿಗೊಂದು ಬೇರೆ
ಕನಸು ಬಿತ್ತೇ?

ಋಷಿಯ ಪೂಜೆ ಪನಸ್ಕಾರಕೆ
ಅಣಿ ಮಾಡುತ್ತ
ತೃಷೆಗೆ ಆಸರೆಯಾಗುತ್ತ
ಮೋಸ ಹೋಗಿ ಕಲ್ಲಾದ
ಅಹಲ್ಯೆಗೆ ಬದುಕಿತ್ತೇ?

ತಲೆ ಹತ್ತು, ಒಂದರಲ್ಲೂ
ಮಿದುಳಿರದವನ ಮಡದಿಯ
ದಂಡದ ಬಾಳು!
ಮಂಡೋದರಿಗೆ ನೆಮ್ಮದಿ ಇತ್ತೇ?

ಸತ್ಯವ್ರತಕೆ ಬಲಿಯಾದ ತಾರೆ
ಅಣ್ಣ–ತಮ್ಮನ ಜಗಳದ ಬಣ್ಣವಾದ
ತಾರೆ!
ಗುರುಪತ್ನಿಯಾಗಿ ಚಂದ್ರಮನೊಲಿದ
ತಾರೆಗೇನಿತ್ತೋ ಸಂಕಟ.

ಬೇರೆ ಬೇರೆ ಕಾಲಘಟ್ಟದಲಿ
ನಡೆ–ನಡೆದು ಈಗ ಒಂದಾಗಿದ್ದೇವೆ
ಪರದೆ ಏಸೆದು ತಲೆ ಎತ್ತಿ
ಧೂರ್ತ ಸಮಾಜ ಪುರುಷನಿಗೊಂದು
ಪಾಠ ಕಲಿಸಲಿದ್ದೇವೆ, ಎಚ್ಚರ.



**ವಿಜಯಾ ಶ್ರೀಧರ್**
ಕೇರಾಫ್ ಡಾ|| ಕೆ. ಆರ್. ಶ್ರೀಧರ್, ೧೫೮ ಮುಖ್ಯರಸ್ತೆ
ರಾಜೇಂದ್ರನಗರ, ಶಿವಮೊಗ್ಗ – ೫೭೭ ೨೦೪

ಬರಹ ಇಲ್ಲದ ವಿನಯ ಫಾರಿನ್ ರಿಟರ್ನ್ಡ್ ಹೆಂಡತಿಯನ್ನು ಮದುವೆಯಾಗಿದ್ದು ಹೇಗೆ? ಅದಕ್ಕೇ ಜೀವನ ಎನ್ನುವುದು. ಯಾವ ಕ್ಷಣಕ್ಕೆ ಯಾವ ತಿರುವೋ? ಅಷ್ಟರಲ್ಲಿ 'ಪ್ರತಿಭಾ, ವಾಕಿಂಗ್‌ಗೆ ಹೋಗೋಣವೇ?' ಎಂದು ಕೇಳಿದಳು.

ಗೆಳತಿಯರು ಹೊರಟುತ್ತಾ ಬಂದು ತಲುಪಿದ್ದು ವಿನಯನ ಮನೆಯ ಮುಂದೆ, 'ಅರೆ ! ಪ್ರತಿಭಕ್ಕ' ಧ್ವನಿ ಬಂದತ್ತ ತಿರುಗಿ ನೋಡಿದರೆ ವಿನಯನ ಮೂರ್ತಿ. 'ಅರೆ ವಿನಯಾ, ಆರಾಮಾ?' ಎಂದಳು ಪ್ರತಿಭಾ ನಾಚುತ್ತಾ. ಕೀರ್ತಿ ತಡೆಯಲಾರದೆ 'ಅರೇ! ವಿನಯಾ! ನನ್ನ ಗುರ್ತು ಸಿಕ್ತನೋ?' ಎಂದಳು. ವಿನಯ ಒಂದು ಕ್ಷಣ ಯೋಚಿಸಿ 'ಆಂ ಕೀರ್ತಿ ಅಕ್ಕ, ನೀನು ಇಲ್ ಹೆಂಗೆ? ಬನ್ನಿ ಬನ್ನಿ ನಮ್ಮನೆಗೆ ಹೋಪ' ಎಂದು ಹೇಳಿ ಅರ್ಧ ಹೆಚ್ಚೂ ಕಡಿಮೆ ಎಳೆದುಕೊಂಡೇ ಹೋದ. ಅವನ ಮನೆಯ ಸಿರಿಗೆ ಗೆಳತಿಯರಿಬ್ಬರೂ ಬೆರಗಾದರು. ಇಷ್ಟು ಸಿರಿವಂತನಾದರೂ ವಿನಯನ ವಿನಯ ಹಾಗೇ ಉಳಿದದ್ದು ಆಶ್ಚರ್ಯ. ಅವನು ಇವರಿಬ್ಬರನ್ನು ಚೆನ್ನಾಗಿ ಸತ್ಕರಿಸಿದ. ಮನೆಯ ತುಂಬ ಆಳು–ಕಾಳುಗಳು. ಆಗಾಗ ಬರುವ ಫೋನ್ ಕಾಲ್‌ಗಳು. ವಿನಯ ಈಗ ಇಂಗ್ಲಿಷ್‌ನಲ್ಲಿ ಚೆನ್ನಾಗಿ ಮಾತಾಡಬಲ್ಲ. ಎ ಬಿ ಸಿ ಡಿ ಬರದವನು ತನ್ನ ಹೆಂಡತಿ ರೂಪಾಳನ್ನೂ, (ವಿನಯ ಅವಳನ್ನು 'ರೂಪಿ' ಅಂತ ಕರೆಯುತ್ತಿದ್ದುದು) ಮಗ ರೋಹನನನ್ನೂ ಕರೆದು ಪರಿಚಯಿಸಿದ. ತೋಟದಲ್ಲಿ ಈಗಲೂ ಬಿಂಬಲಕಾಯಿ ಬಿಟ್ಟಿದೆ ಎಂದು ಬಾಲ್ಯದ ನೆನಪುಗಳನ್ನು ಕೆದಕಿ ನಗಿಸಿದ. 'ರಾತ್ರಿ ಉಳಿದೇ ಹೋಗಿ' ಎಂದು ಒತ್ತಾಯ ಮಾಡಿದ. ಕೀರ್ತಿ–ಪ್ರತಿಭಾ ಒಪ್ಪಿದರು. ವಿನಯನ ಹೆಂಡತಿ 'ರೂಪಿ' ದೇವರು ಸೃಷ್ಟಿಸಿದ ರೂಪ ರಾಶಿ. ನಿಜಕ್ಕೂ ವಿನಯ ಅದೃಷ್ಟವಂತ. ಕೀರ್ತಿಗೆ ಅರ್ಥವಾಗದ ಒಂದೇ ಒಂದು ವಿಷಯ ಎಂದರೆ ಮಗ ರೋಹನ ಕೆಂಚು ಕೂದಲಿನ, ಕೆಂಪು ಬಣ್ಣದ ನೀಲಿ ಕಣ್ಣಿನ ಹುಡುಗ ಹೇಗೆ ಆದ? ಎಂಬುದು. ಮನಸ್ಸು ಏನೇನನ್ನೆಲ್ಲಾ ಕಲ್ಪಿಸತೊಡಗಿತು. ಪುಟ್ಟ ರೋಹನ ಹೋದಲ್ಲಿ ಬಂದಲ್ಲಿ ವೀಕ್ಷಿಸತೊಡಗಿದಳು. ವಿನಯನ ಜೊತೆಗೆ ರಾತ್ರಿ ಊಟಕ್ಕೆ ಕುಳಿತಾಗ ಮಾತಿನ ಮಧ್ಯೆ ವಿನಯ ಹೆಂಡತಿಯನ್ನು ತೋರಿಸಿ 'ಇವಳನ್ನು ಪಡೆದದ್ದು ನನ್ನ ಅದೃಷ್ಟ' ಎಂದ. ಆದರೆ ಅವನ ಮಾತನ್ನು ಅರ್ಧಕ್ಕೆ ನಿಲ್ಲಿಸಿ ರೂಪಿ 'ಈ ಮಾತನ್ನು ನಾನು ಹೇಳಬೇಕು' ಎಂದಳು. ನಿಜಕ್ಕೂ ಅನುರೂಪ ದಾಂಪತ್ಯ. ಆದರೆ ಈ ವಿಷಯದಲ್ಲಿ ರೂಪಿಗೆ ಬೇರೆ ಸುಂದರಾಂಗರೂ ಸಿಗುತ್ತಿದ್ದರು ಎನ್ನಿಸಿತು. ಕೀರ್ತಿ ಬಾಯಿಬಿಟ್ಟು ಕೇಳಲಿಲ್ಲ. ಮೃಷ್ಟಾನ್ನ ಭೋಜನ ! ಹೋಟೆಲ್ ಮಾಲೀಕನೆಂದ ಮೇಲೆ ಕೇಳಬೇಕೆ?! ಊಟವಾಯಿತು. ಕ್ಷಣಕ್ಷಣಕ್ಕೂ ಕೀರ್ತಿಯ ಕುತೂಹಲ ಹೆಚ್ಚಾಗುತ್ತಿತ್ತು. ಹೇಗೆ ಇಷ್ಟು ದೊಡ್ಡ ಬಿಸ್ನೆಸ್ಸು, ಮಗ... ಅಂತೆಲ್ಲ. ಪ್ರತಿಭಾ ಮತ್ತು ರೂಪಿ ಹರಟುತ್ತಾ ಕುಳಿತಿರುವಾಗ ವಿನಯ ಕೀರ್ತಿಯನ್ನು ಕರೆದುಕೊಂಡು ಹೋದ. ಅದು ಇದೂ ಮಾತುಕತೆ ಆಯಿತು. ಮೊದಲಿನಿಂದಲೂ ಅಷ್ಟೇ. ವಿನಯನಿಗೆ ಕೀರ್ತಿ ಅಕ್ಕ ಎಂದರೆ ಜಾಸ್ತಿ ಪ್ರೀತಿ. ಈಗಲೂ ಅದೇ ಸಲಿಗೆ ತೋರುತ್ತಿದ್ದಾನಲ್ಲ ಅಂತ ಕೀರ್ತಿಗೆ ಆಶ್ಚರ್ಯ. ವಿನಯ – ಕೀರ್ತಿಯ ಕುತೂಹಲ ಮತ್ತು ಆಶ್ಚರ್ಯವನ್ನು ಗಮನಿಸುತ್ತಿದ್ದ. ಬಾಯಿಬಿಟ್ಟು ಏನನ್ನೂ ಕೇಳದ ಕೀರ್ತಿಯ ಸಂಸ್ಕಾರ ವಿನಯನಿಗೆ ಇಷ್ಟವಾಯಿತು. 'ಕೀರ್ತಿ ಅಕ್ಕ, ನಿನ್ನ ಕುತೂಹಲ ತಣಿಸುಲೇ ಇಲ್ಲಿಗೆ ಕರ್ಕ ಬಂದೆ' ಎಂದು ವಿನಯನೇ ಮುಂದಾಗಿ ತನ್ನ ಜೀವನದ ಕಥೆ ಹೇಳಲು ಆರಂಭಿಸಿದ.

ಊರವರ ದೃಷ್ಟಿಯಲ್ಲಿ ವಿನಯನೇ ಹೆಚ್ಚು ಅದೃಷ್ಟವಂತ. ರೂಪಿಯ ದೃಷ್ಟಿಯಲ್ಲಿ ಮಾತ್ರ ಅವಳಷ್ಟು ಅದೃಷ್ಟವಂತರು ಪ್ರಪಂಚದಲ್ಲಿ ಯಾರೂ ಇಲ್ಲ. ವಿನಯನ ಬಗ್ಗೆ ಅವಳಿಗೆ ಹೆಮ್ಮೆ, ಪ್ರೀತಿ ಕಾಳಜಿ, ಎಲ್ಲವೂ ಇದೆ. ಕೀರ್ತಿಗೆ ಇದೇ ಆಶ್ಚರ್ಯ ಹುಟ್ಟಿಸಿದ್ದು, ಅಗಾಧವಾದ ರೂಪ, ಕಲಿತ ವಿದ್ಯೆ, ಸಂಪಾದಿಸಿದ ಹಣ ವಿನಯನಂತಹ ಸಾಮಾನ್ಯನನ್ನು ಮದುವೆಯಾಗಲು ಪ್ರೇರೇಪಿಸಿತೇ?... ಯೋಚಿಸುತ್ತಿರುವಾಗಲೇ ವಿನಯ ಕಥೆ ಆರಂಭಿಸಿದ.

ವಿನಯನ ಅಪ್ಪ ಅವನನ್ನು ಕರೆದುಕೊಂಡು ಮನೆಗೆ ಹೋದರೂ ವಿದ್ಯೆ ತಲೆಗೆ ಹತ್ತಲಿಲ್ಲ. ಆತ ಉಡುಪಿಯ ತನ್ನಕ್ಕನ ಮನೆಗೆ ವಿನಯನನ್ನು ಕಳಿಸಿದ. ಅಲ್ಲಿ ಮಾವ ಹೇಳಿದ ಸಣ್ಣ ಪುಟ್ಟ ಕೆಲಸ ಮಾಡುತ್ತ ಹಾಗೂ ಹೀಗೂ ೭ನೆಯ ಇಯತ್ತೆ ಪಾಸು ಮಾಡಿದ.

ಮಾವನ ಮಗಳು ರೂಪಿ ಓದಿನಲ್ಲಿ ಜಾಣೆ. ವಿನಯನ ಮೇಲೆ ಪ್ರೀತಿ, ಒಂದು ರೀತಿಯ ತಾತ್ಸಾರ ಎಲ್ಲ ರೂಪಿಗಿತ್ತು. ಬೆಳೆದು ದೊಡ್ಡವಳಾಗುತ್ತಿದ್ದಂತೆ ಓದಿನಲ್ಲಿ ಅಪ್ರತಿಮ ಸಾಧನೆ ಮಾಡಿದ ರೂಪಿ ಎಂಜನಿಯರಿಂಗ್ ಮುಗಿಸಿ ನೌಕರಿಗಾಗಿ ಜರ್ಮನಿಗೆ ಹಾರಿದಳು. ಏನೂ ವಿದ್ಯೆ ಇಲ್ಲದ ವಿನಯ ಹೋಟೆಲ್ ತೆರೆದ. ಆ ಬಿಸ್ನೆಸ್ ಕೈಗೆ ಹತ್ತಿತ್ತು. ಅವನಿಗೆ ರೂಪಿಯನ್ನು ಕಂಡರೆ ಅಗಾಧ ಪ್ರೀತಿ. ಅವಳನ್ನು ಮದುವೆಯಾಗಬೇಕು ಎಂದು ಆಸೆ ಇದ್ದರೂ ತನ್ನಂಥವನು ಹೇಗೆ ಕೇಳುವುದೆಂದು ತಿಳಿಯದೇ ಒದ್ದಾಡುತ್ತಿದ್ದ. ರೂಪಿ ಫಾರಿನ್ನಿಗೆ ಹೊರಟುನಿಂತ ದಿನ ಹಗಲೂ – ರಾತ್ರಿ ಅತ್ತಿದ್ದ. ರೂಪಿ ಹೋದವಳು ಹೋದ ಕಡೆ ಮುಖವಾಗೇ ಹೋದಳು. ಎರಡು ವರ್ಷ ಎಲ್ಲ ಚೆನ್ನಾಗಿಯೇ ನಡೆಯಿತು. ರೂಪಿ ಎರಡನೆಯ ವರ್ಷ ಭಾರತಕ್ಕೆ ಬಂದವಳು ಹೋದ ಮೇಲೆ ಮತ್ತೆ ಭಾರತಕ್ಕೆ ವಾಪಸ್ಸಾಗುವ ಮಾತೇ ಆಡಲಿಲ್ಲ. ಮನೆಯಲ್ಲಿ ಹೇಳದೇ ವಿಲಿಯಂ ಎಂಬ ಅಮೆರಿಕದವನನ್ನು ಮದುವೆಯಾಗಿ ಮಗು ಪಡೆದಳು. ಒಂದು ವರ್ಷ ಸಂಸಾರ ಚೆನ್ನಾಗೇ ನಡೆಯಿತು. ಎರಡನೆಯ ವರ್ಷ ಸಂಸಾರದಲ್ಲಿ ಬಿರುಕು. ಸ್ಯಾಡಿಸ್ಟ್‌ತರ ವರ್ತಿಸುವ ವಿಲಿಯಂನ ಜೊತೆ ಬದುಕಲು ಸಾಧ್ಯವಾಗಲಿಲ್ಲ. ಸರಿ, ಡಿವೋರ್ಸ್ ಆಯಿತು. ಡಿವೋರ್ಸ್ ಏನೋ ಆಯಿತು. ಆದರೆ ಅಷ್ಟರಲ್ಲಿ ಒಂದು ವರ್ಷದ ಮಗು ಕೈಯಲ್ಲಿತ್ತು. ಮನಸ್ಸು ಜರ್ಜರಿತವಾಗಿತ್ತು. ಜೀವನವೇ ಬೇಡ ಎಂಬಷ್ಟು ಬೇಸರ. ಈ ಮೂರು ವರ್ಷದಲ್ಲಿ ಭಾರತದ ಕಡೆ ತಲೆ ಹಾಕಿ ಮಲಗದವಳಿಗೆ ತವರು, ತಾಯಿ–ತಂದೆ, ತನ್ನ ಪರಿಸರ ಎಲ್ಲವೂ ನೆನಪಾಗತೊಡಗಿದವು. ಅಷ್ಟರಲ್ಲಿ ತಾಯಿಯ ಅನಾರೋಗ್ಯದ ಸುದ್ದಿ ಕೇಳಿ ಭಾರತಕ್ಕೆ ಬರಲು ಮನಸ್ಸು ಮಾಡಿದಳು. ಇವಳ ಮದುವೆಯ ವಿಷಯ ತಂದೆ–ತಾಯಿಯರಿಗೆ ಗೊತ್ತಿರಲಿಲ್ಲ. ಮಗುವನ್ನು ಕರೆದುಕೊಂಡು ಯಾವ ಮುಖದಿಂದ ಹೋಗಲಿ? – ಎಂದು ಯೋಚಿಸಿ ಹಣ್ಣಾದಳು. ಆದರೂ ತವರಿನ ಮೋಹವೇ ಗೆದ್ದು ಉಡುಪಿಗೆ ಹೊರಟು ನಿಂತಳು.

ಬೆಂಗಳೂರಿನ ಏರ್‌ಪೋರ್ಟ್‌ನಿಂದ ಹೊರಟು ಉಡುಪಿ ತಲುಪುವ ವೇಳೆಗೆ ರಾತ್ರಿ ಹತ್ತು ಗಂಟೆ ಯಾಗುತ್ತಾ ಬಂದಿತು. ಟ್ಯಾಕ್ಸಿಯವನಿಗೆ ದುಡ್ಡು ಕೊಟ್ಟು ತೋಟದ ದಾರಿ ಹಿಡಿದಾಗ ಜೀವನದಲ್ಲಿ ತಾನು ತೆಗೆದುಕೊಂಡ ತಪ್ಪು ನಿರ್ಧಾರದ ಬಗ್ಗೆ ಚಿಂತಿಸಿ ಬೇಸರವಾಯಿತು. ಹಾಗೇ ತೋಟದ ಮರದ ಬುಡ ವೊಂದಕ್ಕೆ ಒರಗಿ ಕುಳಿತು ಮಗುವನ್ನು ಎದೆಗವಚಿ ಕೊಂಡು ಮನಸಾರೆ ಅತ್ತಳು. ತಾಯಿ–ತಂದೆ ತನ್ನ ಮೇಲಿಟ್ಟಿರುವ ವಿಶ್ವಾಸ, ನಂಬಿಕೆಗಳಿಗೆ ತಾನು ತಕ್ಕನಾಗಿ ನಡೆದುಕೊಳ್ಳಲಿಲ್ಲ. ಹೋಗಲಿ ತನ್ನ ಸಂಸಾರ ಸರಿಯಿದ್ದಿದ್ದರೆ, ತನಗೇನೂ ಕಾಣುತ್ತಿರಲಿಲ್ಲ. ಈಗ ಊರವರ ಮುಂದೆ ಏನಂತ ಹೇಳಲಿ? ಮಗುವನ್ನು ತೋರಿಸಿ, ಹೇಳುವುದೇನು ಎಂದೆಲ್ಲಾ ಯೋಚಿಸಿ ಬಳಲಿದಳು. ಗಂಟೆ ಹನ್ನೊಂದು. ರೂಪಿ ಕುಳಿತಿದ್ದ ಮರದ ಹತ್ತಿರ ಯಾವುದೋ ಬ್ಯಾಟರಿ ಬರುತ್ತಿರುವಂತೆ ಕಂಡಿತು. ಇವಳಿಗೆ ಎದ್ದು ಹೋಗಲು ಆಗದ ಅಸಹಾಯಕತೆ, ಎದುರಿಗೆ ಬಂದವ ವಿನಯ! ಇಬ್ಬರಿಗೂ ಆಶ್ಚರ್ಯ, ದಿಗ್ಭ್ರಮೆ! ವಿನಯ ಮೊದಲು ಉದ್ಗಾರ ತೆಗೆದು 'ರೂಪಿ'! ಎಂದ, ರೂಪಿ ಮಾತಾಡಲಿಲ್ಲ. 'ಈಗ ಬಂದ್ಯಾ ರೂಪಿ, ನಿನ್ನ ಆಯಿ ಸತ್ತು ಹದಿಮೂರು ದಿನ ಆತು. ನಿನ್ನ ನೆನಪಲ್ಲೇ ಕೊನೆ ಉಸಿರೆಳೆದಳು...' ಕಂಬನಿ ತುಂಬಿ ವಿನಯ ಹೇಳಿದ. ರೂಪಿಗೆ ಮತ್ತೊಂದು ಸಿಡಿಲು ಬಡಿದಂತಾಯಿತು. ಭೋ ಎಂದು ಅತ್ತಳು. ಕಂಕುಳ ಮಗುವೂ ಚೀರಿತು. ವಿನಯನಿಗೆ ಮತ್ತೆ ಆಶ್ಚರ್ಯ. ಗೊಂದಲಕ್ಕೊಳಗಾದ. ರೂಪಿಯನ್ನು ಸಂತೈಸುವುದು ಹೇಗೆಂದು ಗೊತ್ತಾಗಲಿಲ್ಲ. 'ನಡೆ ರೂಪಿ ಮನೆಗೆ ಹೋಗುವಾ... ಅಪ್ಪಯ್ಯ ಕಾಯ್ತಿದ್ರೂ' ಎಂದಷ್ಟೇ ಹೇಳಿದ. ರೂಪಿ ಹೇಳಿದಳು : 'ತಾಯಿನ ತಿಂದ ಪಾಪಿ ನಾನು, ನಾನು ಮನೆಗೆ ಬತ್ನಿಲ್ಲೆ...' ಇಷ್ಟು ಹೇಳಿ ತೋಟದ ಬಾವಿಯ ಕಡೆ ಸರಸರನೆ ಹೆಜ್ಜೆ ಹಾಕಿದಳು. ವಿನಯ ಅರ್ಥವಾಗದಿದ್ದರೂ ಅವಳನ್ನು ಕರೆಯುತ್ತಾ ತಾನೂ ಅವಳ ಹಿಂದೆ ಓಡಿದ. 'ನಾನು ಬದುಕಿರಬಾರದು' ಎಂದು ಹೇಳುತ್ತಾ ಓಡಿದ ರೂಪಿಯನ್ನು ರಟ್ಟೆ ಹಿಡಿದು ಬಲವಂತವಾಗಿ ನಿಲ್ಲಿಸಿದ ವಿನಯ. ರೂಪಿಯ ದುಃಖಕ್ಕೆ ಪಾರವಿರಲಿಲ್ಲ. ತಾಯಿ ಸತ್ತಿದ್ದಕ್ಕೆ ತಾನೇ ಕಾರಣ ಎಂದು ಎದೆ ಬಡಿದು ಅತ್ತಳು. ವಿನಯ ಅವಳನ್ನು ಸಂತೈಸಲು ಹೆಣಗಾಡಿದ. ಮಗು ಚೀರುತ್ತಿತ್ತು. ವಿನಯ ಅವಳನ್ನು ಎದೆಗೊರಗಿಸಿಕೊಂಡ. ಮತ್ತೆ ರೂಪಿಯ ಅಳು. ತನ್ನ ಕಥೆಯೆಲ್ಲವನ್ನೂ ಹೇಳಿದಳು. ಅವಳ ಕಣ್ಣೀರಿನಿಂದ ವಿನಯನ ಎದೆ ತೊಯ್ದಿತ್ತು. 'ನಾನು ಬದ್ಕಬೇಕಾದ್ರೂ ಎಂತಕ್ಕೆ?' ಎಂದು ರೂಪಿ ಕೇಳಿದ್ದಕ್ಕೆ ವಿನಯ ಶಕ್ತಿಮೀರಿ ಸಂತೈಸಿದ. 'ಊರಲ್ಲಿ ಮರ್‍ಯಾದೆ ಹೋಗ್ತು' ಎಂದು ಅತ್ತ ರೂಪಿಗೆ ಸಮಾಧಾನ ಹೇಳಿ ಒಂದು ಉಪಾಯ ಸೂಚಿಸಿದ. 'ಮಗುವನ್ನು ಇಲ್ಲೇ ಬಿಟ್ಟು ನೀನು ಮತ್ತೆ ಜರ್ಮನಿಗೆ ಹೊರಟುಬಿಡು. ಮಗುವನ್ನು ನಾನು ಸಾಕುತ್ತೇನೆ. ಬಾವಿಕಟ್ಟೆಯ ಬಳಿ ಮಗು ಸಿಕ್ಕಿತು ಎಂದು ಊರವರಿಗೆ ಹೇಳುತ್ತೇನೆ. ಎರಡು ವರ್ಷ ಬಿಟ್ಟು ನೀನು ಬಾ, ನಿನ್ನವರು ನಿನಗಾಗಿ ಕಾಯುತ್ತಾರೆ... ಕೊರಗದಿರು', ಎಂದು ಪರಿಪರಿಯಾಗಿ ಹೇಳಿ ಒಪ್ಪಿಸಿ ರೂಪಿಯನ್ನು ವಾಪಸ್ಸು ಕಳಿಸಿದ. ಮರುದಿನ ಬೆಳಿಗ್ಗೆ ಊರಲ್ಲಿ ಗೌಜಿ. 'ವಿನಯನಿಗೆ ಮಗು ಸಿಕ್ಕಿತಂತೆ, ತಂದು ಸಾಕುವನಂತೆ, ಫಾರಿನ್ ಮಗು, ಇವನಿಗಿದೆಲ್ಲಾ ಬೇಕಾಗಿತ್ತೇ? ಮದುವೆಯಾಗಿ ಹಾಯಾಗಿರಬಾರದೇ? ಬಂದ ಹುಡುಗಿ ಒಪ್ಪುತ್ತಾಳಾ?'... ಎಷ್ಟೆಲ್ಲ ಮಾತುಗಳು. ವಿನಯ ಯಾವುದಕ್ಕೂ ತಲೆಕೆಡಿಸಿಕೊಳ್ಳಲಿಲ್ಲ. ಜೀವನಕ್ಕೆ ಹೊಸ ಅರ್ಥ ಬಂದಂತೆ ವರ್ತಿಸತೊಡಗಿದ. ಇದ್ದ ಒಂದು ಹೋಟೆಲನ್ನೇ ಎರಡು ವರ್ಷದಲ್ಲಿ ತುಂಬ ಸುಂದರ ವಾಗಿ ಪರಿವರ್ತಿಸಿದ. ಈಗ ಕೈಯಲ್ಲಿ ನಾಲ್ಕು ಕಾಸು ಓಡಾಡಲಾರಂಭಿಸಿತು. ತನ್ನ ಸಂತೋಷಕ್ಕೆ ಯಾವುದು ಕಾರಣ ಅಂತ ಯೋಚಿಸಿದರೆ 'ಮಗು' ಎಂಬ ಉತ್ತರ ಬರುತ್ತಿತ್ತು. ರೂಪಿಯ ಬಗೆಗಿನ ಆಕರ್ಷಣೆಯೇ ಇದಕ್ಕೆಲ್ಲಾ ಕಾರಣವೇ ಎಂದು ವಿನಯ ಯೋಚಿಸುತ್ತಿದ್ದ. ಎರಡು ವರ್ಷ ಮಿಂಚಿನಂತೆ ಕಳೆಯಿತು. ರೂಪಿ ವಾಪಸ್ಸು ಬಂದಳು. ತಾನು ಏಳು ವರ್ಷ ದುಡಿದ ಹಣದೊಂದಿಗೆ. ಈ ಎರಡು ವರ್ಷದಲ್ಲಿ ರೂಪಿಗೆ ವಿನಯನ ಪ್ರೀತಿ, ನಡೆ–ನುಡಿ ಸಾಂತ್ವನ ಕೊಟ್ಟಿತು. ತನ್ನ ಮುಂದಿನ ಜೀವನ ಕಳೆಯುವುದಾದರೆ ಇವನೊಟ್ಟಿಗೇ ಸರಿ ಎಂದು ತೀರ್ಮಾನಿಸಿದ್ದಳು. ವಿನಯನ ಆಸೆಯೂ ಇದೇ ಆಗಿದ್ದರೂ ಮಾವನ ಒಂದು ಮಾತಿಗೆ ಕಾದು ಕೂತಿದ್ದ. ರೂಪಿಯ ಹಿಂದಿನ ಘಟನೆಯ ಅರಿವಿರದ ರೂಪಿಯ ತಂದೆ ಮಗಳಿಗೆ ಗಂಡು ಹುಡುಕಲು ಶುರು ಮಾಡಿದ. ವಿನಯನ ಜೊತೆಗಿನ ಮಗಳ ಸಲಿಗೆ ಸಹಿಸಲು ಕಷ್ಟವಾಗುತ್ತಿತ್ತು. ಏನೊಂದೂ ಗೊತ್ತಿಲ್ಲದ ತಂದೆಗೆ, ಮಗುವನ್ನು ತಂದು ಸಾಕುತ್ತಿರುವ, ಅಷ್ಟೊಂದು ಸುಂದರನಲ್ಲದ, ವಿದ್ಯೆ ಇಲ್ಲದ ವಿನಯನಿಗೆ ತನ್ನ ಮಗಳನ್ನು ಕೊಟ್ಟು ಮದುವೆ ಮಾಡುವುದು ಸಹಿಸಲು ಸಾಧ್ಯವಾಗದ ನೋವಾಗಿತ್ತು.

'ಅವನ ಸಾಕುಮಗನಿಗೆ ತಾಯಿ ಆಗ್ತ್ಯಾ? ಹುಚ್ಚಿ, ನೀನು ನನ್ನ ಜೀವ ಇಪ್ಪಲ್ಲಿವರೆಗೆ ಇದು ಸಾಧ್ಯ ಇಲ್ಲೆ' ಎಂದು ಹಾರಾಡಿದ. ರೂಪಿ ಹಟಹಿಡಿದಳು. ನೀರು ಬಿಟ್ಟಳು. ವಿನಯ ಕಣ್ಣಲ್ಲಿ ನೀರು ತುಂಬಿಕೊಂಡ. ಮಗಳು ಮತ್ತು ವಿನಯನಿಗೆ ಹಿಡಿ ಶಾಪ ಹಾಕುತ್ತ ಅಂತೂ ಮದುವೆಗೆ ಒಪ್ಪಿಕೊಂಡ ರೂಪಿಯ ಅಪ್ಪ. ಮದುವೆಗೆ ಕರೆಯಲು ಹೋದಲ್ಲೆಲ್ಲ ತನ್ನ ಸುರಸುಂದರ ಫಾರಿನ್ ರಿಟರ್ನ್ಡ್ ಮಗಳನ್ನು ಇಂಥವನಿಗೆ ಕೊಟ್ಟು ಮದುವೆ ಮಾಡುತ್ತಿದ್ದೇನೆ ಎಂದು ಹಳಹಳಿಸುತ್ತ ತಿರುಗಿದ. ಅಂತೂ ಮದುವೆ ನಡೆಯಿತು. ಊರವರು ವಿನಯನ ಅದೃಷ್ಟ ಎಂದರು. ಮಾಟ, ಮಂತ್ರ ಮಾಡಿ ಅವಳನ್ನು ಬಲೆಗೆ ಹಾಕಿಕೊಂಡ ಎಂದರು. ರೂಪಿಗೆ ಮಾತ್ರ ವಿನಯ ದೇವರಾದ. ವಿನಯ ಅವಳಿಗಾಗಿ ಪ್ರೀತಿಯ ಕಡಲನ್ನೇ ಹರಿಸಿದ. ರೂಪಿ ತನ್ನ ಹಣವನ್ನೆಲ್ಲ ಸ್ಟಾರ್ ಹೋಟೆಲ್ ಒಂದನ್ನು ಕಟ್ಟಲು ಸುರಿದಳು. 'ರೂಪಿ ಇಂಥವನನ್ನು ಮದುವೆಯಾದಳು. ಸಾಕುಮಗನಿಗೆ ತಾಯಿಯಾದಳು' ಎಂದೇ ಜನ ಮಾತಾಡಿದರು. ವಿನಯನಿಗೆ ಯಶಸ್ಸು, ಹಣ ಹುಡುಕಿಕೊಂಡು ಬಂತು. ರೂಪಿಯ ಮೇಲಿನ ಪ್ರೀತಿಗಾಗಿ ಆತ ಬದುಕಿದ. ಅವನ ಬದುಕು ರೂಪಿಯಿಂದ ತುಂಬಿಹೋಗಿತ್ತು. ಅವನು ಅವಳನ್ನು ಪ್ರೀತಿಸಿದಂತೆಲ್ಲ ವ್ಯವಹಾರ ಹೆಚ್ಚುತ್ತಾ ಹೋಯಿತು. ಆತ ಜೀವನವನ್ನು ಮತ್ತೂ ಪ್ರೀತಿಸಿದ. ಸ್ಟಾರ್ ಹೋಟೆಲಿನ ಮಾಲೀಕನಾದ.

ಕಥೆ ಕೇಳಿದ ಕೀರ್ತಿ 'ಈ ಜೀವನದಲ್ಲಿ ದೊಡ್ಡದಾಗಿ ಪ್ರೀತಿ ಕೊಡಲೂ ಬತ್ತಿಲ್ಲೆ. ಪ್ರೀತಿ ಪಡ್ಯೆಲೂ ಬತ್ತಿಲ್ಲೆ. ನಿನ್ನ ಪ್ರೀತಿ ದೊಡ್ಡದು ವಿನಯ' ಎಂದಳು. 'ಅಯ್ಯಯ್ಯೋ ಹಂಗೆಲ್ಲ ಏನಿಲ್ಲೆ. ನಿನ್ನ ಹತ್ತಿರ ಮಾತ್ರ ಈ ವಿಷಯ ಹಂಚ್ಕಂಡದ್ದು, ನಿಂಗೆ ಈ ವಿಷ್ಯ ಗೊತ್ತಿದ್ದು ಹೇಳಿ ತೋರ್ಸ್ಕಳಡಾ. ಪಾಪ! ನನ್ನ ರೂಪಿ ಮುಜುಗರ ಪಟ್ಟಿಂಗು' ಎಂದ. 'ನಿನ್ನ ಮನ, ಮನೆ ಎರಡೂ ದೊಡ್ಡದಪ್ಪಾ ವಿನಯ' ಎಂದಳು ಕೀರ್ತಿ.

ಕೀರ್ತಿಯ ಕುತೂಹಲ ತಣಿದಿತ್ತು. ಮರುದಿನ ಬೆಳಿಗ್ಗೆ ಮಗುವಿಗೆ ಮುತ್ತು ಕೊಟ್ಟು ಹೊರಟು ನಿಂತಳು. ವಿನಯನ ವಿನಯ ಕೀರ್ತಿಯ ಮನಸ್ಸು ತುಂಬಿತ್ತು.

**ಸಂಧ್ಯಾ ಹೆಗ್ಡೆ**
ಬೆಂಗಳೂರು



ಡಾ॥ ಆರ್. ಶಂಕರಪ್ಪ



# ಶಿಕ್ಷಣ ರಾಷ್ಟ್ರಪ್ರಗತಿಯ ಅಡಿಗಲ್ಲು

ಭಾರತದಲ್ಲಿ ಪ್ರಾಚೀನ ಕಾಲದಿಂದಲೂ ವಿದ್ಯೆಗೆ ಶ್ರೇಷ್ಠ ಸ್ಥಾನವಿತ್ತು. ವರ್ತಮಾನದ ಮಾಹಿತಿ ತಂತ್ರಜ್ಞಾನ ಯುಗದಲ್ಲಿ ಪ್ರತಿಪಾದಿಸುತ್ತಿರುವುದೂ ಇದನ್ನೇ. ಭವಿಷ್ಯದ ಭರವಸೆ, ಆಸ್ತಿಯೂ ವಿದ್ಯೆ, ಶಿಕ್ಷಣದಿಂದ ವ್ಯಕ್ತಿತ್ವ ವಿಕಸನ, ಲೌಕಿಕ ಪ್ರಪಂಚದ ಅಗತ್ಯ ಪೂರೈಸಿಕೊಳ್ಳಲು ಲಕ್ಷ್ಮೀಕಟಾಕ್ಷ ದೊರಕುತ್ತದೆ. ಮುಖ್ಯವಾಗಿ ಸಾತ್ವಿಕವಾದ ಬದುಕನ್ನು ಕಟ್ಟಿಕೊಳ್ಳಲು ನೆರವಾಗುತ್ತದೆ. ಹಾಗಾಗಿ ಯಾವ ಮಗುವೂ ಶಿಕ್ಷಣದಿಂದ ವಂಚಿತವಾಗಬಾರದು. ಕಾಲಾನುಕ್ರಮದ ಬದಲಾವಣೆಗೆ ತಕ್ಕಂತೆ ಶೈಕ್ಷಣಿಕ ಕ್ಷೇತ್ರದಲ್ಲಿ ಸುಧಾರಣೆಯಾಗಬೇಕು. ಅದು ಕಡ್ಡಾಯವೂ ಆಗಬೇಕು ಎನ್ನುವುದರಲ್ಲಿ ಅರ್ಥವಿದೆ. ಹಾಗೆ ನೋಡಿದರೆ ಶಿಕ್ಷಣದ ಹಸಿವು ಸ್ವಾತಂತ್ರ್ಯ ಚಳುವಳಿಯ ಭಾಗವೂ ಆಗಿತ್ತು. ಜಾತಿಯ ಅಸಮಾನತೆಯಿಂದಾಗಿ ಅಂದು ಎಲ್ಲರಿಗೂ ಶಿಕ್ಷಣವಿರಲಿಲ್ಲ. ಧನಿಕರ ಮಕ್ಕಳಷ್ಟೇ ಸರಸ್ವತಿಯ ಅನುಗ್ರಹಕ್ಕೆ ಪಾತ್ರರಾಗುತ್ತಿದ್ದ ಕಾಲವದು. ಹೀಗಾಗಿ ಜ್ಯೋತಿಬಾ ಫುಲೆ, ಗೋಪಾಲಕೃಷ್ಣ ಗೋಖಲೆ ಅವರಂಥವರು ಶಿಕ್ಷಣದ ಹಕ್ಕನ್ನು ಆದ್ಯತೆಯಾಗಿ ಪರಿಗಣಿಸುವಂತೆ ಅಂದಿನ ಬ್ರಿಟಿಷ್ ಸರಕಾರಕ್ಕೆ ಮನವಿ ಮಾಡಿಕೊಂಡಿದ್ದರು. ಆಗ ಈ ಸಂಬಂಧ ಪ್ರಕ್ರಿಯೆ ಆರಂಭ ಗೊಂಡರೂ ತಾರ್ಕಿಕ ಅಂತ್ಯ ಹಾಡುವ ಕಾಳಜಿ ಕಾಣಲಿಲ್ಲ. ಸ್ವಾತಂತ್ರ್ಯೋತ್ತರ ಭಾರತದಲ್ಲಿ ಇಂಥದೊಂದು ಪ್ರಯತ್ನ ಸರಿಯಾಗಿ ನಡೆಯಲಿಲ್ಲ.

ಜಗತ್ತಿನ ಮುಂದುವರಿದ, ಬಲಾಢ್ಯ ರಾಷ್ಟ್ರಗಳು ಶಿಕ್ಷಣದ ವಿಷಯದಲ್ಲಿ ರಾಜಿ ಮಾಡಿಕೊಳ್ಳುತ್ತಿಲ್ಲ. ವಿಶ್ವ ಸಂಸ್ಥೆಯೂ ಕಡ್ಡಾಯ ಶಿಕ್ಷಣದ ಬಗ್ಗೆ ಖಚಿತ ದೃಷ್ಟಿಕೋನ ಹೊಂದಿದೆ. ಯಾವುದೇ ದೇಶವೊಂದರ ಅಭಿವೃದ್ಧಿಯು ಶೈಕ್ಷಣಿಕ ಪ್ರಗತಿಯನ್ನು ಅವಲಂಬಿಸಿರುತ್ತದೆ. ಆದರೆ, ಅದು ಪ್ರಜ್ಞಾವಂತ ಸಮಾಜ ರೂಪಿಸುವುದಕ್ಕೆ ಪೂರಕವಾಗಿರಬೇಕು. ಈ ವಿಚಾರವು ವಿಶ್ವಸಂಸ್ಥೆಯ ಅಂಗಳದಲ್ಲಿ ಹತ್ತು ಹಲವು ಬಾರಿ ನಿಷ್ಕರ್ಷೆಗೆ ಒಳಪಟ್ಟಿದೆ. ದೇಶದಲ್ಲಿ ಶಿಕ್ಷಣವು ಮೂಲಭೂತ ಹಕ್ಕು ಆಗಬೇಕು ಎಂಬ ಹೋರಾಟದ ಪ್ರಯತ್ನ ಹಾಗೂ ಈ ಸಂಬಂಧ ನಡೆದ ಚರ್ಚೆಗೆ ಹಿನ್ನೆಲೆಯಿದೆ. ೧೯೬೪ರಲ್ಲಿ ಡಾ॥ ಎಸ್. ಕೊಥಾರಿ ನೇತೃತ್ವದಲ್ಲಿ ಆಯೋಗ ರಚಿಸಲಾಯಿತು. ಅದರ ಶಿಫಾರಸ್ಸಿನಂತೆ ಮೊದಲ ಶಿಕ್ಷಣ ನೀತಿ ತರಲಾಯಿತು. ೧೯೭೬ರ ಒಳಗೆ ಸಮಾನ ಶಿಕ್ಷಣ, ಶಿಕ್ಷಕರಿಗೆ ಆರ್ಥಿಕ ಭದ್ರತೆ ಒದಗಿಸಬೇಕು ಎಂಬ ಗುರಿ ಹಾಕಿಕೊಳ್ಳಲಾಯಿತು. ಇದು ಸರಿಯಾಗಿ ಜಾರಿಯಾಗದಿದ್ದುದರಿಂದ ೧೯೮೬ರಲ್ಲಿ ರಾಷ್ಟ್ರೀಯ ಶಿಕ್ಷಣ ನೀತಿ ಕ್ರಿಯಾ ಯೋಜನೆ ಬಂತು. ಪ್ರತಿ ಶಾಲೆಗೊಂದು ಕಪ್ಪು ಹಲಗೆ ಕೊಡುವುದು ಇದರಲ್ಲಿ ಪ್ರಮುಖವಾದುದು. ಶಿಕ್ಷಣ ಎನ್ನುವುದು ಮುಗಿಯಲಾರದ ಪ್ರಕ್ರಿಯೆ, ಜೀವನದ ಅನುಕ್ಷಣ, ಅನುದಿನವೂ ಒಂದೊಂದು ತೆರನಾದ ಶಿಕ್ಷಣವನ್ನು ನಾವು ಪಡೆಯುತ್ತಲೇ ಇರುತ್ತೇವೆ. ಎಲ್ಲರೂ ಬದುಕಿನ ಪ್ರತಿಯೊಂದು ಘಟ್ಟದಲ್ಲಿಯೂ ಶಿಕ್ಷಣ ಪಡೆಯುತ್ತಲೇ ಇದ್ದರೂ, ಸಾಮಾನ್ಯವಾಗಿ ಶಿಕ್ಷಣ ಎಂದಾಕ್ಷಣ, ಅದು ಮಕ್ಕಳ ಕಲಿಕೆಯತ್ತ ಕೇಂದ್ರಿತವಾಗುತ್ತದೆ. ಈಗ ಎಲ್ಲೆಡೆ ಗುಣಮಟ್ಟದ ಶಿಕ್ಷಣದ್ದೇ ಮಾತು. ಶಿಕ್ಷಣ ಇಲಾಖೆ ಕೂಡ ಗುಣಮಟ್ಟದ ಶಿಕ್ಷಣ ನಮ್ಮ ಪ್ರಥಮ ಆದ್ಯತೆ ಎಂದಿದೆ. ೧೯೮೬ರಲ್ಲಿ ಬಂದ ಹೊಸ ರಾಷ್ಟ್ರೀಯ ಶಿಕ್ಷಣ ನೀತಿಯು ವ್ಯಕ್ತಿತ್ವ ನಿರ್ಮಾಣ, ಶಾರೀರಿಕ ದೃಢತೆ ಸೃಷ್ಟಿಶೀಲ ಮತ್ತು ವಿಮರ್ಶಾತ್ಮಕ ಯೋಚನಾಶಕ್ತಿ ಸಮಸ್ಯೆಗಳನ್ನು ಪರಿಹರಿಸಿಕೊಳ್ಳುವ ಜಾಣ್ಮೆ, ಸರಿಯಾದ ಸ್ವತಂತ್ರವಾದ ನಿರ್ಧಾರ ತೆಗೆದುಕೊಳ್ಳುವ ಶಕ್ತಿ ಇವುಗಳು ಮಕ್ಕಳಲ್ಲಿ ಮೈಗೂಡಿ ಇವೇ ಅವರ ಬಾಳಿನ ಆಧಾರಸ್ತಂಭಗಳಾಗುವಂತಿರಬೇಕು ಇದೇ ಗುಣಾತ್ಮಕ ಶಿಕ್ಷಣ ಎಂದು ವ್ಯಾಖ್ಯಾನಿಸಿದೆ. ೧೯೮೯ರಲ್ಲಿ ಇದನ್ನು ಪರಿಷ್ಕರಣೆಗೆ ಒಳಪಡಿಸಿ ೧೯೯೨ರಲ್ಲಿ ಮರು ಜಾರಿ ಮಾಡಲಾಯಿತು. ಶಿಕ್ಷಣಕ್ಕೆ ಸಂಬಂಧಿಸಿ ೧೯೯೩ರಲ್ಲಿ ಸುಪ್ರೀಂ ಕೋರ್ಟ್‌ನಿಂದ ಐತಿಹಾಸಿಕ ತೀರ್ಪು ಹೊರಬಿದ್ದ ಹಿನ್ನೆಲೆಯಲ್ಲಿ ಈ ವಿಚಾರ ಮತ್ತಷ್ಟು ಪ್ರಸ್ತುತವಾಯಿತು. ಜತೆಗೆ ಅಂತರರಾಷ್ಟ್ರೀಯ ಒತ್ತಡವೂ ಹೆಚ್ಚಿತು. ಇದರ ಫಲ ಸ್ವರೂಪವಾಗಿ

೨೦೦೧ರಲ್ಲಿ ಸರ್ವ ಶಿಕ್ಷಣ ಅಭಿಯಾನ ಅನುಷ್ಠಾನಕ್ಕೆ ಬಂದಿತು.

**ವಿಶ್ವಸಂಸ್ಥೆಯ ಅಭಿಪ್ರಾಯ :** ಶಿಕ್ಷಣದ ಹಕ್ಕಿನ ಪ್ರಶ್ನೆ ಬಂದಾಗ ವಿಶ್ವಸಂಸ್ಥೆಯ ನಿರ್ದೇಶನದೆಡೆಗೆ ಗಮನಕೊಡಬೇಕು. ೧೯೮೭ರಲ್ಲಿ ವಿಶ್ವ ಮಕ್ಕಳ ಹಕ್ಕುಗಳ ಒಡಂಬಡಿಕೆಗೆ ೧೫೦ ರಾಷ್ಟ್ರಗಳು ಸಹಿ ಹಾಕಿವೆ. ಭಾರತ ಇದಕ್ಕೆ ೧೯೯೨ರಲ್ಲಿ ಒಪ್ಪಿದೆ. ಅದರಂತೆ ಹುಟ್ಟಿದ ಅವಧಿಯಿಂದ ೧೮ ವರ್ಷದವರೆಗೆ ಮಗುವೆಂದು ಪರಿಗಣಿಸಬೇಕು. ಅಂದ ಮೇಲೆ ಶಿಕ್ಷಣ ಹಕ್ಕು ಕಾಯಿದೆಯೂ ಅಂತರರಾಷ್ಟ್ರೀಯ ತತ್ವಕ್ಕೆ ಒಳಪಟ್ಟಿರಬೇಕು. ಆದರೆ ಹಾಗಾಗಿಲ್ಲ. ೨೫–೩೦ ವರ್ಷದ ಹಿಂದೆ ೭ನೇ ತರಗತಿಯವರೆಗಿನ ಶಿಕ್ಷಣವೇ ದೊಡ್ಡದಾಗಿತ್ತು. ಈಗ ಉದ್ಯೋಗ ಸಿಗಲು ಕನಿಷ್ಠ ಪಿಯುಸಿ ವಿದ್ಯಾರ್ಹತೆಯಾದರೂ ಬೇಕು. ಆದರೆ ಕೇಂದ್ರ ಸರಕಾರ ಅತ್ಯಂತ ಪ್ರಜ್ಞಾಪೂರ್ವಕವಾಗಿ ಈ ಅಂಶವನ್ನು ಮರೆಮಾಚಿದೆ. ಈ ಮೂಲಕ ವಿಶ್ವಸಂಸ್ಥೆಯ ಅಣಕವನ್ನೂ ಮಾಡಿದೆ.

ಹಳ್ಳಿಯಿಂದ ದಿಲ್ಲಿಯವರೆಗೆ ಸಿಬಿಎಸ್‌ಇ, ಎಸಿಎಸಿ ಪಠ್ಯಕ್ರಮದ ಕಾನ್ವೆಂಟ್, ಪಬ್ಲಿಕ್ ಶಾಲೆ, ವಿದ್ಯಾಲಯ, ಅಂತರರಾಷ್ಟ್ರೀಯ ವಸತಿ ಶಾಲೆ ಎಂಬ ಬಣ್ಣ ಬಣ್ಣದ ಹೆಸರಿನಲ್ಲಿ ಶಿಕ್ಷಣದಂಗಡಿಗಳು ಶುರುವಾದವು. ಇದರಿಂದ ಸಮಾನ ಶಿಕ್ಷಣ ಎಂಬ ಆಶಯ ನುಚ್ಚುನೂರಾಗಿ, ಶ್ರೀಮಂತರ ಮಕ್ಕಳಿಗೆ ಕಾನ್ವೆಂಟ್‌ನ ಇಂಗ್ಲಿಷ್ ಕಲಿಕೆ, ಬಡವರ ಮಕ್ಕಳಿಗೆ ಸರಕಾರಿ ಶಾಲೆಯಲ್ಲಿ ಕನ್ನಡ ಕಲಿಕೆ ಎಂಬ ಪರಿಸ್ಥಿತಿ ಉದ್ಭವಿಸಿತು. ಇದರಿಂದ ಸಮಾಜದ ತಳವರ್ಗ ಮತ್ತು ಆರ್ಥಿಕವಾಗಿ ದುರ್ಬಲರಾದ ಜನರಲ್ಲಿ ಒಂದು ರೀತಿಯ ತಳಮಳ ಶುರುವಾಯಿತು. ಈ ಬೆಳವಣಿಗೆ ಎಲ್ಲರಿಗೂ ಸಮಾನ ಶಿಕ್ಷಣ ಎಂಬ ಹೊಸ ಚಳವಳಿಯ ಹುಟ್ಟಿಗೂ ಕಾರಣವಾಯ್ತು. ಶಿಕ್ಷಣದ ರಾಷ್ಟ್ರೀಕರಣ ಎಂಬುದು ಆ ಕೂಗಿನ ಮುಂದುವರಿದ ಭಾಗ. ಬಡವ–ಬಲ್ಲಿದ, ನಗರದವ–ಹಳ್ಳಿಯವ, ಸರಕಾರಿ ನೌಕರ–ಸಾಮಾನ್ಯ ಕೂಲಿ ಕಾರ್ಮಿಕ ಎಂಬ ಭೇದವಿಲ್ಲದೆ, ಪ್ರತಿಯೊಬ್ಬರ ಮಕ್ಕಳಿಗೂ ಪ್ರೌಢಶಿಕ್ಷಣ ಮುಗಿಯುವವರೆಗೂ ಸಮಾನ ಶಿಕ್ಷಣ ದೊರಕಬೇಕು, ಸಮಶಾಲೆ, ಸಮವಸ್ತ್ರ, ಸಮ ಆಹಾರ ಎಲ್ಲ ಮಕ್ಕಳಿಗೂ ಸಿಗಬೇಕೆಂಬುದು ಸಮಾನ ಶಿಕ್ಷಣ ಪ್ರೇಮಿಗಳ ಆಗ್ರಹ. ಮೊದಲೆಲ್ಲಾ ಕ್ಯಾಪಿಟೇಶನ್ ಶುಲ್ಕ ಎಂದರೆ ಅದು ಕೇವಲ ಎಂಜಿನಿಯರಿಂಗ್, ವೈದ್ಯ, ಸೇರಿದಂತೆ ಕೆಲ ವೃತ್ತಿಪರ ಕೋರ್ಸ್‌ಗಳಿಗೆ ಸಂಬಂಧಿಸಿದ ಪಿಡುಗಾಗಿತ್ತು. ಅದು ಈಗ ನರ್ಸರಿಗೂ ವಿಸ್ತರಿಸಿದೆ, ಶಿಕ್ಷಣದ ಎಲ್ಲ ಹಂತಗಳೂ ವ್ಯಾಪಾರವೇ. ಈ ಬೆಳವಣಿಗೆಯೇ ಶಿಕ್ಷಣ ರಾಷ್ಟ್ರೀಕರಣವಾಗಲಿ ಎಂಬ ಭಾವೋದ್ವೇಗದ ಸ್ಫೋಟಕ್ಕೆ ಕಾರಣ:

**ರಾಷ್ಟ್ರೀಕರಣದ ಉದ್ದೇಶ :** ನಮ್ಮ ಎಲ್ಲ ಖಾಸಗಿ ಶಿಕ್ಷಣ ಸಂಸ್ಥೆಗಳು ರಾಷ್ಟ್ರೀಕರಣವಾಗಬೇಕು ಎಂಬುದು ಸಾಹಿತಿ ಡಾ॥ ಅರವಿಂದ ಮಾಲಗತ್ತಿ ಸೇರಿದಂತೆ ಕೆಲವರ ವಾದ. ಅದಕ್ಕೆ ಅವರು ನೀಡುವ ಕಾರಣಗಳು :

✳ ಬಹುತೇಕ ಶಿಕ್ಷಣ ಸಂಸ್ಥೆಗಳು ಮೇಲ್ಜಾತಿಗಳ ಸಂಘ–ಸಂಸ್ಥೆಗಳು ಇಲ್ಲವೇ ಆ ಜಾತಿಯ ಮಠ ಮಾನ್ಯಗಳ ಮುಷ್ಟಿಯಲ್ಲಿವೆ.
✳ ಸರಕಾರ ಅನುದಾನ ನೀಡುತ್ತಿದ್ದರೂ ಇಂಥ ಸಂಸ್ಥೆಗಳು ವಿದ್ಯಾರ್ಥಿಗಳಿಂದ ವಂತಿಕೆ (ಕ್ಯಾಪಿಟೇಷನ್) ವಸೂಲಿ ಮಾಡುತ್ತಿವೆ.
✳ ಜಾತಿ, ಮತ – ಧರ್ಮದ ಹೆಸರಿನಲ್ಲಿ ಕೆಲ ಸಂಸ್ಥೆಗಳು ಲಾಭಕ್ಕಿಳಿದಿವೆ.
✳ ಸ್ವಜಾತಿ ಮೋಹದ ಶಿಕ್ಷಣ ಸಂಸ್ಥೆಗಳಿಂದ ಸಾಮಾಜಿಕ ವ್ಯವಸ್ಥೆ ಹಾಳಾಗುತ್ತದೆ.
✳ ಇವು ಬಲಗೊಳ್ಳುತ್ತಾ ಹೋದರೆ, ಮುಂದೊಂದು ದಿನ ಅಧಿಕಾರ ಕೇಂದ್ರಗಳಾಗುತ್ತವೆ.
✳ ರಾಜಕಾರಣಿಗಳು, ಅಧಿಕಾರಿಗಳು ಇಂತಹ ಸಂಸ್ಥೆಗಳ ಕೈಗೊಂಬೆಗಳಾಗುತ್ತಾರೆ.
✳ ಎಲ್ಲ ಹಂತಗಳಲ್ಲೂ ಸರಕಾರದ ಮೀಸಲು ನೀತಿಯನ್ನು ಸರಿಯಾಗಿ ಅನುಸರಿಸುವುದಿಲ್ಲ.
✳ ಸರಕಾರಗಳನ್ನೇ ನಿಯಂತ್ರಿಸುವ ಮಠ–ಮಾನ್ಯಗಳು ಹಣ ಗಳಿಸಲೆಂದೇ ಶಿಕ್ಷಣ ಸಂಸ್ಥೆಗಳನ್ನು ನಡೆಸುತ್ತಿವೆ.
✳ ಇಲ್ಲಿಯ ಸಿಬ್ಬಂದಿ ಸಾಮಾನ್ಯವಾಗಿ, ಅದೇ ಜಾತಿಗೆ ಸೇರಿದವರು ಆದರೂ, ಸರಕಾರದ ಸಂಬಳ ಪಡೆಯುತ್ತಾರೆ.
✳ ಅಲ್ಪಸಂಖ್ಯಾತರ ಹೆಸರಿನಲ್ಲಿ ವಿಶೇಷ ಸವಲತ್ತು ಪಡೆಯುತ್ತಿರುವ ಜಾತೀಯ ಸಂಸ್ಥೆಗಳೂ ಕೂಡ ಲಾಭಕೋರತನಕ್ಕೆ ಇಳಿದಿವೆ.

**ಸ್ವಾತಂತ್ರ್ಯ ನಂತರದ ಪ್ರಗತಿ :** ಪ್ರಾಥಮಿಕ ಶಿಕ್ಷಣದ ಸಾರ್ವತ್ರೀಕರಣ ರಾಷ್ಟ್ರದ ಗುರಿಯಾಗಿದೆ, ರಾಷ್ಟ್ರ ನಿರ್ಮಾಣದಲ್ಲಿ ಶಿಕ್ಷಣ ಬಹಳ ಮುಖ್ಯ ಎಂಬುದನ್ನು ಸಂವಿಧಾನವನ್ನು ರೂಪಿಸಿದವರು ಗುರುತಿಸಿದ್ದರು, ರಾಜ್ಯ ನಿರ್ದೇಶಕ ತತ್ವಗಳ ಅನ್ವಯ ೧೪ ವರ್ಷದವರೆಗೆ ಮಕ್ಕಳಿಗೆ ಕಡ್ಡಾಯ ಹಾಗೂ ಉಚಿತ ಶಿಕ್ಷಣವನ್ನು ಸ್ವಾತಂತ್ರ್ಯ ಬಂದ ಹತ್ತು ವರ್ಷದ ಅವಧಿಯೊಳಗೆ ಒದಗಿಸಬೇಕಾಗಿತ್ತು. ಇದುವರೆಗೆ ರೂಪಿಸಲಾಗಿರುವ ರಾಷ್ಟ್ರೀಯ ಶಿಕ್ಷಣ ನೀತಿಗಳೂ ಕೂಡ ಸಂವಿಧಾನದ ಆದೇಶವನ್ನು ಪದೇ ಪದೇ ಎಚ್ಚರಿಸಿವೆ. ೧೯೮೬ರ ರಾಷ್ಟ್ರೀಯ ನೀತಿ ೨೧ನೇ ಶತಮಾನ ಆರಂಭವಾಗುವುದರೊಳಗೆ, ಉಚಿತ ಮತ್ತು ಕಡ್ಡಾಯ ಶಿಕ್ಷಣವನ್ನು ೧೪ ವರ್ಷದವರೆಗಿನ ಎಲ್ಲ ಮಕ್ಕಳಿಗೆ ನೀಡಬೇಕು ಎನ್ನುತ್ತದೆ. ೨೦೦೨ರಲ್ಲಿ ಜಾರಿಗೆ ಬಂದ ೮೬ನೇ ತಿದ್ದುಪಡಿಯ (೧೧ನೇ ಕರ್ತವ್ಯದ) ಆಶಯವೂ ಅದೇ.

ಸ್ವಾತಂತ್ರ್ಯ ಪೂರ್ವದಲ್ಲಿನ ವಸಾಹತುಶಾಹಿ ಆಡಳಿತದ ಅವಧಿಯಲ್ಲಿ ಇದ್ದ ಶಿಕ್ಷಣ ವ್ಯವಸ್ಥೆ ಸೀಮಿತ ಪರಿಧಿಯುಳ್ಳದ್ದಾಗಿದ್ದು, ಎಲ್ಲರಿಗೂ ಸುಲಭವಾಗಿ ಸಾಧ್ಯವಾದುದಾಗಿರಲಿಲ್ಲ. ಅಲ್ಲದೆ ಆ ಕಾಲದಲ್ಲಿನ ಸಾಮಾಜಿಕ, ಆರ್ಥಿಕ ಹಾಗೂ ರಾಜಕೀಯ ಪದ್ಧತಿಗೆ ಅನುಗುಣವಾಗಿ ಅಂದಿನ ಶಿಕ್ಷಣವನ್ನು ರೂಪಿಸಲಾಗಿದ್ದು, ಬ್ರಿಟಿಷರಿಗೆ ಅನುಕೂಲವಾಗುವಂತೆ ಇರುವ ಶಿಕ್ಷಣ ಪದ್ಧತಿಗೆ ಹೆಚ್ಚು ಒತ್ತು ನೀಡಲಾಗಿತ್ತು. ಈ ಶಿಕ್ಷಣ ಪದ್ಧತಿಯ ಉದ್ದೇಶ ಮುಖ್ಯವಾಗಿ ಸಾಧ್ಯವಾದಷ್ಟು ಯುರೋಪಿಯನ್ನರಿಗೆ ಸಮನಾದ ಭಾರತೀಯ ಹೊಸ ಪರಂಪರೆಯನ್ನು ಸೃಷ್ಟಿಸುವುದೇ ಆಗಿತ್ತು ಎಂಬುದನ್ನು ಮೆಕಾಲೆಯೇ ಸ್ಪಷ್ಟವಾಗಿ ಹೇಳಿದ್ದಾನೆ. ಈ ಒಂದು ಉದ್ದೇಶವೇ ಭಾರತ ರಾಷ್ಟ್ರೀಯ ಚಳುವಳಿಯ ಉಗ್ರ ಟೀಕೆಗೆ ಗುರಿಯಾಗಿತ್ತು. ಅಲ್ಲದೆ ಈ ಶಿಕ್ಷಣ ಕೇವಲ ಕಲಿಕಾ ಕೌಶಲವನ್ನು ಹೇಳಿಕೊಡುತ್ತದೆಯೇ ಹೊರತು ಜೀವನ ನಿರ್ವಹಣೆ ಕುಶಲತೆಯನ್ನು ಕಲಿಸಿ ಕೊಡುವುದಿಲ್ಲ. ರಾಷ್ಟ್ರೀಯ ಚಳುವಳಿಯು ಎಲ್ಲರಿಗೂ ಶಿಕ್ಷಣ ಎಂಬ ಭಾವವನ್ನು ವ್ಯಕ್ತಪಡಿಸಿತಷ್ಟೇ ಅಲ್ಲ ಶ್ರೀ ಗೋಪಾಲಕೃಷ್ಣ ಗೋಖಲೆಯವರ ಕಡ್ಡಾಯ ಶಿಕ್ಷಣ ಮಸೂದೆಯು ಭಾರತ ಸ್ವಾತಂತ್ರ್ಯ ಚಳುವಳಿಯ ಸ್ಫೂರ್ತಿ ಬಿಂಬಿಸಿತು.

**ಅಂತರರಾಷ್ಟ್ರೀಯ ಸಹಕಾರ :** ೧೯೯೦ರಲ್ಲಿ ಥೈಲ್ಯಾಂಡಿನ ಜೊಮಿಟೇನ್‌ನಲ್ಲಿ ನಡೆದ "ಎಲ್ಲರಿಗೂ ಶಿಕ್ಷಣ" ವಿಶ್ವ ಸಮಾವೇಶದ ನಂತರ ಅಭಿವೃದ್ಧಿಶೀಲ ರಾಷ್ಟ್ರಗಳ ಪ್ರಾಥಮಿಕ ಶಿಕ್ಷಣಕ್ಕಾಗಿ ಹಣ ಹೂಡಲು ಬಹುಪಕ್ಷೀಯ ಹಾಗೂ ದ್ವಿಪಕ್ಷೀಯ ಸಹಕಾರ ಸಂಸ್ಥೆಗಳು ಹೆಚ್ಚು ಹೆಚ್ಚು ಆಸಕ್ತಿ ತೋರಿದವು. ೧೯೯೨ರಲ್ಲಿ ವಿಶ್ವ ಬ್ಯಾಂಕ್ ಮತ್ತು ಯುರೋಪಿಯನ್ ಒಕ್ಕೂಟದ ನೆರವಿನೊಂದಿಗೆ ಅಂತರರಾಷ್ಟ್ರೀಯ ಸಹಕಾರದ ಬೃಹತ್ ಕಾರ್ಯಕ್ರಮ, ಜಿಲ್ಲಾ ಪ್ರಾಥಮಿಕ ಶಿಕ್ಷಣ ಕಾರ್ಯಕ್ರಮ (ಡಿಪಿಇಪಿ)ವು ಜಾರಿಗೊಂಡಿತು. ಜಿಲ್ಲಾಮಟ್ಟದಲ್ಲಿ ಸಮಗ್ರ ಕಾರ್ಯಕ್ರಮ ಮತ್ತು ವಿಕೇಂದ್ರಿಕೃತ ಯೋಜನೆಯ ಮೂಲಕ ಪ್ರಾಥಮಿಕ ಶಿಕ್ಷಣಕ್ಕೆ ಉತ್ತೇಜನ ಎಂಬುದು ಈ ಕಾರ್ಯಕ್ರಮದ ಉದ್ದೇಶ. ೧೯೯೭ರಲ್ಲಿ ಈ ಕಾರ್ಯಕ್ರಮವನ್ನು ೧೪ ರಾಜ್ಯಗಳ ೧೪೯ ಜಿಲ್ಲೆಗಳಿಗೆ ವಿಸ್ತರಿಸಲಾಯಿತು.

**ಗುಣಾತ್ಮಕ ಶಿಕ್ಷಣಕ್ಕಾಗಿ ಎಲ್ಲರಿಗೂ ಸಮಾನ ಅವಕಾಶ :** ಪ್ರಾಥಮಿಕ ಶಿಕ್ಷಣದ ಸಾರ್ವತ್ರೀಕರಣವನ್ನು ೧೯೫೦ರಿಂದಲೂ ನಮ್ಮ ರಾಷ್ಟ್ರೀಯ ಗುರಿಯಾಗಿ ಸ್ವೀಕರಿಸಲಾಗಿದ್ದು ಇದನ್ನು ಸಾಂವಿಧಾನಿಕ ಖಾತರಿ ಮಾಡುವ ಮೂಲಕ

ಇನ್ನಷ್ಟು ಬಲಪಡಿಸಲಾಗಿದೆ. ರಾಷ್ಟ್ರೀಯ ಶಿಕ್ಷಣ ನೀತಿ (೧೯೮೬) ಯು ಸಾರ್ವತ್ರಿಕ ಪ್ರಾಥಮಿಕ ಶಿಕ್ಷಣವನ್ನು ಸ್ಥೂಲವಾಗಿ ವಿಸ್ತರಿಸುತ್ತಾ ಮಕ್ಕಳ ದಾಖಲಾತಿ ಹಾಗೂ ಕಲಿಯುವಿಕೆಗೆ ಮುಂದುವರಿಸಲು ಸಮಾನ ಒತ್ತು ನೀಡಿದೆ. ರಾಷ್ಟ್ರೀಯ ಶಿಕ್ಷಣ ನೀತಿ ತಿಳಿಸುವುದೇನೆಂದರೆ, "ನಿರ್ದಿಷ್ಟ ಹಂತದವರೆಗೆ ಮಗುವಿನ ಸಾಮಾಜಿಕ ಹಾಗೂ ಆರ್ಥಿಕ ಹಿನ್ನೆಲೆಗಳು ಏನೇ ಇದ್ದರೂ ಸಹಾ, ಗುಣಾತ್ಮಕ ಶಿಕ್ಷಣ ಪಡೆಯಲು ಎಲ್ಲಾ ಮಕ್ಕಳಿಗೂ ಸಮಾನವಾದ ಅವಕಾಶ ಇರಬೇಕು. ಆ ರೀತಿ ಮಾಡುವುದರಿಂದ ಮಕ್ಕಳಿಗೆ ಒಂದು ಹಂತದವರೆಗೆ ಯಶಸ್ಸು ಸಾಧಿಸಲು ಅನುವಾಗುತ್ತದೆ. ಅದು ಸಮಾಜದ ಅನುಕೂಲವಂತ ವರ್ಗದ ಮಗುವಿನ ಕಲಿಕೆಗೆ ಸಮಾನವಾಗಿರುತ್ತದೆ. ಆ ಮೂಲಕ ದೇಶವು ಒಂದು ಸಾಮಾನ್ಯ ಶಾಲಾ ಶಿಕ್ಷಣದಲ್ಲಿ ಮುನ್ನಡೆಯಲು ಸಹಾಯಕವಾಗುತ್ತದೆ." ರಾಷ್ಟ್ರೀಯ ಶಿಕ್ಷಣ ನೀತಿಯ ಅನುಷ್ಠಾನಕ್ಕಾಗಿ ಭಾರತ ಸರ್ಕಾರ ರಾಜ್ಯ ಸರ್ಕಾರಗಳ ಸಹಯೋಗದೊಂದಿಗೆ ಕಾಲಮಿತಿ ಹಾಗೂ ಸಂಘಟಿತ ಪ್ರಯತ್ನದ ಮೂಲಕ ಸಾರ್ವತ್ರಿಕ ಪ್ರಾಥಮಿಕ ಶಿಕ್ಷಣದ ಗುರಿಯನ್ನು ಸಾಧಿಸಲು "ಸರ್ವಶಿಕ್ಷಣ ಅಭಿಯಾನ" ಎನ್ನುವ ಸರ್ವರಿಗೂ ಶಿಕ್ಷಣ ನೀಡಲು ೨೦೦೧–೨೦೦೨ರಲ್ಲಿ ಜಾರಿಗೆ ತರಲಾಯಿತು.

ಕೇಂದ್ರ ಮತ್ತು ರಾಜ್ಯ ಸರ್ಕಾರಗಳು ಈ ಯೋಜನೆಯ ವೆಚ್ಚವನ್ನು ಹಂಚಿಕೊಳ್ಳುವ ವ್ಯವಸ್ಥೆ ಇದ್ದು ಪ್ರಾರಂಭಿಕ ಹಂತದಲ್ಲಿ ೯೦ : ೧೦ ಆಗಿದ್ದು ನಂತರ ಹತ್ತನೇ ಯೋಜನೆಯ ಅಂತ್ಯದವರೆಗೆ ೭೫ : ೨೫ರ ಪ್ರಮಾಣದಲ್ಲಿ ಇರುವಂತೆ ವ್ಯವಸ್ಥೆ ಕಲ್ಪಿಸಲಾಯಿತು. ಸರ್ವಶಿಕ್ಷಣ ಅಭಿಯಾನದ ಗುರಿಯೆಂದರೆ ದೇಶದ ಎಲ್ಲಾ ಮಕ್ಕಳಿಗೂ ಗುಣಾತ್ಮಕ ಪ್ರಾಥಮಿಕ ಶಿಕ್ಷಣ ನೀಡಿಕೆ. ಆದ್ದರಿಂದ ಹದಿನಾಲ್ಕು ವಯೋಮಿತಿಯ ಎಲ್ಲಾ ಮಕ್ಕಳಿಗೆ ೨೦೧೦ರ ವೇಳೆಗೆ ಸಮುದಾಯದ ಒಡೆತನದ ಪ್ರಾಥಮಿಕ ಶಿಕ್ಷಣ ನೀಡುವುದು ಹಾಗೂ ಲಿಂಗಭೇದ ಮತ್ತು ವರ್ಗಭೇದವನ್ನು ನಿವಾರಿಸುವ ಪ್ರಯತ್ನ ಆಗಬೇಕು, ಶಿಕ್ಷಣವು ಪ್ರತಿಯೊಂದು ಮಗುವಿನ ಮೂಲಭೂತ ಹಕ್ಕು ಎಲ್ಲಾ ಮಕ್ಕಳಿಗೂ ಜೀವನ ಉಪಯುಕ್ತ, ಗುಣಾತ್ಮಕ ಶಿಕ್ಷಣವನ್ನು ಒದಗಿಸುವುದು ಸರ್ಕಾರದ ಕರ್ತವ್ಯ ಹಾಗೂ ಸಾರ್ವಜನಿಕ ಬದ್ಧತೆ ಆದ್ದರಿಂದ ೬ರಿಂದ ೧೪ ವರ್ಷ ವಯೋಮಾನದ ಎಲ್ಲಾ ಮಕ್ಕಳಿಗೂ ಸಹ ಯಾವುದೇ ತಾರತಮ್ಯವಿಲ್ಲದೆ ಸಮಾನ ಹಾಗೂ ಕಡ್ಡಾಯ ಮತ್ತು ಉಚಿತ ಪ್ರಾಥಮಿಕ ಶಿಕ್ಷಣವನ್ನು ನೀಡಲು ಸರ್ವಶಿಕ್ಷಣ ಅಭಿಯಾನ ಹಲವಾರು ಕಾರ್ಯಕ್ರಮಗಳನ್ನು ಕರ್ನಾಟಕ ರಾಜ್ಯ ಹಾಕಿಕೊಂಡಿತು. ಪ್ರಾಥಮಿಕ ಶಿಕ್ಷಣ ನೀಡುವಲ್ಲಿ ಇಲಾಖೆಗೆ ಬಹುಮುಖ್ಯ ಸವಾಲು "ಶಾಲೆಯಿಂದ ಹೊರಗಿರುವ ಮಕ್ಕಳು" ಇದರೊಟ್ಟಿಗೆ ಇರುವ ಇನ್ನೊಂದು ಸವಾಲು ಗುಣಮಟ್ಟದ ಶಿಕ್ಷಣ ಈ ಎರಡು ಸವಾಲುಗಳನ್ನು ಮೆಟ್ಟಿ ನಿಲ್ಲಲು ರಾಜ್ಯ ಸರ್ವಶಿಕ್ಷಣ ಅಭಿಯಾನದ ಮೂಲಕ ಹಲವಾರು ಯೋಜನೆಗಳನ್ನು ಹಾಕಿಕೊಂಡಿದೆ.

**ಶಿಕ್ಷಕರ ಹೆಚ್ಚು ಹೊಣೆಗಾರಿಕೆ :** ಪ್ರಾಥಮಿಕ ಶಿಕ್ಷಣ ಗುಣಾತ್ಮಕ ಶಿಕ್ಷಣವಾಗಬೇಕು. ಅಲ್ಲಿ ಮಕ್ಕಳಿಗೆ ಉತ್ತಮ ಅಡಿಪಾಯ ಹಾಕಿದರೆ ಮಕ್ಕಳು ಉತ್ತಮ ಗುಣಮಟ್ಟದ ಶಿಕ್ಷಣ ಪಡೆಯಲು ಸಾಧ್ಯವಾಗುತ್ತದೆ. ಆದರೆ ಶಿಕ್ಷಕರಿಗೆ ಪಾಠ ಕಲಿಸುವ ಜೊತೆಗೆ ಹೆಚ್ಚು ಹೊಣೆಗಾರಿಕೆಗಳನ್ನು ನಿರ್ವಹಿಸಬೇಕಾಗಿದೆ.

ಶೈಕ್ಷಣಿಕ ವರ್ಷ ಆರಂಭದಿಂದ ಸೆಪ್ಟೆಂಬರ್ ವರೆಗೆ ಪಠ್ಯ ಪುಸ್ತಕ, ಸಮವಸ್ತ್ರ, ಸೈಕಲ್ ವಿತರಣೆ ಹಾಗೂ ಇತರ ಸರ್ಕಾರಿ ಕೆಲಸಗಳಲ್ಲಿಯೇ ಶಿಕ್ಷಕರು ಹೈರಾಣಾಗಿ ಹೋಗುತ್ತಾರೆ. ಉಳಿದ ದಿನಗಳಲ್ಲಿಯೂ ಸರ್ಕಾರ ಹೇಳಿದ ಇತರ ಕೆಲಸಗಳನ್ನು ಮಾಡಬೇಕಾಗುತ್ತದೆ. ಸರ್ಕಾರದ ವಿವಿಧ ಕೆಲಸಗಳನ್ನು ಮಾಡುವುದು ಹೇಗೆಂದು ಹೇಳಿಕೊಡುತ್ತಾರೆ. ಆದರೆ ಪಠ್ಯದ ಗುಣಮಟ್ಟ ಏರಿಕೆಗೆ ಯಾವುದೇ ಮಾರ್ಗಸೂಚಿಗಳು ಬರುವುದಿಲ್ಲ. ಇದರಿಂದ ಸರ್ಕಾರಿ ಶಾಲೆಗಳ ಗುಣಮಟ್ಟ ಕುಸಿಯುತ್ತಿದೆ ಎಂಬ ಶಿಕ್ಷಕರ ಅಭಿಪ್ರಾಯ ಇತ್ತೀಚೆಗೆ ಕೇಳಿಬರುತ್ತಿದೆ.

**ಶಿಕ್ಷಣೇತರ ಕೆಲಸಗಳು :**

೧) ಚುನಾವಣೆ ಅಧಿಕಾರಿ, ಮತಚೀಟಿ ನೋಂದಣಿಗೆ ಸಹಕಾರ
೨) ಬಿಸಿಯೂಟ ಹಾಗೂ ಕ್ಷೀರಭಾಗ್ಯ ಉಸ್ತುವಾರಿ
೩) ಆದಾಯ ಹಾಗೂ ಜಾತಿ ಪತ್ರದ ನೋಂದಣಿ
೪) ಶಿಕ್ಷಣ ಇಲಾಖೆಯ ಇತರ ಕೆಲಸಗಳು
೫) ಜನಗಣತಿ
೬) ಶಾಲೆಯಲ್ಲಿ ಗುಮಾಸ್ತ ಹಾಗೂ ಪರಿಚಾರಕರು ಮಾಡುವ ಎಲ್ಲ ಕೆಲಸ
೭) ಬಯಲು ಬಹಿರ್ದೆಸೆ ಮುಕ್ತ ಸಮಾಜ ಸೇರಿ ಇತರ ಸರ್ಕಾರಿ ಯೋಜನೆಗಳ ಕುರಿತು ಸಮೀಕ್ಷೆ
೮) ಪಲ್ಸ್ ಪೋಲಿಯೋ ಲಸಿಕೆ ಕಾರ್ಯಕ್ರಮ

**ಪಾಠ ನಾಸ್ತಿ ಪಠ್ಯೇತರವೇ ಜಾಸ್ತಿ :** ಸರ್ಕಾರಿ ಶಾಲೆಗಳ ಶಿಕ್ಷಕರು ವಾರ್ಷಿಕ ಶೈಕ್ಷಣಿಕ ಅವಧಿಯಲ್ಲಿ ಕೇವಲ ಶೇ. ೧೯.೧ ಸಮಯವನ್ನು ವಿದ್ಯಾರ್ಥಿಗಳ ಕಲಿಕೆಗೆ ಮೀಸಲಿಡುತ್ತಿದ್ದಾರೆ. ಉಳಿದ ಶೇ. ೮೧ ಅವಧಿ ಸರ್ಕಾರದ ವಿವಿಧ ಕೆಲಸದಲ್ಲೇ ಕಳೆದುಹೋಗುತ್ತಿದೆ ಎಂಬ ಆತಂಕಕಾರಿ ವಿಷಯವನ್ನು ಶೈಕ್ಷಣಿಕ ಯೋಜನೆ ಹಾಗೂ ಆಡಳಿತದ ರಾಷ್ಟ್ರೀಯ ಸಂಸ್ಥೆ (ಎನ್‌ಐಇಪಿಎ) ಸಮೀಕ್ಷಾ ವರದಿ ಹೇಳುತ್ತದೆ.

**ನೆಪಮಾತ್ರದ ಅನುಪಾತ :** ಶಿಕ್ಷಣ ಹಕ್ಕು ಕಾಯ್ದೆ ಪ್ರಕಾರ ವಿದ್ಯಾರ್ಥಿಗಳು ಹಾಗೂ ಶಿಕ್ಷಕರ ಅನುಪಾತ ೩೧:೧ ಇರಬೇಕು. ಆದರೆ ಕರ್ನಾಟಕ ಸೇರಿ ಯಾವುದೇ ರಾಜ್ಯಗಳಲ್ಲಿ ಈ ಅನುಪಾತ ಅನುಷ್ಠಾನಕ್ಕೆ ಬಂದಿಲ್ಲ. ವರದಿಯಲ್ಲಿ ಮಹಾರಾಷ್ಟ್ರದ ಒಂದು ಶಾಲೆಯ ಉದಾಹರಣೆ ನೀಡಲಾಗಿದ್ದು, ಆ ಶಾಲೆಯಲ್ಲಿ ೮ ಶಿಕ್ಷಕರಿದ್ದರೆ, ಐವರು ಶಿಕ್ಷಣೇತರ ಚಟುವಟಿಕೆಯಲ್ಲಿ ನಿರತರಾಗಿರುತ್ತಾರೆ. ಉಳಿದ ಮೂವರು ಶಿಕ್ಷಕರು ೫೫೫ ವಿದ್ಯಾರ್ಥಿಗಳನ್ನು ನಿಭಾಯಿಸಬೇಕಿದೆ. ಶೇ. ೧೫ ಶಿಕ್ಷಕರು ಪಾಠ ಮಾಡುವುದು ಬಿಟ್ಟು ಕಾಯಂ ಆಗಿ ಸರ್ಕಾರಿ ಚಾಕರಿಯಲ್ಲಿ ನಿರತರಾಗಿದ್ದಾರೆ. ವರದಿ ಪ್ರಕಾರ

* ದೇಶದಲ್ಲಿರುವ ಶಾಲೆಗಳು: ೧೪.೬೭ ಲಕ್ಷ
* ಸರ್ಕಾರಿ ಶಾಲೆಗಳು: ೧೦.೭ ಲಕ್ಷ
* ಸರ್ಕಾರಿ ಶಾಲೆ ವಿದ್ಯಾರ್ಥಿಗಳು: ೧೧ ಕೋಟಿ
* ಒಟ್ಟು ಶಿಕ್ಷಕರು: ೮೦.೭ ಲಕ್ಷ
* ಸರ್ಕಾರಿ ಶಾಲೆ ಶಿಕ್ಷಕರು: ೪೭.೩ ಲಕ್ಷ

**ಶಿಫಾರಸ್ಸುಗಳೇನು**?

* ಶಿಕ್ಷಣ ಹಕ್ಕು ಕಾಯ್ದೆಯಲ್ಲಿ ಉಲ್ಲೇಖವಾಗಿರುವಂತೆ ಶಿಕ್ಷಣೇತರ ಚಟುವಟಿಕೆಗಳಿಗೆ ಶಿಕ್ಷಕರನ್ನು ಬಳಸಿಕೊಳ್ಳಬಾರದು.
* ಶಿಕ್ಷಣ ಹಾಗೂ ಶಿಕ್ಷಣೇತರ ಚಟುವಟಿಕೆಗಳ ವ್ಯಾಖ್ಯಾನವನ್ನು ಶಿಕ್ಷಣ ಇಲಾಖೆ ಮಾಡಬೇಕು.
* ಶಿಕ್ಷಕರನ್ನು ಆಡಳಿತದ ಕೆಲಸಕ್ಕೆ ಬಳಸಿಕೊಳ್ಳುವುದನ್ನು ನಿರ್ಬಂಧಿಸಬೇಕು.
* ಒಂದು ದೇಶ, ಒಂದು ಚುನಾವಣೆ ವ್ಯವಸ್ಥೆಯಿಂದ ಪದೇ ಪದೇ ಶಿಕ್ಷಕರ ಮೇಲಿನ ಚುನಾವಣೆ ಕೆಲಸದ ಒತ್ತಡ ತಪ್ಪಲಿದೆ.

೧) ಕಾಯ್ದೆ ಪ್ರಕಾರ ಕಿರಿಯ ಪ್ರಾಥಮಿಕ ಶಾಲೆಗೆ ವಾರ್ಷಿಕ ೨೦೦ ಕೆಲಸದ ದಿನ ೨) ಹಿರಿಯ ಪ್ರಾಥಮಿಕ ಶಾಲೆಗೆ ೨೨೦ ಕೆಲಸದ ದಿನ ೩) ಆದರೆ ಕೇವಲ ೪೨ ದಿನಗಳು ಕಲಿಕೆಗೆ ಮೀಸಲು

**ಶಿಕ್ಷಣಕ್ಕಾಗಿ ಅನುದಾನ :** ಶೈಕ್ಷಣಿಕ ಕ್ಷೇತ್ರಕ್ಕೆ ನೀಡಲಾಗುತ್ತಿರುವ ಅನುದಾನದಲ್ಲಿ ಭಾರತ ಜಾಗತಿಕವಾಗಿ ೧೩೬ನೇ ಸ್ಥಾನದಲ್ಲಿದೆ. ಮಕ್ಕಳ

## ಓದುಗರಲ್ಲೊಂದು ವಿಶೇಷ ಮನವಿ

'ಹೊಸತು' ಪತ್ರಿಕೆ ಜಾಹಿರಾತುಗಳಿಗಿಂತ ಹೆಚ್ಚಾಗಿ ಚಂದಾದಾರರ ಮೇಲೆ ಅವಲಂಬಿಸಿರುವುದರಿಂದ ಅದು ಆರ್ಥಿಕವಾಗಿ ಇನ್ನೂ ಸ್ವಾವಲಂಬಿಯಾಗಿಲ್ಲ. ಆದುದರಿಂದ ಆರ್ಥಿಕ ಬೆಂಬಲ ನೀಡುವ ಪ್ರಾಯೋಜಕರ ನೆರವಿನ ಅಗತ್ಯವಿದೆ. ಕನಿಷ್ಠ ರೂ. ೫೦೦೦/- ಹಣ ನೀಡಿ ಪ್ರಾಯೋಜಕರಾಗುವವರ ಹೆಸರನ್ನು ಪತ್ರಿಕೆಯಲ್ಲಿ ಪ್ರಕಟಿಸಲಾಗುವುದು. ಹಾಗೆಯೇ, ಅವರು ಸೂಚಿಸುವ ಯಾವುದಾದರೂ ಇಬ್ಬರು ವ್ಯಕ್ತಿಗಳಿಗೆ / ವಿಳಾಸಗಳಿಗೆ ತಲಾ ಮೂರು ವರ್ಷಗಳ ಅವಧಿಗೆ 'ಹೊಸತು' ಪತ್ರಿಕೆಯನ್ನು ಉಚಿತವಾಗಿ ಕಳಿಸಲಾಗುವುದು (ಅಥವಾ ನಾಲ್ಕು ವ್ಯಕ್ತಿಗಳಿಗೆ ತಲಾ ಒಂದು ವರ್ಷ). ಹಿತೈಷಿಗಳು ಈ ರೀತಿ ಪ್ರಾಯೋಜಕರಾಗುವ ಮೂಲಕ ಪತ್ರಿಕೆ ಆರ್ಥಿಕವಾಗಿ ಸದೃಢಗೊಳ್ಳಲು ಸಹಾಯವಾಗುವುದು.

ನಮ್ಮ ಓದುಗರು ಸ್ವತಃ ಪ್ರಾಯೋಜಕರಾಗಬಹುದು ಅಥವಾ ಅಂತಹವರನ್ನು ಗುರುತಿಸಿ ಅವರು ಪ್ರಾಯೋಜಕರಾಗುವಂತೆ ಪ್ರೇರೇಪಿಸಬಹುದು. ಪ್ರಾಯೋಜಕರಾಗಬಹುದಾದ ಸಮಾನಮನಸ್ಕರ ಹೆಸರು, ವಿಳಾಸ ತಿಳಿಸಿದಲ್ಲಿ ನಾವೇ ಅವರನ್ನು ಸಂಪರ್ಕಿಸುತ್ತೇವೆ.

ಈ ನಿಟ್ಟಿನಲ್ಲಿ ನಮ್ಮ ಓದುಗರು ಹೆಚ್ಚಿನ ಮುತುವರ್ಜಿ ವಹಿಸಿ ಪತ್ರಿಕೆಯ ಬೆಳವಣಿಗೆಗೆ ನೆರವಾಗಬೇಕೆಂದು ನಮ್ಮ ಕಳಕಳಿಯ ಮನವಿ.

ಪ್ರಾಯೋಜಕತ್ವದ ರೂ. ೫,೦೦೦ ಮೊಬಲಗನ್ನು 'ಹೊಸತು' ಹೆಸರಿಗೆ ಚೆಕ್ ಅಥವಾ ನಗದು ಮೂಲಕ ಇಲ್ಲವೇ ಕೆನರಾ ಬ್ಯಾಂಕ್, ಮಾಧವನಗರ ಶಾಖೆ, Current A/c No. 0788201015590, IFSC code CNRB0000788 ಇಲ್ಲಿಗೆ ನೇರವಾಗಿ ವರ್ಗಾಯಿಸಬಹುದು.

– ಪ್ರಕಾಶಕ

ಹೋಮ್‌ವರ್ಕ್ (ಮನೆಪಾಠ)ಗೆ ಪಾಲಕರು ಮೀಸಲಿಡುವ ಸಮಯದಲ್ಲಿ ವಿಶ್ವದಲ್ಲೇ ಮೊದಲ ಸ್ಥಾನದಲ್ಲಿದೆ ಎಂದು ಅಂತಾರಾಷ್ಟ್ರೀಯ ಸಮೀಕ್ಷೆಯಿಂದ ತಿಳಿದುಬಂದಿದೆ.

**ಆಶಾವಾದಿಗಳು :** ಭಾರತದಲ್ಲಿ ಶೈಕ್ಷಣಿಕ ಗುಣಮಟ್ಟ ಹೆಚ್ಚುವ ಬಗ್ಗೆ ಶೇ. ೮೬ ಯುವಜನರು ಆಶಾವಾದಿಗಳಾಗಿದ್ದಾರೆ ಗುಣಮಟ್ಟದ ಶಿಕ್ಷಣ ದೊರೆಯದೆ ತಮ್ಮ ಭವಿಷ್ಯದ ವಿಷಯವಾಗಿ ಶೇ. ೩೩ ಯುವಜನರು ಚಿಂತಿತರಾಗಿದ್ದಾರೆ ಎಂಬುದು ಸಮೀಕ್ಷೆಯಲ್ಲಿ ಪತ್ತೆಯಾಗಿದೆ.

**ಕನಿಷ್ಠ ಅನುದಾನ :** ಇತರ ದೇಶಗಳಲ್ಲಿ ಶಿಕ್ಷಣ ಕ್ಷೇತ್ರಕ್ಕೆ ನೀಡುತ್ತಿರುವ ಅನುದಾನಕ್ಕೆ ಹೋಲಿಸಿದರೆ ಭಾರತದಲ್ಲಿ ನೀಡುತ್ತಿರುವ ಅನುದಾನ ತೀರಾ ಕಡಿಮೆ. ೨೦೧೨–೧೩ನೇ ಸಾಲಿನಲ್ಲಿ ಭಾರತದ ಒಟ್ಟಾರೆ ಜಿಡಿಪಿಯ ಶೇ. ೩.೧ ಬಜೆಟ್ ಅನುದಾನವನ್ನು ಶಿಕ್ಷಣಕ್ಕೆ ಒದಗಿಸಲಾಗಿತ್ತು. ಬಳಿಕ ೨೦೧೭–೧೮ನೇ ಸಾಲಿನಲ್ಲಿ ಸ್ವಲ್ಪ ಸುಧಾರಣೆ ಕಂಡು ಶೇ. ೨.೭ಕ್ಕೆ ತಲುಪಿದೆ. ೨೦೧೮–೧೯ನೇ ಸಾಲಿನಲ್ಲಿ ಈ ಕ್ಷೇತ್ರಕ್ಕೆ ಒಟ್ಟು ೮೫ ಸಾವಿರ ಕೋಟಿ ರೂ. ಅನುದಾನ ದೊರೆತಿದೆ. ಆದರೆ ಮಕ್ಕಳ ಹೋಂವರ್ಕ್‌ಗಾಗಿಯೇ ಭಾರತೀಯ ಪಾಲಕರು ವಾರಕ್ಕೆ ಸರಾಸರಿ ೧೨ ಗಂಟೆ ಮೀಸಲಿಡುತ್ತಿದ್ದಾರೆ.

**ಭಾರತದ ಶೈಕ್ಷಣಿಕ ವ್ಯವಸ್ಥೆಯ ಸ್ಥಿತಿ–ನಾರ್ವೆ ಅತಿಹೆಚ್ಚು ಖರ್ಚು**

ಶೈಕ್ಷಣಿಕ ಕ್ಷೇತ್ರಕ್ಕಾಗಿ ಬಜೆಟ್‌ನಲ್ಲಿ ಹೆಚ್ಚು ಖರ್ಚು ಮಾಡುವ ರಾಷ್ಟ್ರಗಳ ಪೈಕಿ ನಾರ್ವೆ ಮೊದಲ ಸ್ಥಾನದಲ್ಲಿದೆ. ವಾರ್ಷಿಕ ೧.೮೭ ಲಕ್ಷ ಕೋಟಿ ರೂ.ಗಳನ್ನು ಖರ್ಚು ಮಾಡುತ್ತಿದೆ. ನ್ಯೂಜಿಲೆಂಡ್ ಮತ್ತು ಬ್ರಿಟನ್ ಕ್ರಮವಾಗಿ ೨ ಮತ್ತು ೩ನೇ ಸ್ಥಾನ ಪಡೆದುಕೊಂಡಿವೆ. ಮಕ್ಕಳ ಓದಿಗೆ ಖರ್ಚು ಮಾಡುವ ವಿಷಯದಲ್ಲಿ ಹಾಂಕಾಂಗ್ ಮೊದಲ ಸ್ಥಾನ ಪಡೆದುಕೊಂಡಿದೆ. ಯುಎಇ ಮತ್ತು ಸಿಂಗಾಪುರ ಕ್ರಮವಾಗಿ ೨ ಮತ್ತು ೩ನೇ ಸ್ಥಾನ ಪಡೆದುಕೊಂಡಿವೆ. ಭಾರತ ಈ ಪಟ್ಟಿಯಲ್ಲಿ ಕೊನೆಯ ಸ್ಥಾನ ಪಡೆದುಕೊಂಡಿದೆ.

| ಶಿಕ್ಷಣಕ್ಕಾಗಿ ದೊಡ್ಡ ರಾಷ್ಟ್ರಗಳು ಮಾಡುವ ವೆಚ್ಚ | | (ಜಿಡಿಪಿ ಮತ್ತು ವೆಚ್ಚ ಲಕ್ಷ ಕೋಟಿ ರೂ.ನಲ್ಲಿ) | |
|---|---|---|---|
| ರಾಷ್ಟ್ರ | ಜಿಡಿಪಿ | ಶಿಕ್ಷಣಕ್ಕಾಗಿ ಖರ್ಚು | ಸರಾಸರಿ |
| ನಾರ್ವೆ | ೨೮.೯೭ | ೧.೮೭ | ಶೇ. ೬.೩೮ |
| ನ್ಯೂಜಿಲೆಂಡ್ | ೧೪.೯೫ | ೧.೦೦ | ಶೇ. ೬.೩೧ |
| ಬ್ರಿಟನ್ | ೧೯೦.೪೭ | ೧೧.೮೭ | ಶೇ. ೬.೨೩ |
| ಅಮೆರಿಕ | ೧೪೦೮.೩೪ | ೮೫.೭೭ | ಶೇ. ೬.೦೯ |
| ಆಸ್ಟ್ರೇಲಿಯಾ | ೯೬.೧೨ | ೫.೭೨ | ಶೇ. ೫.೯ |
| ಫ್ರಾನ್ಸ್ | ೧೮೭.೫೭ | ೯.೭೫ | ಶೇ. ೫.೨೦ |
| ಜರ್ಮನಿ | ೨೬೭.೦೯ | ೧೧.೨೭ | ಶೇ. ೪.೨೨ |
| ಜಪಾನ್ | ೩೫೩.೮೬ | ೧೪.೪೩ | ಶೇ. ೪.೦೮ |
| ಭಾರತ | ೧೮೮.೬೬ | ೪.೪೧ | ಶೇ. ೨.೭ |

| ಓದಿಗೆ ಖರ್ಚು ಮಾಡುವ ರಾಷ್ಟ್ರಗಳು (ನರ್ಸರಿಯಿಂದ ಉನ್ನತ ಶಿಕ್ಷಣದವರೆಗೆ ಪ್ರತಿ ವಿದ್ಯಾರ್ಥಿಗೆ ಸರ್ಕಾರ ಮಾಡುವ ಸರಾಸರಿ ವೆಚ್ಚ) | |
|---|---|
| ರಾಷ್ಟ್ರ | ಖರ್ಚು (ಲಕ್ಷ ರೂ.) |
| ಹಾಂಕಾಂಗ್ | ೯೩–೯೬ |
| ಯುಎಇ | ೭೨–೭೫ |
| ಸಿಂಗಾಪುರ | ೫೦–೫೨ |
| ಅಮೆರಿಕ | ೪೨–೪೫ |
| ಚೀನಾ | ೩೧–೩೨ |
| ಆಸ್ಟ್ರೇಲಿಯಾ | ೨೬–೨೮ |
| ಬ್ರಿಟನ್ | ೧೮–೨೦ |
| ಕೆನಡಾ | ೧೬–೧೮ |
| ಭಾರತ | ೧೩–೧೫ |

| ಹೋಂವರ್ಕ್ ಮಾಡಿಸಲು ಪ್ರತಿ ವಾರ ಪಾಲಕರು ನೀಡುವ ಸಮಯ | |
|---|---|
| ರಾಷ್ಟ್ರ | ಸಮಯ (ಗಂಟೆಗಳಲ್ಲಿ) |
| ಭಾರತ | ೧೨ |
| ಟರ್ಕಿ | ೮.೭ |
| ಸಿಂಗಾಪುರ | ೭.೯ |
| ಚೀನಾ | ೭.೨ |
| ಅಮೆರಿಕ | ೬.೨ |
| ಆಸ್ಟ್ರೇಲಿಯಾ | ೪.೪ |
| ಬ್ರಿಟನ್ | ೩.೬ |
| ಜಪಾನ್ | ೨.೬ |

ಯಾವುದೇ ಒಂದು ರಾಷ್ಟ್ರ ಸರ್ವ ರೀತಿಯಲ್ಲೂ ಪ್ರಗತಿ ಸಾಧಿಸಬೇಕಾದರೆ ಶಿಕ್ಷಣಕ್ಕೆ ಹೆಚ್ಚಿನ ಆದ್ಯತೆ ನೀಡಲೇಬೇಕು. ಶಿಕ್ಷಣಕ್ಕೆ ಮಹತ್ವ ನೀಡದೇ ಹೋದರೆ ಸಾಮಾಜಿಕವಾಗಿ, ಆರ್ಥಿಕವಾಗಿ, ಆಡಳಿತಾತ್ಮಕವಾಗಿಯೇ ಅಲ್ಲದೆ ವೈಜ್ಞಾನಿಕವಾಗಿ ಮತ್ತು ತಾಂತ್ರಿಕವಾಗಿಯೂ ಹಿನ್ನಡೆ ಅನುಭವಿಸಬೇಕಾಗುತ್ತದೆ. ಆದ್ದರಿಂದ ಶಿಕ್ಷಣವೇ ರಾಷ್ಟ್ರ ಪ್ರಗತಿಯ ಅಡಿಗಲ್ಲು.

**ಡಾ॥ ಆರ್. ಶಂಕರಪ್ಪ**
ಸಹಾಯಕ ಪ್ರಾಧ್ಯಾಪಕರು, ರಾಜ್ಯಶಾಸ್ತ್ರ ವಿಭಾಗ, ಸರ್ಕಾರಿ ಪ್ರಥಮ ದರ್ಜೆ ಕಾಲೇಜು, ಕೋಲಾರ – ೫೬೩ ೧೦೧

ಬಿಳಿ ಅಂಗಿ, ಪಂಚೆಯುಟ್ಟ ಅರವತ್ತರ ಅಜ್ಜ, ನೆರೆದ ನೂರಾರು ರೈತರು, ವಿದ್ಯಾರ್ಥಿಗಳನ್ನು ಉದ್ದೇಶಿಸಿ ನಿರಂತರವಾಗಿ ಎರಡು ಗಂಟೆ ಮಾತನಾಡಿದರು. ನಿರರ್ಗಳ ಮಾತಿನಲ್ಲಿ ಮನೆ ಯಜಮಾನನ ಅಧಿಕಾರವಿತ್ತು, ಪ್ರಸ್ತುತ ರೈತರು/ಕೃಷಿ ತಲ್ಲಣಗಳ ನೈಜ ಅನಾವರಣವಿತ್ತು, ತನ್ನ ಮೊನಚು ಮಾತುಗಳಿಂದ ನೆರೆದಿದ್ದವರಿಗೆ ತಿವಿಯುತ್ತಾ, ಹಾಗೆಯೇ ತಿಳಿಹಾಸ್ಯದ ಮೂಲಕ ಎಲ್ಲರ ಅಂತರವಲೋಕನಕ್ಕೆ ಪ್ರಚೋದಿಸುವ ಶಕ್ತಿಯಿತ್ತು. ಅವರ ಪ್ರಾಮಾಣಿಕತೆ, ಸರಳತೆ, ಸಮಾಜಮುಖಿ ಕಾಳಜಿ ನನ್ನನ್ನು ಅತಿಬೇಗ ಅವರೆಡೆಗೆ ಆಕರ್ಷಿಸಿತು.

# ಸಂತೆ ಮುಗಿಸಿದ ಸಾವಯವ ಸಂತ



"ಆಯಸ್ಸು ಅನ್ನೋದಿದ್ರೆ, ಇನ್ನೂ ನೂರು ವರ್ಷ ಬದುಕ್ತೀನಿ."

ಮೊನ್ನೆ ಸ್ನೇಹಿತರೊಬ್ಬರು ಫೋನಾಯಿಸಿ 'ವಿಷಯ ಗೊತ್ತಾಯ್ತಾ, ನಾರಾಯಣರೆಡ್ಡಿಯವರು ತೀರಿಕೊಂಡರಂತೆ' ಎಂದಾಗ ಹಿಂದೊಮ್ಮೆ ಮಕ್ಕಳೊಂದಿಗೆ ಸಂವಾದದಲ್ಲಿ ರೆಡ್ಡಿಯವರು ಹೇಳಿದ ಮೇಲಿನ ಮಾತುಗಳು ನೆನಪಾದವು. ಎಂಬತ್ನಾಲ್ಕರ ಹರೆಯದ ಮಹತ್ವಾಕಾಂಕ್ಷಿ ರೆಡ್ಡಿಯವರು ಇನ್ನಷ್ಟು ವರ್ಷ ಕೃಷಿಯ ಬಗ್ಗೆ ಮಾತನಾಡುತ್ತಾ, ನೆಮ್ಮದಿಯಾಗಿ ನಮ್ಮೊಂದಿಗೆ ಇರುತ್ತಾರೆಂಬ ಅಚಲ ವಿಶ್ವಾಸವಿದ್ದ ನಮ್ಮಂತಹವರಿಗೆಲ್ಲಾ ಆಘಾತವಾಗುವಂತೆ ಮಾಡಿ ಸದ್ದಿಲ್ಲದೆ ಸಂತೆ ಮುಗಿಸಿ ತಣ್ಣಗೆ ಎದ್ದುಹೋಗಿಬಿಟ್ಟರು. ಮತ್ತೆಂದೂ ಬಾರದ ಲೋಕಕ್ಕೆ.

ಹೌದು. ಅವರು ಬದುಕಿದ್ದೇ ಹಾಗೆ. ತನ್ನ ಮೌಲ್ಯ, ಸಿದ್ಧಾಂತಗಳಿಗೆ ರಾಜಿಯಾಗದ ಹಾಗೆ; ತನಗೆ ಸರಿ ಅನಿಸಿದ್ದನ್ನು ನೇರವಾಗಿ ಹೇಳಿಬಿಡುವ, ಸರಳತೆ, ಸಚ್ಚಾರಿತ್ರ್ಯಕ್ಕೆ ತಾವೇ ಉದಾಹರಣೆಯಾಗುವ ಹಾಗೆ, ಎಲ್ಲರ ಒಳಿತನ್ನು ಬಯಸುವ ಸಂತನಂತೆ, ಸಮಾಜದ ಅಂಕುಡೊಂಕುಗಳನ್ನು ಅವಿರತವಾಗಿ ತಿದ್ದಿ ತೀಡುತ್ತಾ ನಡೆವ ಅಭಯ ಸಾಧಕನಂತೆ.

ನನ್ನ ಅವರ ಪರಿಚಯವಾದದ್ದು ಯಾವುದೋ ರೈತ ಸಮ್ಮೇಳನದಲ್ಲಿ. ಅಲ್ಲಿ ಬಿಳಿ ಅಂಗಿ, ಪಂಚೆಯುಟ್ಟ ಅರವತ್ತರ ಅಜ್ಜ, ನೆರೆದ ನೂರಾರು ರೈತರು, ವಿದ್ಯಾರ್ಥಿಗಳನ್ನು ಉದ್ದೇಶಿಸಿ ನಿರಂತರವಾಗಿ ಎರಡು ಗಂಟೆ ಮಾತನಾಡಿದರು. ನಿರರ್ಗಳ ಮಾತಿನಲ್ಲಿ ಮನೆ ಯಜಮಾನನ ಅಧಿಕಾರವಿತ್ತು, ಪ್ರಸ್ತುತ ರೈತರು/ಕೃಷಿ ತಲ್ಲಣಗಳ ನೈಜ ಅನಾವರಣವಿತ್ತು, ತನ್ನ ಮೊನಚು ಮಾತುಗಳಿಂದ ನೆರೆದಿದ್ದವರಿಗೆ ತಿವಿಯುತ್ತಾ, ಹಾಗೆಯೇ ತಿಳಿಹಾಸ್ಯದ ಮೂಲಕ ಎಲ್ಲರ ಅಂತರವಲೋಕನಕ್ಕೆ ಪ್ರಚೋದಿಸುವ ಶಕ್ತಿಯಿತ್ತು. ಅವರ ಪ್ರಾಮಾಣಿಕತೆ, ಸರಳತೆ, ಸಮಾಜಮುಖಿ ಕಾಳಜಿ ನನ್ನನ್ನು ಅತಿಬೇಗ ಅವರೆಡೆಗೆ ಆಕರ್ಷಿಸಿತು. ಅದರಲ್ಲೂ ವಿಶ್ವವಿದ್ಯಾಲಯದ ಅಕಾಡೆಮಿಕ್ ಹಿನ್ನೆಲೆಯಿಂದ ಬಂದ ನನಗೆ ಅವರು 'ಶ್ರಮ ಮೂಲ ಸಂಸ್ಕೃತಿ'ಯನ್ನು ವೈಭವೀಕರಿಸಿದ ರೀತಿ ಇಷ್ಟವಾಯಿತು. ಕಪ್ಪುಮೋಡದಲ್ಲಿರುವ ಕೃಷಿಗೆ ಇವರು 'ಬೆಳ್ಳಿರೇಖೆ'ಯಂತೆ ಕಂಗೊಳಿಸಿದರು. ಅಂದು ಪ್ರಾರಂಭವಾದ ಪರಿಚಯ ಹಲವು ಸಲ ಒಡನಾಟದಲ್ಲಿ ಕುಗ್ರಾಮಗಳಿಗೆ ಕರೆದ್ಯೊಯ್ದು ರೈತರೊಂದಿಗೆ ಸಂವಾದ ಏರ್ಪಡಿಸಿದ್ದು, ಮಕ್ಕಳಿಗೆ ಸರಳ, ಅರ್ಥಪೂರ್ಣ ಪಾಠ ಮಾಡಿಸಿದ್ದು, ನಾರಾಯಣರೆಡ್ಡಿಯವರ ಜೀವನ ಮತ್ತು ಚಿಂತನೆಗಳ ಕುರಿತಾದ 'ನೆಲದೊಡಲ ಚಿಗುರು' ಕೃತಿಯನ್ನು ಬರೆಯುವಲ್ಲಿಗೆ ತಂದು ನಿಲ್ಲಿಸಿತ್ತು. ನವಕರ್ನಾಟಕದಿಂದ ಪ್ರಕಟವಾದ ಆ ಪುಸ್ತಕಕ್ಕೆ ಸಿದ್ದವನಹಳ್ಳಿ ಪ್ರತಿಷ್ಠಾನದ ೨೦೧೪ರ ಉತ್ತಮ ಪುಸ್ತಕ ಪ್ರಶಸ್ತಿ ಹಾಗೂ ಕನ್ನಡ ಸಾಹಿತ್ಯ ಅಕಾಡೆಮಿ ಕೊಡಮಾಡುವ 'ಸಿಂಪಿ ಲಿಂಗಣ್ಣ ದತ್ತಿ ಬಹುಮಾನ' (೨೦೧೩) ದೊರೆತದ್ದು ರೆಡ್ಡಿಯವರ ನಿಸ್ವಾರ್ಥ ಜೀವನಕ್ಕೆ ಕೊಟ್ಟ ಪುರಸ್ಕಾರವೇ ಹೊರತು ಬೇರೇನೂ ಇಲ್ಲ.

ಒಬ್ಬ ಮನುಷ್ಯ ಹೇಗೆ ಬದುಕಿದ ಎಂಬುದು ಆತನ ಸಮಕಾಲೀನರಿಗೆ, ಆತನಿಗಿಂತ ಚಿಕ್ಕವರಿಗೆ ತುಂಬ ಮುಖ್ಯವಾಗುತ್ತದೆ. ಆದರೆ, ಆತನ ಮರಣದ ತರುವಾಯ ಹತ್ತಾರು ವರ್ಷಗಳ ನಂತರ ಆ ವ್ಯಕ್ತಿ 'ಸಮಾಜಕ್ಕೆ ನೀಡಿದ ಕೊಡುಗೆ ಏನು?' ಎಂಬುದೇ ಮುಖ್ಯವಾಗುತ್ತೆ. ಆ ಪ್ರಸ್ತುತತೆಯನ್ನು ಉಳಿಯುವಂತೆ ಬದುಕಿದವರು ನಾರಾಯಣರೆಡ್ಡಿ. ಓದಿದ್ದು ೧೧ನೇ ತರಗತಿಯಾದರೂ ದೇಶ, ವಿದೇಶಗಳಲ್ಲಿ ಪಾದರಸದಂತೆ ಓಡಾಡಿ, ತನ್ನ ಅಗಾಧ ಪಾಂಡಿತ್ಯವನ್ನು ಎಲ್ಲರೊಂದಿಗೂ ಹಂಚಿಕೊಂಡ, ಪ್ರಯೋಗಗಳನ್ನು ಕೈಗೊಂಡು ರೈತ ತೋಟಗಳಿಗೆ ಕೊಂಡೊಯ್ದ ಅವರ ಬದ್ಧತೆಯನ್ನು ಪ್ರಶ್ನಿಸುವಂತಿಲ್ಲ.

**ಆನಂದ ಎನ್. ಎಲ್.**

ಹಲವು ರೈತಪರ ಹೋರಾಟಗಾರರಿಗೆ, ಸಂಘಟನೆಗಳಿಗೆ ನಾರಾಯಣರೆಡ್ಡಿಯವರ ಬಗ್ಗೆ ಮುನಿಸಿದೆ. ಕಾರಣ, ಅವರು ಪ್ರಾರಂಭದಲ್ಲಿ ಹಲವು ಹೋರಾಟಗಳಲ್ಲಿ ಕಾಣಿಸಿಕೊಂಡದ್ದು ಬಿಟ್ಟರೆ ಮತ್ತೆಲ್ಲೂ ರೈತಪರ ಹೋರಾಟಗಳಲ್ಲಿ ಸಕ್ರಿಯವಾಗಿ ಪಾಲ್ಗೊಂಡಿಲ್ಲ. ಸಹಜವಾಗಿಯೇ ಇದು ಹೋರಾಟಗಾರರಲ್ಲಿ ನಿರಾಸೆ ಮೂಡಿಸಿದೆ. ಇದು ನಿಜವೂ ಕೂಡ. ರೆಡ್ಡಿಯವರು ಎಲ್ಲರೊಂದಿಗೆ ಗುಂಪಾಗಿ ಹೋರಾಟದಲ್ಲಿ ತೊಡಗಿಲ್ಲ. ಇದರರ್ಥ ವ್ಯವಸ್ಥೆಯೊಂದಿಗೆ 'ಅನುಸಂಧಾನ' ಹೊಂದಿದ್ದಾರೆಂದಲ್ಲ. ರೆಡ್ಡಿಯವರಿಗೆ ಕೊನೆಯವರೆಗೂ ರೈತರ ಹೆಸರಿನಲ್ಲಿ ಅಧಿಕಾರ ಪಡೆದು ಅವರ ಅಧೋಗತಿಗೆ ಕಾರಣರಾದ ರಾಜಕಾರಣಿಗಳ ಬಗ್ಗೆ, ಕೃಷಿಕರನ್ನು ಪರಾವಲಂಬಿಗಳನ್ನಾಗಿ ಮಾಡಿದ ಕಂಪನಿಗಳ ಬಗ್ಗೆ, ಸುಖಾಸುಮ್ಮನೆ ಕಛೇರಿಗಳಿಗೆ ಅಲೆಸುವ ಅಧಿಕಾರಿಗಳ ಬಗ್ಗೆ, ರೈತರನ್ನು 'ಅನ್ನದಾತ'ರೆಂದು ಕರೆಯುತ್ತಾ ಅವರ ವಿರುದ್ಧ ವ್ಯವಸ್ಥಿತವಾಗಿ ಹುನ್ನಾರ ನಡೆಸುವವರ ವಿರುದ್ಧ ಸಿಟ್ಟಿತ್ತು. ರೈತರ ಮೇಲಿನ ದಬ್ಬಾಳಿಕೆ ದೌರ್ಜನ್ಯಗಳನ್ನು ಖಂಡಿಸುತ್ತಿದ್ದರು. ಆದರೆ, ಇದಕ್ಕೆಲ್ಲಾ ಪರಿಹಾರ ಸಂಘಟನೆಗಳಿಂದ ದೊರೆಯುತ್ತದೆ ಎಂಬುದರಲ್ಲಿ ಅವರಿಗೆ ನಂಬಿಕೆಯಿರಲಿಲ್ಲ. ಗುಂಪುಗಾರಿಕೆ ಮಾಡಿಕೊಂಡು, 'ನಿಗೂಢ ಅಜೆಂಡ' ಇಟ್ಟುಕೊಂಡು ರೈತರನ್ನು ಹಲವು ಗುಂಪುಗಳಾಗಿ ಛಿದ್ರಮಾಡಿ ಹೋರಾಟದ ಹೆಸರಲ್ಲಿ ಮಂಕುಬೂದಿ ಎರಚುವುದನ್ನು ಅವರು ವಿರೋಧಿಸಿದ್ದರು. ಅವರದು ಎಂದೂ 'ಒಂಟಿ ಹೋರಾಟ'. 'ರೈತರು ಪ್ರಾಮಾಣಿಕರಾಗಿ, ಬುದ್ಧಿವಂತರಾದರೆ, ಯಾರೂ ಅವರನ್ನು ದಬ್ಬಾಳಿಕೆ ಮಾಡಲಾಗುವುದಿಲ್ಲ. ಜೀವನ ಹಸನಾಗುತ್ತದೆ' ಎಂಬುದು ರೆಡ್ಡಿಯವರ ಅಚಲವಾದ ನಂಬಿಕೆ. ಅದಕ್ಕಾಗಿಯೇ ರೆಡ್ಡಿಯವರು ರೈತರಲ್ಲಿ ಜಾಗೃತಿ ಮೂಡಿಸುವ ಕೆಲಸ ಮಾಡಿದರು, ರೈತರ ಮನಸ್ಸಲ್ಲಿ ಹಸಿರಾದರು.

ನಿಜ. ನಾರಾಯಣ ರೆಡ್ಡಿಯವರು ಜೀವನ ಸಂತೆ ಮುಗಿಸಿದ್ದಾರೆ. ಭೌತಿಕವಾಗಿ ಅವರು ನಮ್ಮೊಂದಿಗಿಲ್ಲ. ಆದರೆ, ಅವರು ನಮ್ಮೊಂದಿಗೆ ಹರಡಿರುವ ಕನಸುಗಳು ಉಸಿರಾಡುತ್ತಿವೆ. ಅವರು ಬಯಸಿದ್ದ 'ರೈತರ ಉದ್ಧಾರ' ಸಾಕಾರಗೊಂಡಿಲ್ಲ. ರೈತರು ಗೌರವಯುತವಾಗಿ ಬದುಕು ಕಟ್ಟಿಕೊಳ್ಳುವ 'ನಾನೊಬ್ಬ ರೈತ'ನೆಂದು ಹೆಮ್ಮೆಯಿಂದ ಹೇಳಿಕೊಳ್ಳುವಂತಹ ದಿನಗಳು ಬಹುದೂರವಿದೆ. ಅವುಗಳನ್ನು ಸಾಕಾರಗೊಳಿಸುವ ಗುರುತರ ಹೊಣೆಗಾರಿಕೆ ನಮ್ಮೆಲ್ಲರ ಮೇಲಿದೆ. ಅದಕ್ಕೆ ಭೂಮಿಕೆ ಎಂಬಂತೆ ರೆಡ್ಡಿಯವರು ಕಷ್ಟಪಟ್ಟು ಗಳಿಸಿದ ಹಣವನ್ನು ಜೋಡಿಸಿ ದೊಡ್ಡಬಳ್ಳಾಪುರದ ತೋಟದಲ್ಲಿ ೨೦ ಲಕ್ಷ ಖರ್ಚು ಮಾಡಿ 'ಪರಾಶರ ಗುರುಕುಲ'ವನ್ನು ಕಟ್ಟಿದ್ದಾರೆ. ಹಿಂದೊಮ್ಮೆ ಸಂವಾದದಲ್ಲಿ ಮಾತನಾಡುತ್ತಾ 'ಈ ಗುರುಕುಲ ನನ್ನ ಕನಸಿನ ಕೂಸು. ಮುಂದೆ ಇದನ್ನೊಂದು ಟ್ರಸ್ಟ್ ಆಗಿ ನೋಂದಣಿ ಮಾಡಿಸಿ ಮುಂದಿನ ದಿನಗಳಲ್ಲಿ ನಿರಂತರವಾಗಿ ಸಾವಯವ ಕೃಷಿ ತರಬೇತಿ ನಡೆಯುವಂತೆ ಮಾಡುವ ವಿದ್ಯಾರ್ಥಿಗಳು ಈ ಕೇಂದ್ರದಲ್ಲಿ ಉಳಿದು, ನಿಜವಾದ ಕೃಷಿಯನ್ನು ಕಲಿಯುವಂತೆ ಮಾಡುವ ಕನಸು ನನ್ನದು' ಎಂದಿದ್ದರು. ಬಹುಶಃ ಈ ಕಾರ್ಯ ಅವರ ಆಣತಿಯಂತೆ ಮುನ್ನಡೆದರೆ ಆ ಹಿರಿಯ ಜೀವದ ಕನಸು ನನಸಾಗುತ್ತದೆ. ಈ ನಿಟ್ಟಿನಲ್ಲಿ ಅವರ ಒಡನಾಡಿಗಳು ಕಾರ್ಯಪ್ರವೃತ್ತರಾದಾರೆಂಬ ಆಶಯದೊಂದಿಗೆ...

**ಆನಂದ ಎನ್. ಎಲ್.**
ಸಹಾಯಕ ಪ್ರಾಧ್ಯಾಪಕರು, ಸರ್ಕಾರಿ ಪ್ರಥಮ ದರ್ಜೆ ಕಾಲೇಜು
ಅಜ್ಜಂಪುರ, ತರೀಕೆರೆ ತಾಲ್ಲೂಕು, ಚಿಕ್ಕಮಗಳೂರು ಜಿಲ್ಲೆ



# ಸಮುದ್ರವೇ...

**ಸ**ಮುದ್ರವೇ! ನಾವಿಕನಿಗೆ ದಾರಿ ನೀಡು
ಆತನು ಆಚೆ ಖಂಡವನ್ನೆ ತಲುಪಬೇಕಿದೆ
ಶಾಂತನಾಗು... ನನ್ನ ಪ್ರಿಯ ಸಮುದ್ರವೇ... ಶಾಂತನಾಗು
ಆಚೆಯ ಖಂಡ ಸೇರಿಕೊಂಡಾಗ ಆತನು ನಿನ್ನ
ಕುರಿತು ಅವರಿಗೆ ಕೃತಜ್ಞತೆಗಳ ತಿಳಿಯಪಡಿಸ್ತಾನೆ
ನಮ್ಮ ಸಮುದ್ರ ಇಷ್ಟು ದೊಡ್ಡದು ಎಂದು ಅಲ್ಲಿಯವರು
ಎಷ್ಟು ಸಂತೋಷಿಸ್ತಾರೋ ನಾವಿಕನಿಗೆ ಗೊತ್ತು...!

ಅಚೆ ದಡಕ್ಕೆ ಈಚೆ ದಡಕ್ಕೆ ಮಧ್ಯೆ ಒಂದು ಸಮುದ್ರ
ಅದೆಷ್ಟು ದೊಡ್ಡದೋ ದಿಗಂತಗಳನ್ನೇ ಎಷ್ಟು
ಮೈ ಮರೆಸುತ್ತದೋ ನಾವಿಕನಿಗೆ ಗೊತ್ತು
ನಿನ್ನಪ್ಪುಗೆಯ ಸವಿ ಎಷ್ಟು ಶ್ರೇಷ್ಠವೋ
ನಿನ್ನನ್ನು ಅಲೆಗಳು ಸುತ್ತುವರಿದಾಗ
ಅಲೆಗಳ ನಡುವೆ ತಾನೊಂದು ಅಲೆಯಾಗಿ
ಎಷ್ಟು ದಿಗಂತ ಸುಖ ಅನುಭವಿಸಬಲ್ಲನೋ
ಆತನಿಗೆ ಗೊತ್ತು!

ಸಮುದ್ರವೇ! ಆತನು ನಿನ್ನ ಸುಖದಲ್ಲೇ ಮುಳುಗಿ
ಹೋದರೆ ಅಯ್ಯೋ! ಆತನು ನಿನ್ನಲ್ಲೇ
ಅಂತ್ಯವಾಗಿ ಹೋಗುವನಲ್ಲವೇ!
ಅದರೊಂದಿಗೆ ನಿನ್ನ ಕುರಿತು ಆಚೆ ಖಂಡಕ್ಕೆ
ತಿಳಿಯದೇ ಹೋಗುತ್ತದೆ.

ಸಮುದ್ರವೇ! ಓ ನನ್ನ ಬಂಗಾರ ಸಮುದ್ರವೇ!
ನಾವಿಕನಿಗೆ ದಾರಿ ನೀಡು ಶಾಂತನಾಗು
ಪ್ರೇಯಸಿ ಅಸಂಖ್ಯ ಮುತ್ತುಗಳನ್ನಿಟ್ಟು
ಪ್ರಿಯನನ್ನೇ ಕಳುಹಿಸಿದಂತೆ
ತಾಯಿ ತನ್ನ ಕಂದನ ಲೋಕಸೇವೆಗೆ
ಬೀಳ್ಕೊಟ್ಟಂತೆ ಸಮುದ್ರವೇ...
ನಾವಿಕನಿಗೆ ದಾರಿ ನೀಡು
ಆತನು ಆಚೆಯ ಖಂಡಕ್ಕೆ
ತಲುಪಬೇಕಾಗಿದೆ. ಸಪ್ತ ಖಂಡಗಳಿಗೆ
ಆತನೆಷ್ಟೋ ಒಳಿತು ಮಾಡಬೇಕಿದೆ
ನಿನ್ನ ಕುರಿತಾದ ಅನುಭವಗಳ
ಸೊಗಸನ್ನೆಷ್ಟೋ ಅವರಿಗೆ ಹೇಳಬೇಕಿದೆ.

ತೆಲುಗು ಮೂಲ : **ಡಿ. ನಟರಾಜ್**
ಕನ್ನಡಕ್ಕೆ : **ಕಸ್ತೂರಿ**
ನಂ. ಪಿ–೨೬, ತೋಟಗಾರಿಕೆ ಇಲಾಖೆ ರಸ್ತೆ
ಎಸ್.ಎಸ್.ಪುರಂ, ತುಮಕೂರು – ೫೭೨ ೧೦೨

# ಕೇಂದ್ರ ಸರ್ಕಾರದ ಆಯುಷ್ಮಾನ್ ಭಾರತ (ಆರೋಗ್ಯ ವಿಮೆ) – ನ್ಯೂನತೆಗಳು




**ಡಾ|| ಪ್ರಕಾಶ್ ಸಿ. ರಾವ್**

ಅಮೆರಿಕಾದಲ್ಲಿ ಆರೋಗ್ಯ ವಿಮೆಯಿಂದಾಗಿ ಆರೋಗ್ಯ ರಕ್ಷಣೆಯಲ್ಲಿ ಕಳಪೆ ಗುಣಮಟ್ಟ ಕಂಡುಬಂದಿದೆ. ಆದರೆ ಭಾರತದಲ್ಲಿ ತಪ್ಪು ಮಾಹಿತಿ ನೀಡಿ ಈ ಆರೋಗ್ಯ ವಿಮೆ ಬಗ್ಗೆ ಸಾಕಷ್ಟು ಕುತೂಹಲವನ್ನು ಹುಟ್ಟಿಸಲಾಗಿದೆ. ಆ ತಪ್ಪು ಮಾಹಿತಿಯ ಹಿನ್ನೆಲೆಯಲ್ಲಿ ಅದರ ಸತ್ಯಾಸತ್ಯತೆಗಳನ್ನು ತಿಳಿದುಕೊಳ್ಳುವುದು ಅಗತ್ಯ.

ಕೇಂದ್ರ ಸರಕಾರದ ಪ್ರಕಾರ ಈ ಯೋಜನೆ ಸರಕಾರೀ ಹಣಕಾಸಿನ ಜಗತ್ತಿನ ಅತಿ ದೊಡ್ಡ ಆರೋಗ್ಯ ವಿಮಾ ಯೋಜನೆಯಂತೆ, ಆರ್ಥಿಕ ಸಚಿವರಾದ ಅರುಣ ಜೇಟ್ಲಿಯವರು ಪಾರ್ಲಿಮೆಂಟಿನಲ್ಲಿ ಮುಂಗಡ ಪತ್ರವನ್ನು ಮಂಡಿಸುವಾಗ ಇದೇ ಮಾತನ್ನು ಹೇಳಿದರು. ಅದನ್ನೇ ಪ್ರಧಾನಮಂತ್ರಿಗಳು ಹೇಳಿದ್ದಾರೆ.

ಈ ಯೋಜನೆಗೆ ಸರಕಾರ ಮಂಜೂರು ಮಾಡುವುದು ವರ್ಷಕ್ಕೆ ೧೨೦೦೦ ಕೋಟಿ ರೂಪಾಯಿಗಳು. ಅದರಲ್ಲಿ ಈಗ ಕೇವಲ ೨೦೦೦ ಕೋಟಿ ರೂಪಾಯಿಗಳನ್ನು ನೀಡಲಾಗಿದೆ. ಆದರೆ ಚೀನಾದಲ್ಲಿ (ಇದರಲ್ಲಿ UHC ಅಳವಡಿಸಲಾಗಿದೆ) ಇದು ಜಗತ್ತಿನ ಅತಿ ದೊಡ್ಡ ಆರೋಗ್ಯ ಯೋಜನೆ. ಈ ಯೋಜನೆಯಲ್ಲಿ ಇದಕ್ಕೆ ಭಾರತ ಹೂಡಿರುವ ಐದು ಪಟ್ಟು ಹಣವನ್ನು ಹೂಡಲಾಗಿದೆ. ಭಾರತದಲ್ಲಿ ಮೊದಲು ಜಾರಿಯಲ್ಲಿದ್ದ ರಾಷ್ಟ್ರೀಯ ಗ್ರಾಮೀಣ ಆರೋಗ್ಯ ಅಭಿಯಾನ, ಒಂದು ದಶಕಕ್ಕಿಂತ ಮೊದಲೇ ಜಾರಿಯಲ್ಲಿದೆ ಹಾಗೂ ಅದು ಆರೋಗ್ಯ ಕ್ಷೇತ್ರದಲ್ಲಿ ಸಾಕಷ್ಟು ಬದಲಾವಣೆ ತಂದಿದೆ. ಅದಕ್ಕೆ ಕೇಂದ್ರ ಸರಕಾರ ಹೂಡಿದ ಹಣ ೩೫,೦೦೦ ಕೋಟಿ ರೂಪಾಯಿಗಳು. ಅದಲ್ಲದೆ, ರಾಜ್ಯ ಸರ್ಕಾರವೂ ಆ ಯೋಜನೆಯಲ್ಲಿ ಹಣ ಹೂಡಿದೆ. ಆದ್ದರಿಂದ ಯಾವುದು ಅತಿ ದೊಡ್ಡ ಆರೋಗ್ಯ ವಿಮಾ ಯೋಜನೆ, ಈ ತರಹದ ಸುಳ್ಳು ಹೇಳಲು ಸಾಧ್ಯವಿದೆಯೇ ಎಂದು ಯಾರಾದರೂ ಕೇಳಬಹುದಾಗಿದೆ. ಈ ಯೋಜನೆಗೆ ಹಣಕಾಸು ನೀಡಿಕೆ ಸಾಕಾಗುವುದಿಲ್ಲ.

ಈ ಸರಕಾರ ಹಿಂದಿನ ಎಲ್ಲಾ ಯೋಜನೆಗಳನ್ನು ಕಿತ್ತುಹಾಕಿ ತನ್ನ ಯೋಜನೆಯನ್ನು ಜಾರಿಗೆ ತರಲಿದೆ. ಅದು ಕಳಪೆ ಗುಣಮಟ್ಟದ್ದು. ಇದು ಹೊಸ ವಿಮಾ ಯೋಜನೆಯೇನಲ್ಲ! ಮೊದಲು ಆರೋಗ್ಯ ಶ್ರೀ ಯೋಜನೆ ಜಾರಿಯಲ್ಲಿತ್ತು ಹಾಗೂ ಸಾಕಷ್ಟು ಜನಪ್ರಿಯತೆ ಗಳಿಸಿತ್ತು. ಅದೇ ರೀತಿ ಆರ್.ಎಸ್.ಬಿ.ವೈ. ಯೋಜನೆ ಜನಪ್ರಿಯವಾಗಿತ್ತು. ಅವೆಲ್ಲವನ್ನು ಕಡೆಗಣಿಸಿ ಈಗ ಆಯುಷ್ಮಾನ್ ಯೋಜನೆಯನ್ನು ಭಾರತ ಪ್ರಾರಂಭಿಸಿದೆ. ಈ ಯೋಜನೆಯನ್ನು ಮುಂದುವರೆಸಲು ಸರ್ಕಾರ ಚಿಂತಿಸುತ್ತಿದೆ.

ಆಯುಷ್ಮಾನ್ ಭಾರತ ಒಂದು ವಿಮೆ ಯೋಜನೆಯಾಗಿದ್ದು, ಅದು ಪ್ರತಿ ಕುಟುಂಬಕ್ಕೆ (ಒಟ್ಟು ೧೦ ಕೋಟಿ ಖಾಸಗಿ ಆಸ್ಪತ್ರೆಗಳಲ್ಲಿ ಚಿಕಿತ್ಸೆ ೫೦ ಕೋಟಿ ಜನರಿಗೆ) ಐದು ಲಕ್ಷ ರೂ. ವಿಮೆಯನ್ನು ನೀಡುವ ಯೋಜನೆ.

ಈ ಯೋಜನೆ ಕೇವಲ ದ್ವಿತೀಯ, ತೃತೀಯ ಆರೋಗ್ಯ ಸೇವೆಗಳಿಗೆ (ಆಸ್ಪತ್ರೆ ಸೇವೆ) ಮಾತ್ರ ಮೀಸಲಿಡಲಾಗಿದೆ. ಪ್ರಾಥಮಿಕ ಆರೋಗ್ಯ, ಪ್ರಾಥಮಿಕ




ಆಯುಷ್ಮಾನ್ ಭಾರತ ಯೋಜನೆಯನ್ನು ಖಾಸಗಿ ಸಂಸ್ಥೆಗಳಲ್ಲೂ ದೊರಕಿಸಿಕೊಡಲು ಸರ್ಕಾರ ಈ ಖಾಸಗಿ ಆಸ್ಪತ್ರೆಗಳನ್ನು ಎಂಪ್ಯಾನಾಲ್ಡ್ ಆಸ್ಪತ್ರೆ ಎಂದು ಕರೆಯಲಾಗಿದೆ. ಅಲ್ಲಿ ಕೇವಲ ಒಳರೋಗಿ ಸೇವೆಗಳನ್ನು ಮಾತ್ರ ನೀಡಲು ಮುಂದಾಗಿದೆ. ಅಲ್ಲಿಗೆ ಹೋದವರು ಹೊರರೋಗಿ ಚಿಕಿತ್ಸೆ ಪಡೆದರೆ ಹಣ ನೀಡಬೇಕಾಗುತ್ತದೆ. ಇದರ ಹಿಂದಿನ ಮರ್ಮ ಈ ರೀತಿ ಇದೆ: ಸರಕಾರ ಈ ಎಂಪ್ಯಾನಾಲ್ಡ್ ಆಸ್ಪತ್ರೆಗಳಿಗೆ, ನೇರವಾಗಿ ಹಣ ನೀಡುತ್ತದೆ. ಇದರರ್ಥ ಸರಕಾರಿ ಆಸ್ಪತ್ರೆಗಳನ್ನು ಬಲಪಡಿಸುವ ಬದಲು ಖಾಸಗಿ ಆಸ್ಪತ್ರೆಗಳನ್ನು ಬಲಪಡಿಸಲು ಸರಕಾರ ಹೊರಟಿದೆ. ಇದರಲ್ಲಿನ ಹಣ ಬಳಸಿ ಸರಕಾರಿ ಆಸ್ಪತ್ರೆಗಳನ್ನು ಬಲಪಡಿಸಬಹುದಾಗಿತ್ತಲ್ಲ ! ಅದರ ಬದಲು ಖಾಸಗಿ ಆಸ್ಪತ್ರೆಗಳಿಗೆ ಸರಕಾರಿ ಹಣವನ್ನು ಹೂಡಿದಂತಾಗುತ್ತದೆ!



ಆರೋಗ್ಯ ಕೇಂದ್ರಗಳಲ್ಲಿ ದೊರಕಿದರೂ ಪ್ರಾಥಮಿಕ ಆರೋಗ್ಯ ಸೇವೆಗಳಿಗೆ ಇದರಲ್ಲಿ ಅವಕಾಶವಿಲ್ಲ. ಆದರೆ ೯೦% ಜನರಿಗೆ ಪ್ರಾಥಮಿಕ ಆರೋಗ್ಯ ಸೇವೆಗಳು ಲಭ್ಯವಿವೆ.

ಈ ಆಯುಷ್ಮಾನ್ ಭಾರತ ಯೋಜನೆಯನ್ನು ಖಾಸಗಿ ಸಂಸ್ಥೆಗಳಲ್ಲೂ ದೊರಕಿಸಿಕೊಡಲು ಸರ್ಕಾರ ಈ ಖಾಸಗಿ ಆಸ್ಪತ್ರೆಗಳನ್ನು ಎಂಪ್ಯಾನಾಲ್ಡ್ ಆಸ್ಪತ್ರೆ ಎಂದು ಕರೆಯಲಾಗಿದೆ. ಅಲ್ಲಿ ಕೇವಲ ಒಳರೋಗಿ ಸೇವೆಗಳನ್ನು ಮಾತ್ರ ನೀಡಲು ಮುಂದಾಗಿದೆ. ಅಲ್ಲಿಗೆ ಹೋದವರು ಹೊರರೋಗಿ ಚಿಕಿತ್ಸೆ ಪಡೆದರೆ ಹಣ ನೀಡಬೇಕಾಗುತ್ತದೆ. ಇದರ ಹಿಂದಿನ ಮರ್ಮ ಈ ರೀತಿ ಇದೆ: ಸರಕಾರ ಈ ಎಂಪ್ಯಾನಾಲ್ಡ್ ಆಸ್ಪತ್ರೆಗಳಿಗೆ, ನೇರವಾಗಿ ಹಣ ನೀಡುತ್ತದೆ. ಇದರರ್ಥ ಸರಕಾರಿ ಆಸ್ಪತ್ರೆಗಳನ್ನು ಬಲಪಡಿಸುವ ಬದಲು ಖಾಸಗಿ ಆಸ್ಪತ್ರೆಗಳನ್ನು ಬಲಪಡಿಸಲು ಸರಕಾರ ಹೊರಟಿದೆ. ಇದರಲ್ಲಿನ ಹಣ ಬಳಸಿ ಸರಕಾರಿ ಆಸ್ಪತ್ರೆಗಳನ್ನು ಬಲಪಡಿಸಬಹುದಾಗಿತ್ತಲ್ಲ! ಅದರ ಬದಲು ಖಾಸಗಿ ಆಸ್ಪತ್ರೆಗಳಿಗೆ ಸರಕಾರಿ ಹಣವನ್ನು ಹೂಡಿದಂತಾಗುತ್ತದೆ!

ನಮ್ಮ ರಾಜ್ಯದಲ್ಲಿ ಕೆಲವು ಸ್ಥಳಗಳಲ್ಲಿ ಸರಕಾರಿ ಹಾಗೂ ಖಾಸಗಿ ಆಸ್ಪತ್ರೆಗಳಿಲ್ಲದ್ದರಿಂದ ಅಲ್ಲಿಯ ಜನರಿಗೆ ಯಾವುದೇ ಚಿಕಿತ್ಸೆ ದೊರೆಯಲಾರದು!

ಇಂದು ಆರೋಗ್ಯ ಯೋಜನೆಗೆ ಒಟ್ಟು ಖರ್ಚಿನ ೬೩% ಹಣ ಜನರಿಂದ ಬರುತ್ತಿದೆ. ಇದು ಜಗತ್ತಿನಲ್ಲಿ ಇತರೆ ದೇಶಗಳಿಗೆ ಹೋಲಿಸಿದರೆ (೩೨% – ಚೀನಾ, ೧೧% ಅಮೆರಿಕಾ) ಅತಿ ಹೆಚ್ಚಿನ ಮೊತ್ತವೆನ್ನಬಹುದು. ಈ ಹಿನ್ನೆಲೆಯಲ್ಲಿ ಸರಕಾರ ಕುಟುಂಬಕ್ಕೆ ೫ ಲಕ್ಷ ರೂಪಾಯಿ ಖರ್ಚು ನೀಡುತ್ತದೆಂಬುದಕ್ಕೆ ಕಾರಣ ಜನರನ್ನು ಆಕರ್ಷಿಸಲು ಚುನಾವಣೆ ಹತ್ತಿರವಿದೆಯಲ್ಲ!

ಇದಲ್ಲದೆ ಯಾರು ಆರೋಗ್ಯ ಪಡೆಯಲು ತಮ್ಮದೇ ವ್ಯವಸ್ಥೆ ಮಾಡಿಕೊಂಡಿರುತ್ತಾರೆಯೋ ಅವರೆಲ್ಲರನ್ನು ಸರಕಾರ ತನ್ನ ಪಟ್ಟಿಯಲ್ಲಿ ಸೇರಿಸಿಕೊಳ್ಳುವಂತಿಲ್ಲ. ಎಲ್ಲರಿಗೂ ಎಲ್ಲ ಸೇವೆಗಳು ಎಂದು ಹೇಳಿದರೂ ಕಡು ಬಡಜನರಿಗೆ ಈ ಸೇವೆ ದೊರಕಿದರೂ ಸಾಮಾನ್ಯ ಜನರಿಗೆ, ದೂರದ ಪ್ರದೇಶದಲ್ಲಿದ್ದವರಿಗೆ, ಈ ಸೇವೆಗಳು ದೊರಕುವುದಿಲ್ಲ.

**ಈ ಖಾಸಗಿ ವ್ಯವಸ್ಥೆಯನ್ನು ಬಳಸಿಕೊಂಡಾಗ ಆಗುವ ಅನಾಹುತಗಳು:**

ಖಾಸಗಿ ಆಸ್ಪತ್ರೆಗಳ ಮೇಲೆ ಯಾವುದೇ ನಿಯಂತ್ರಣವಿರುವುದಿಲ್ಲ. ಆದ್ದರಿಂದ ಅವರು ಅನಗತ್ಯ ಪರೀಕ್ಷೆ, ಚಿಕಿತ್ಸೆ, ಆಪರೇಷನ್ ಮಾಡಲು ಮುಂದಾಗುತ್ತಾರೆ. ಅನೇಕ ತೀವ್ರತರದ ತಪ್ಪು ಚಿಕಿತ್ಸೆಗಳನ್ನು ಮಾಡಲು ಮುಂದಾಗುತ್ತಾರೆ. ಉದಾ: ಗರ್ಭಕೋಶ ತೆಗೆದುಹಾಕುವುದು, ಸರ್ಕಾರದಲ್ಲಿ ಅಗತ್ಯತೆಗಿಂತ ೫೦ ಪ್ರತಿಶತ ಹೆಚ್ಚು ಗರ್ಭಕೋಶಗಳನ್ನು ತೆಗೆದ ದಾಖಲೆಗಳಿವೆ. ೨೨ ವರ್ಷ ವಯಸ್ಸಿನ ಹೆಣ್ಣುಮಗಳ ಗರ್ಭಕೋಶ ತೆಗೆದುಹಾಕಿರುವ ದಾಖಲೆಯೂ ಇದೆ.

ಈ ಆಸ್ಪತ್ರೆಯ ಚಿಕಿತ್ಸೆಗಳು ಸಮಂಜಸವಾಗಿರುವುದಿಲ್ಲ ಹಾಗೂ ಚಿಕಿತ್ಸಾ ವೆಚ್ಚ ದುಬಾರಿ. ಇದನ್ನು ಹೊಸ ಯೋಜನೆಯೆಂದು ಬಿಂಬಿಸಲಾಗಿದೆ. ಆದರೆ ಇಲ್ಲಿ ಮೊದಲಿದ್ದ ಸೇವೆಗಳೆ ದೊರಕುತ್ತಿವೆ. ಹೊಸ ಸೌಲಭ್ಯಗಳೇನಿಲ್ಲ. ಈ ಸೌಲಭ್ಯಗಳೆಲ್ಲ ಪಟ್ಟಣಗಳಿಗೆ ಮಾತ್ರ ಮೀಸಲು ಅಷ್ಟೇ. ಗ್ರಾಮೀಣ ಪ್ರದೇಶದ ಜನರೇನು ಮಾಡಬೇಕು?

**ಇದರ ಬದಲು ಸರಕಾರ ಏನು ಮಾಡಬಹುದು? ಏನು ಮಾಡಬೇಕು?**

೧. ಆರೋಗ್ಯ ಸುಧಾರಣೆಯ ವಿಷಯ ರಾಕೆಟ್ ವಿಜ್ಞಾನದಂತಹ ತಂತ್ರಜ್ಞಾನವಲ್ಲ. ಜಗತ್ತಿನಾದ್ಯಂತ ಜನಾರೋಗ್ಯ ಯೋಜನೆ ಯಶಸ್ವಿಯಾದ ಹಲವಾರು ದೇಶಗಳಿವೆ. ಉದಾ: ಯೂರೋಪ್, ಶ್ರೀಲಂಕಾ, ಮಲೇಷಿಯಾ, ಥಾಯ್‌ಲೆಂಡ್. ಇದು ಅಮೆರಿಕಾವನ್ನು ಹೊರತುಪಡಿಸಿದಂತೆ ಓಇಸಿಡಿ ದೇಶಗಳಲ್ಲೂ ಯಶಸ್ವಿಯಾಗಿದೆ.

೨. ನಮ್ಮ ನೆರೆಹೊರೆಯ ರಾಷ್ಟ್ರ ಶ್ರೀಲಂಕಾದಲ್ಲಿ ೯೦% ಆಸ್ಪತ್ರೆ ಹಾಸಿಗೆಗಳು ಸರಕಾರದ ಹಿಡಿತದಲ್ಲಿವೆ. ಆರೋಗ್ಯ ಅಂಕಿಅಂಶಗಳು ಸಮಾಧಾನಕರವಾಗಿವೆ. ಆಸ್ಪತ್ರೆ

## ವಚನಗಳು

ಮಣ್ಣು ಸೋಸಿ ಕಬ್ಬಿಣ ತವರ
ಕಂಚು ತೆಗೆದರು
ಮಣ್ಣು ಸೋಸಿ ಬೆಳ್ಳಿ ಚಿನ್ನ
ತೆಗೆದರು
ಮಣ್ಣು ಸೋಸಿ ವಜ್ರ ವೈಢೂರ್ಯ
ತೆಗೆದರು
ಮಣ್ಣು ಸೋಸಿ ಬಗೆ ಬಗೆಯ
ಲೋಹ ತೆಗೆದರು
ನೀನು ಸತ್ತು ಮಣ್ಣಾದಾಗ
ಸೋಸಿದರೆ ನಿನ್ನ ಗುರುತೇ ಇಲ್ಲ – ರತ್ನದೀಪ





ಬಳ್ಳಿ ಕಾಯಿ ಹೊತ್ತು ಭಾರವೆನ್ನಲಿಲ್ಲ
ತರು ಫಲ ಹೊತ್ತು ತೊನೆಯುತ್ತಿದ್ದರೂ ಭಾರವೆನ್ನಲಿಲ್ಲ
ಸಕಲವನ್ನು ಹೊತ್ತು ಭೂಮಿ ಭಾರವೆನ್ನಲಿಲ್ಲ
ತಾಯಿ ಬಸಿರು ಹೊತ್ತರೂ ಭಾರವೆನ್ನಲಿಲ್ಲ
ಸಕಲ ಜೀವಿಯು ಹೊತ್ತ ಬಸಿರು ಭಾರವೆನ್ನಲಿಲ್ಲ
ಹೆತ್ತ ತಂದೆ–ತಾಯಿ ನಿನಗೆ ಭಾರವೆನಿಸಿದರಲ್ಲ
ಇದೆಂತಹ ವಿಪರ್ಯಾಸ ನೋಡಾ – ರತ್ನದೀಪ

**ಎ. ಜಿ. ರತ್ನ ಕಾಳೇಗೌಡ**
ನಂ. ೨೯, ಬೆಸ್ಟ್‌ಕೌಂಟಿ–೨, ೧ನೇ ಕ್ರಾಸ್, ೧ನೇ 'ಬಿ' ಮೇನ್
ವಿದ್ಯಾರಣ್ಯಪುರ ಅಂಚೆ, ಬೆಂಗಳೂರು – ೫೬೦ ೦೯೭

ಹಾಸಿಗೆಗಳು ಖಾಸಗಿ ಕ್ಷೇತ್ರದಲ್ಲಿರುವುದು ಸಾರ್ವಜನಿಕ ಆರೋಗ್ಯಕ್ಕೆ ಮಾರಕ.

೩. ಇದರಿಂದ ಗೊತ್ತಾಗುವುದೇನೆಂದರೆ ಆರೋಗ್ಯ ಕ್ಷೇತ್ರ ಕೇವಲ ಸಾರ್ವಜನಿಕ ಕ್ಷೇತ್ರದಲ್ಲಿದ್ದಲ್ಲಿ ಯಶಸ್ಸು ಕಾಣಲು ಸಾಧ್ಯ. ಖಾಸಗಿ ಕ್ಷೇತ್ರದಲ್ಲಿದ್ದರೆ ಖಾಸಗಿ ಸಂಸ್ಥೆಗಳಿಗೆ ಲಾಭ ಗಳಿಸುವುದರಲ್ಲಿ ಯಾವುದೇ ಸಂದೇಹವೂ ಇಲ್ಲ.

ಸಾರ್ವಜನಿಕ ಕ್ಷೇತ್ರದಲ್ಲಿದ್ದರೆ ಆರೋಗ್ಯ ವ್ಯವಸ್ಥೆ ಸಮಾಜಕ್ಕೆ ಆಸ್ತಿ ಇದ್ದಂತೆ ಹಾಗೂ ಅದರಿಂದ ವೈದ್ಯರು, ವೈದ್ಯಕೀಯ ಸಿಬ್ಬಂದಿ, ಆಸ್ಪತ್ರೆ ಹಾಸಿಗೆಗಳು, ಔಷಧಿಗಳು ಹಾಗೂ ಪ್ರಯೋಗ ಪರೀಕ್ಷೆಗಳನ್ನು ಸ್ಥಾಪಿಸಿದಂತಾಗುತ್ತದೆ. ಆದರೆ ಖಾಸಗಿ ಕ್ಷೇತ್ರದಲ್ಲಿದ್ದರೆ ಸರ್ಕಾರ ಆರೋಗ್ಯ ವ್ಯವಸ್ಥೆಯನ್ನು ಕಡೆಗಣಿಸಿದಂತಾಗುತ್ತದೆ. ಆರೋಗ್ಯ ಕ್ಷೇತ್ರ ಸರಕಾರಿ ಕ್ಷೇತ್ರದಲ್ಲಿದ್ದರೆ ಅತ್ಯಗತ್ಯ ಸೇವೆಗಳಾದ ಪ್ರಾಥಮಿಕ ಆರೋಗ್ಯ ಸೇವೆಗಳನ್ನು ಜನರಿಗೆ ನೀಡಿದಂತಾಗುತ್ತದೆ.

**ಪ್ರೈಮ್ ಮಿನಿಸ್ಟರ್ ಜನಾರೋಗ್ಯ ಯೋಜನೆ**

೫೦,೦೦೦ ಆರೋಗ್ಯ ಹಾಗೂ ಕ್ಷೇಮ ಕೇಂದ್ರಗಳನ್ನು ತೆರೆಯುವುದಾಗಿ ಸರಕಾರ ಹೇಳಿದೆ. ಇವು ಈ ಮೊದಲೇ ಇದ್ದ ಪ್ರಾಥಮಿಕ ಆರೋಗ್ಯ ಕೇಂದ್ರಗಳಷ್ಟೆ. ಆದರೆ ಇದಕ್ಕೆ ಕೇವಲ ೧೨೦೦ ಕೋಟಿಯಷ್ಟು ಮೊತ್ತವನ್ನು ಮಾತ್ರ ಮೀಸಲಿಟ್ಟಿದೆ. ಇದರಿಂದ ಪ್ರಾಥಮಿಕ ಆರೋಗ್ಯ ವ್ಯವಸ್ಥೆ ಮಾಡಿದಂತಾಗುವುದಿಲ್ಲ. ಹಾಗೂ ಅದೇ ಯೋಜನೆಯನ್ನು ಮುಂದಿನ ವರ್ಷ ೧೦,೦೦೦ ಕೋಟಿಗೆ ಏರಿಸುವುದಾಗಿ ಹೇಳುತ್ತಿದೆ. ಇದು ನಂಬಲರ್ಹ ಅಂಕಿಅಂಶಗಳು. ಪ್ರಾಥಮಿಕ ಆರೋಗ್ಯ ವ್ಯವಸ್ಥೆಯನ್ನು ಕಡೆಗಣಿಸಲಾಗಿದೆ. ಇದರಿಂದ ವಿಶ್ವ ಆರೋಗ್ಯ ಸಂಸ್ಥೆಯ ಪ್ರಾಥಮಿಕ ಆರೋಗ್ಯ ಪಾಲನೆಯ ಸೂತ್ರಗಳನ್ನು ಕೈಬಿಟ್ಟಂತಾಗುತ್ತದೆ.

**ಆರೋಗ್ಯ ಕ್ಷೇಮ ಕೇಂದ್ರಗಳಿಗೆ ಹಣಕಾಸು**

ಇದು ಪ್ರಾಥಮಿಕ ಆರೋಗ್ಯ ಕೇಂದ್ರಕ್ಕೆ ಈ ಸರಕಾರ ಕೊಟ್ಟಿರುವ ಆಲಂಕಾರಿಕ ಹೆಸರು. ಉದಾ: ಒಂದು ಕ್ಷೇಮ ಕೇಂದ್ರಕ್ಕೆ ೮೦,೦೦೦ ರೂ. ಕೊಡಲಾಗಿದೆ.

೨೦೧೮–೧೯ ರೂ..೨೦೦೦ : ಕೋಟಿ ತಲಾ ೪೦ ರೂ.

ರಾಜ್ಯ ಸರ್ಕಾರ ೪೦% – ೨೭ ರೂ.

ವಿಮಾ ಯೋಜನೆಗೆ ಒಟ್ಟು ತಲಾ ೬೭ ರೂ.

ಬಜೆಟ್‌ನಲ್ಲಿ ಹೆಚ್ಚಳವೇನಿಲ್ಲ.

೨೦೧೭–೧೮ ರೂ. ೫೦ ೦೭೯.೬

೨೦೧೮–೧೯ ರೂ. ೫೨ ೮೦೦ (೫% ಹೆಚ್ಚಳ)

ಹಣದುಬ್ಬರವನ್ನು ಗಣನೆಗೆ ತೆಗೆದುಕೊಂಡರೆ ಒಟ್ಟಾರೆಯಾಗಿ ಆಗಿರುವ ಹೆಚ್ಚಳ ೦%, ಅಷ್ಟೆ.

೨೦೦೦ ಕೋಟಿ ರೂ.ಗಳನ್ನು ೧೦,೦೦೦ ರೂ.ಗೆ ಹೆಚ್ಚಿಸಲಾಗುವುದೆಂದು ನೀತಿ ಆಯೋಗ ಹೇಳುತ್ತಿದೆ.

೫೦ ಕೋಟಿ ವ್ಯಕ್ತಿಗೆ – ೧೦,೦೦೦ ಕೋಟಿ.

ವರ್ಷಕ್ಕೆ ತಲಾ ೨೦೦ ರೂಪಾಯಿ.

ಒಮ್ಮೆ ಆಸ್ಪತ್ರೆಗೆ ಹೋದರೆ ಇಷ್ಟು ಹಣ ಸಾಕಾಗುವುದಿಲ್ಲ.

ಒಂದು ಅಧ್ಯಯನದ ಪ್ರಕಾರ ಅಗತ್ಯವಿರುವ ಒಟ್ಟು ಮೊತ್ತ ಈಗ ಆಯೋಜಿಸಿದ್ದ ಹಣದ ೧೨ ಪಟ್ಟಾಗುತ್ತದೆ. ೨೦೧೮–೧೯ರಲ್ಲಿ ಕೊಟ್ಟಿರುವ ಹಣದ ೬೦ ಪಟ್ಟು ಮಾಡುವುದಾಗಿ ತಿಳಿಸಿದರೆ, ಅದು ನಂಬಲರ್ಹ ಸಂಗತಿ.

ಈ ಹಣ ಆರೋಗ್ಯ ವಿಮೆಗೆ ಮಾತ್ರ ಲಭ್ಯವಿದೆ. ಆಸ್ಪತ್ರೆ ಸಿಬ್ಬಂದಿ, ವರ್ಷದ ತಳರಚನೆಗೆ ಸರಕಾರ ಎಷ್ಟು ಹಣ ಖರ್ಚು ಮಾಡುತ್ತದೆ ಎಂಬುದರ ಬಗ್ಗೆ ಮಾತೇ ಇಲ್ಲ. ಬಹುಶಃ ಈ ವಿಮೆ ಯೋಜನೆಯನ್ನು ಅದರಿಂದಲೇ ಖಾಸಗಿ ಆಸ್ಪತ್ರೆಗೆ ನೀಡಿ ಸರಕಾರ ತನ್ನ ಜವಾಬ್ದಾರಿಯಿಂದ ನುಳುಚಿಕೊಳ್ಳಲು ನೋಡುತ್ತಿದೆ. ಆದರೆ ಈಗಿರುವ ಸರಕಾರಿ ಆಸ್ಪತ್ರೆ / ಕ್ಲಿನಿಕ್‌ಗಳನ್ನು ನೋಡಿಕೊಳ್ಳಬೇಕಾದ ಜವಾಬ್ದಾರಿ ಸರಕಾರದ್ದಲ್ಲವೇ? ಅದರ ಬಗ್ಗೆ ಸರಕಾರದ ನಿಲುವೇನು ಎಂಬುದು ಸ್ಪಷ್ಟವಾಗಿಲ್ಲ.

**‘ಆರೋಗ್ಯ ಕರ್ನಾಟಕ’ ಯಾರಿಗೆ ?**

| ಲಾಭ | ಇಲ್ಲ |
|---|---|
| ೧ ರೂಂ, ಕಚ್ಚಾ ಗೋಡೆ ಕಚ್ಚಾ ಮೇಲ್ಛಾವಣಿ ಇರುವವರಿಗೆ | ಬೈಕ್ / ಆಟೋ ಇರುವವರಿಗೆ |
| ಮಹಿಳೆಯರು | ೪ ಚಕ್ರದ ವಾಹನ ಇರುವವರಿಗೆ |
| ಎಸ್‌ಸಿ/ಎಸ್‌ಟಿ | ದೋಣಿ, ಆಟೋ ಇರುವವರಿಗೆ |
| ವಿಕಲಚೇತನರಿಗೆ | |
| ಭೂರಹಿತ ಕೃಷಿ ಕೂಲಿ ಕಾರ್ಮಿಕರು | ರೆಫ್ರಿಜರೇಟರ್ ಇರುವವರಿಗೆ |
| ವಸತಿ ಇಲ್ಲದ ಜನರು | ಲ್ಯಾಂಡ್‌ಲೈನ್ ದೂರವಾಣಿ ಇರುವವರಿಗೆ |
| ಮಲ ಶುಚಿಗೊಳಿಸುವವರು | ೨೦೧೧ರ ಸೆನ್ಸಸ್ ಪ್ರಕಾರ ಮಾಹಿತಿಯನ್ನು ಪಡೆಯಲಾಗುವುದು |
| ಆದಿವಾಸಿ ಕುಟುಂಬಗಳು | ಕಿಸಾನ್ ಕ್ರೆಡಿಟ್ ಕಾರ್ಡ್ ಮೇಲೆ ೭೫,೦೦೦ ರೂ ಸಾಲ ಪಡೆದಿರುವವರಿಗೆ |
| ಕಾರ್ಮಿಕರು, ಚಿಂದಿ ಆಯುವವರು, ಭಿಕ್ಷುಕರು | ವ್ಯಾಪಾರ – ಕೃಷಿಯೇತರ ಸಾಲ |
| ಮನೆಕೆಲಸದವರು, ಬೀದಿ ಬದಿ ವ್ಯಾಪಾರಿಗಳು | ಸಂಬಳ > ೧೦,೦೦೦ ರೂ. ಯಾರಾದರೂ ಸರ್ಕಾರಿ ನೌಕರರಿರಬಹುದು |
| ಪೇಂಟರ್, ಸೆಕ್ಯೂರಿಟಿ ಗಾರ್ಡ್, ವೆಲ್ಡರ್ | ವರಮಾನ ತೆರಿಗೆಯ ವ್ಯಾಪ್ತಿಯಲ್ಲಿ ಬರುವವರು |
| ಅಂಗಡಿಗಳಲ್ಲಿರುವವರು | ಸ್ವಂತಮನೆ ಇರುವವರು |
| ಡ್ರೈವರ್, ಕಂಡಕ್ಟರ್, ರಿಕ್ಷಾ ಎಳೆಯುವವರು, ಟೈಲರ್‌ಗಳು | ೨ ೧/೨ ಎಕರೆ ನೀರಾವರಿ ಭೂಮಿ ಇರುವವರು |
| | ವರ್ಷಕ್ಕೆ ೨ಕ್ಕಿಂತ ಹೆಚ್ಚು ಬೆಳೆ ಬೆಳೆಯುವರು – ೫ ಎಕರೆ ಭೂಮಿ ಇದ್ದವರಿಗೆ |

**ಕೊನೆಯದಾಗಿ**

‘ಆಯುಷ್ಮಾನ್ ಭಾರತ’ವನ್ನು ರಾಷ್ಟ್ರೀಯ ಆರೋಗ್ಯ ಯೋಜನೆಯಡಿ ಪ್ರಾರಂಭಿಸಿತು. ಇದರ ಬಗ್ಗೆ ಯಾವ ಚರ್ಚೆಯನ್ನೂ ಮಾಡದೆ ಈ ಯೋಜನೆಯನ್ನು ಜಾರಿಗೆ ತರಲಾಗಿದೆ. ಇದನ್ನು ದೇಶದ ೨೬ ರಾಜ್ಯಗಳಲ್ಲಿ, ೪೫೦ ಜಿಲ್ಲೆಗಳಲ್ಲಿ, ೨೦೧೮ ಸೆಪ್ಟೆಂಬರ್ ೨೩ರಂದು ಪ್ರಾರಂಭಿಸಲಾಯಿತು.

ಈ ಯೋಜನೆಯ ಪ್ರಕಾರ ಈ ಕಾರ್ಯಕ್ರಮದಡಿ ವೈದ್ಯಕೀಯ ಹಾಗೂ ಆಸ್ಪತ್ರೆ ಖರ್ಚನ್ನು ದ್ವಿತೀಯ ಹಾಗೂ ತೃತೀಯ ಆರೋಗ್ಯ ಸೇವೆಗಳಿಗೆ ನೀಡುವುದಾಗಿ ಘೋಷಿಸಲಾಗಿದೆ. ಇದರಲ್ಲಿ ೧೩೫೦ ಬೇರೆ ಬೇರೆ ವೈದ್ಯಕೀಯ ಸೇವೆಗಳಿವೆ. ಉದಾ : ಶಸ್ತ್ರಚಿಕಿತ್ಸೆ, ಡೇ ಕೇರ್ ಔಷಧಿಗಳು, ಪ್ರಯೋಗಾಲಯ ಪರೀಕ್ಷೆಗಳು ಇತ್ಯಾದಿ. ಇಲ್ಲಿಯವರೆಗೆ ೩೧ ರಾಜ್ಯಗಳು ಒಪ್ಪಂದಕ್ಕೆ ಸಹಿ ಹಾಕಿವೆ. ದೇಶದ ೫ ರಾಜ್ಯಗಳು ಈ ಕಾರ್ಯಕ್ರಮಕ್ಕೆ ಒಪ್ಪಿಗೆ ನೀಡಿಲ್ಲ. ಪಂಜಾಬ್, ಕೇರಳ, ದೆಹಲಿ, ತೆಲಂಗಾಣ, ಓಡಿಸ್ಸಾ ಅದಕ್ಕೆ ಕಾರಣ ಅಲ್ಲಿ ಬೇರೆ ಬಗೆಯ ಯಶಸ್ವಿ ಆರೋಗ್ಯ ಯೋಜನೆ ಜಾರಿಯಲ್ಲಿದೆ.

ಈ ಕಾರ್ಯಕ್ರಮ ಕೇಂದ್ರ ಹಾಗೂ ರಾಜ್ಯದ ಹಣಕಾಸಿನ ಸಹಾಯದಿಂದ (೬೦:೪೦) ಜಾರಿಗೆ ಬರಲಿದೆ.

ಒಟ್ಟಾರೆಯಾಗಿ ಹೇಳುವುದಾರೆ ಇದೊಂದು ಅಸ್ಪಷ್ಟ ಯೋಜನೆ. ಇದನ್ನು ಚುನಾವಣೆಯನ್ನು ದೃಷ್ಟಿಯಲ್ಲಿಟ್ಟುಕೊಂಡು ತರಾತುರಿಯಲ್ಲಿ ಆಯೋಜಿಸಿದಂತಿದೆ, ಅಷ್ಟೆ.

**ಡಾ॥ ಪ್ರಕಾಶ್ ಸಿ. ರಾವ್**

ಅಪರ್ಣಾ ಕ್ಲಿನಿಕ್, ನಂ. ೧೧೯೪, ೧ನೇ ಮುಖ್ಯರಸ್ತೆ, ಕೆ. ಎನ್. ಎಕ್ಸ್‌ಟೆನ್ಷನ್, ಯಶವಂತಪುರ, ಬೆಂಗಳೂರು – ೫೬೦ ೦೨೨



## ಆಫ್ಘಾನಿಸ್ತಾನದಿಂದ ಅಮೆರಿಕ ಸೇನೆ ಹಿಂಪಡೆ, ಭಾರತಕ್ಕೆ ಆತಂಕ

**ನ**ಲವತ್ತು ವರ್ಷಗಳಿಂದ ಒಂದೇ ಸಮ ಅಂತರ್ಯುದ್ಧ, ವಿದೇಶೀ ಸೈನ್ಯಗಳ ಕಾರ್ಯಾಚರಣೆಗಳ ಬವಣೆಯನ್ನನುಭವಿಸುತ್ತ ಬಂದಿರುವ ಆಫ್ಘಾನಿಸ್ತಾನ ಹಿಮಾಲಯದ ತಪ್ಪಲಿನಲ್ಲಿರುವ ಬೆಟ್ಟಗುಡ್ಡಗಳ ನಾಡು. ನಾನಾ ಬುಡಕಟ್ಟುಗಳನ್ನು ಹೊಂದಿರುವ ಮಧ್ಯ ಏಷಿಯದ ಕೂಡು ಮಾರ್ಗದಲ್ಲಿರುವ ಈ ದೇಶ ದಕ್ಷಿಣ ಏಷಿಯದ ಭಾಗವೂ ಆಗಿದೆ. ಬ್ರಿಟಿಷರ ಆಳ್ವಿಕೆಯ ಕಾಲದಲ್ಲಿ ಇದನ್ನು ಆಕ್ರಮಿಸಿಕೊಳ್ಳಲು ನಡೆದ ಪ್ರಯತ್ನಗಳೆಲ್ಲ ವಿಫಲವಾದವು. ಒಂದು ರೀತಿಯಲ್ಲಿ ಆಫ್ಘಾನಿಸ್ತಾನ ಅಜೇಯ. ಯುದ್ಧಪೀಡಿತ. ಬ್ರಿಟನ್ ಈ ದೇಶವನ್ನು ಅಂದಿನ ಸೋವಿಯೆತ್ ಒಕ್ಕೂಟಕ್ಕೆ ತಡೆಗೋಡೆಯಾಗಿ ಮಾಡಿಕೊಂಡಿತ್ತು. ದೀರ್ಘಕಾಲ ಅರಸೊತ್ತಿಗೆಯ ಆಡಳಿತ ಈ ದೇಶ ಪ್ರಜಾಪ್ರಭುತ್ವ ರಾಷ್ಟ್ರವಾದ್ದು ೧೯೭೮ರಲ್ಲಿ. ಅಸ್ಥಿರವಾಗಿದ್ದ ಸರಕಾರವನ್ನು ಉಳಿಸಲು ಸೋವಿಯೆತ್ ಒಕ್ಕೂಟದ ಸೈನ್ಯದ ಪ್ರವೇಶ. ಆಗ ಪ್ರಾರಂಭವಾದ ಅಂತರ್ಯುದ್ಧ ಇನ್ನೂ ಮುಗಿದಿಲ್ಲ. ಹತ್ತು ವರ್ಷಗಳು ಸೋವಿಯೆತ್ ಸೇನೆಯ ಕಾರ್ಯಾಚರಣೆ, ಸೋವಿಯೆತ್ ವ್ಯವಸ್ಥೆಯ ಪತನಕ್ಕೆ ಇದೂ ಒಂದು ಕಾರಣ. ವಿದೇಶೀ ಸೇನೆ ವಾಪಸಾದ ನಂತರ ಇಸ್ಲಾಮಿಕ್ ಉಗ್ರಸಂಘಟನೆ ತಾಲಿಬಾನ್‌ನ ಆಡಳಿತ. ೨೦೦೧ರಲ್ಲಿ ಅಮೆರಿಕದ ಸೈನಿಕರಿಂದ ದಾಳಿ. ತಾಲಿಬಾನ್ ಸರಕಾರದ ಪದಚ್ಯುತಿ. ಮತ್ತೆ ಪ್ರಾರಂಭವಾದ ಅಂತರ್ಯುದ್ಧ. ಅಮೆರಿಕದಿಂದ ಕೈಗೊಂಬೆ ಸರಕಾರದ ಸ್ಥಾಪನೆ. ಅಂದಿನಿಂದ ಅಮೆರಿಕದ ಸೇನೆಯ ಉಪಸ್ಥಿತಿ. ಹೀಗೆ ಶಾಂತಿಯನ್ನು ಕಾಣದೆ ಯುದ್ಧದಲ್ಲೇ ಮುಳುಗಿರುವ ದೇಶ ಆಫ್ಘಾನಿಸ್ತಾನ.

ಅಮೆರಿಕದ ಸೇನೆಯದೇ ಕಾರುಬಾರು. ೧೪ ಸಾವಿರ ಅಮೆರಿಕನ್ ಯೋಧರು ಆಫ್ಘಾನಿಸ್ತಾನದಲ್ಲಿದ್ದಾರೆ. ಭಾರತ ಈ ಯುದ್ಧಪೀಡಿತ ದೇಶದಲ್ಲಿ ಅಭಿವೃದ್ಧಿ ಕಾರ್ಯಗಳಲ್ಲಿ ತೊಡಗಿದೆ. ಮೂಲಸೌಕರ್ಯಗಳನ್ನು ಒದಗಿಸಲು ಭಾರತದ ಹಲವು ಉದ್ದಿಮೆ ಸಂಸ್ಥೆಗಳು ಭಾಗಿಯಾಗಿವೆ. ಆಫ್ಘಾನಿಸ್ತಾನದ ಯುದ್ಧದಿಂದ ದೂರ ಉಳಿದಿರುವ ಭಾರತವನ್ನು ಎಳೆಯಲು ಅಮೆರಿಕ ಉದ್ದಕ್ಕೂ ಪ್ರಯತ್ನಿಸಿತು. ಈಗ ತಾಲಿಬಾನ್ ಜೊತೆ ಮಾತುಕತೆಗಳಲ್ಲಿ ತೊಡಗಿಕೊಳ್ಳುವಂತೆ ಅಮೆರಿಕ ಪ್ರೇರೇಪಿಸುತ್ತಿದೆ. ಅದು ವಿಫಲ ಪ್ರಯತ್ನವಾಗೇ ಉಳಿದಿದೆ. ಹಠಾತ್ ನಿರ್ಧಾರಗಳಿಗೆ ಹೆಸರಾಗಿರುವ ಅಮೆರಿಕದ ಅಧ್ಯಕ್ಷ ಡೊನಾಲ್ಡ್ ಟ್ರಂಪ್ ಈಗ ಆಫ್ಘಾನಿಸ್ತಾನದಿಂದ ಸೇನೆಯನ್ನು ಹಿಂದಕ್ಕೆ ಕರೆಸಿಕೊಳ್ಳುವ ಮಾತನಾಡುತ್ತಿದ್ದಾರೆ ಪದೇಪದೇ. ಅನ್ಯದೇಶಗಳ ರಕ್ಷಣೆಗೆ ಅಮೆರಿಕದ ಸೈನ್ಯ ಮತ್ತು ಹಣ ಏಕೆ ವಿನಿಯೋಗವಾಗಬೇಕು ಎನ್ನುವುದೇ ವಾದ. ಅಮೆರಿಕದ ಸೈನ್ಯಗಳು ವಾಪಸ್ಸಾದರೆ ಸ್ಥಾಪಿತ ಸರಕಾರ ಒಂದು ದಿನವೂ ಉಳಿಯಲಾರದು. ದೇಶದ ಹಲವು ಭಾಗಗಳಲ್ಲಿ ಪ್ರಬಲವಾಗಿರುವ ತಾಲಿಬಾನ್‌ಗಳು ಮೇಲುಗೈ ಪಡೆಯುವ ಸಾಧ್ಯತೆಯೇ ಹೆಚ್ಚು. ಒಂದು ರೀತಿಯಲ್ಲಿ ಸೋವಿಯೆತ್ ಸೇನೆಯಂತೆಯೇ ಅಮೆರಿಕದ ಸೇನೆಯೂ ಕೂಡ ಆಫ್ಘಾನಿಸ್ತಾನದ ರಾಡಿಯಲ್ಲಿ ಸಿಕ್ಕಿಕೊಂಡಿದೆ. ಅಮೆರಿಕದ ಮಿತ್ರರಾಷ್ಟ್ರಗಳು, ಪ್ರಧಾನವಾಗಿ ಯೂರೋಪಿನ ರಾಷ್ಟ್ರಗಳು ಟ್ರಂಪ್ ನಿರ್ಧಾರವನ್ನು ವಿರೋಧಿಸಿವೆ. ಟ್ರಂಪ್ ನಿರ್ಧಾರದಿಂದ ನಿಜವಾಗಿ ಆತಂಕಕ್ಕೀಡಾಗಿರುವುದು ಭಾರತ. ಸಾವಿರಾರು ಕೋಟಿ ಬಂಡವಾಳ ಹೂಡಿ ಮೂಲಸೌಕರ್ಯ ನಿರ್ಮಿಸಲು ಪ್ರಯತ್ನಿಸುತ್ತಿರುವ ಭಾರತ ಅಮೆರಿಕನ್ ಸೇನೆಯ ವಾಪಸಾತಿಯಿಂದ ಭಾರಿ ನಷ್ಟಕ್ಕೆ ಗುರಿಯಾಗಲಿದೆ, ಜೊತೆಗೆ ತಾಲಿಬಾನ್‌ಗಳ ಹಾವಳಿಯನ್ನೂ ಎದುರಿಸಬೇಕಾಗುತ್ತದೆ. ತಾಲಿಬಾನ್‌ಗಳ ಆಡಳಿತದ ಕಾಲದಲ್ಲಿ ನಡೆದ ದೌರ್ಜನ್ಯಗಳನ್ನು ವಿವರಿಸುವುದು ಈ ಲೇಖನದ ಉದ್ದೇಶವಲ್ಲ. ಆದರೂ ಅದರ ಉಪಟಳ ಮಾತ್ರ ಮರೆಯಲಾಗದ ಸಂಗತಿ.

* * *

## ಟ್ರಂಪ್ ಗೋಡೆಗೆ ಹಣಕಾಸಿನ ಅಡ್ಡಗೋಡೆ

**ಮೆ**ಕ್ಸಿಕೋದಿಂದ ಅಕ್ರಮ ವಲಸೆ ತಡೆಗಟ್ಟಲು ಗೋಡೆ ನಿರ್ಮಾಣ ಮಾಡುವುದು ಟ್ರಂಪ್ ಯೋಜನೆ. ಚುನಾವಣೆಯ ಕಾಲದಲ್ಲಿ ಇದು ಒಂದು ದೊಡ್ಡ ಪ್ರಶ್ನೆಯಾಗಿತ್ತು. ಪ್ರತಿವರ್ಷ ಸಾವಿರಾರು ಕೃಷಿಕರು ಮೆಕ್ಸಿಕೋದಿಂದ ಅಮೆರಿಕಕ್ಕೆ ಸುಗ್ಗಿ ಕಾಲದಲ್ಲಿ ದುಡಿಯಲು ಬರುತ್ತಾರೆ. ಇವರಲ್ಲಿ ಅನೇಕರು ಹಿಂದಿರುಗದೆ ಬೇರೆ ಬೇರೆ ಕಡೆಗಳಲ್ಲಿ ಉದ್ಯೋಗ ಮಾಡಿಕೊಂಡು ಅಕ್ರಮ ವಲಸೆಗಾರರೆನಿಸಿಕೊಳ್ಳುತ್ತಾರೆ. ಇದು ಅನೇಕ ವರ್ಷಗಳಿಂದ ನಡೆದುಕೊಂಡು ಬಂದಿರುವ ವ್ಯವಸ್ಥೆ. ಮೆಕ್ಸಿಕೋದಿಂದ ಬಂದು ನೆಲೆಸಿರುವವರು ಒಂದು ರೀತಿಯಲ್ಲಿ ಅಮೆರಿಕದ ಅರ್ಥವ್ಯವಸ್ಥೆಯ ಬೆನ್ನೆಲುಬು ಆಗಿದ್ದಾರೆ. ಮಾಲ್‌ಗಳು, ತರಕಾರಿ ಮಳಿಗೆಗಳು, ಕೃಷಿ ಉದ್ಯಮ ಹೀಗೆ ದೈಹಿಕಶ್ರಮ ಅಗತ್ಯವಿರುವ ಕ್ಷೇತ್ರಗಳಲ್ಲಿ ದುಡಿಯುವವರು ಮೆಕ್ಸಿಕನ್ನರೇ ಬಹುಪಾಲು. ಚಿಕಾನೇಗಳು ಎಂದು ಕರೆಸಿಕೊಳ್ಳುವ ಇವರನ್ನು ಎಲ್ಲಕಡೆ ಕಾಣಬಹುದು.

'ಅಮೆರಿಕ ಅಮೆರಿಕನ್ನರಿಗೆ ಮಾತ್ರ' ಎಂಬ ಆಕರ್ಷಕ ಘೋಷಣೆ ಮಾಡಿದ, ಚುನಾವಣೆಗಳಲ್ಲಿ ಪ್ರಧಾನ ಅಸ್ತ್ರವಾಗಿ ಬಳಸಿದ ಟ್ರಂಪ್ ವಿಜಯಪತಾಕೆ ಹಾರಿಸಿದ್ದು ಅದರ ಮೇಲೆಯೇ. ಅದಕ್ಕಾಗಿ ಹಲವು ಅಡ್ಡಿಗಳನ್ನು ನಿರ್ಮಿಸಿದರು ವಲಸೆಗಾರರನ್ನು ತಡೆಯಲು. ಮೊದಲು ಕೈಗೊಂಡ ಕ್ರಮ ಪಶ್ಚಿಮ ಏಷಿಯದ ದೇಶಗಳ ಜನರ ಪ್ರವೇಶಕ್ಕೆ ತಂದ ಅಡೆತಡೆಗಳು. ಹಾಗೆಯೇ ಭಾರತದ ಐಟಿ ಉದ್ಯಮಕ್ಕೆ ದೊಡ್ಡ ತೊಡಕಾಗಿರುವ, ಇನ್ನೂ ಬಗೆಹರಿಯದ 'ಎಚ್೧ಬಿ' ವೀಸಾದ ನಿರ್ಬಂಧಗಳು. ಬಹುದೊಡ್ಡ ಕ್ರಮ ಎಂದರೆ ಮೆಕ್ಸಿಕೋದಿಂದ ವಲಸೆಯನ್ನು ತಡೆಯುವುದಕ್ಕೆ ಗೋಡೆ ನಿರ್ಮಾಣ. ಈ ಗೋಡೆ ನಿರ್ಮಾಣದ ವೆಚ್ಚವನ್ನು ಮೆಕ್ಸಿಕೋ ಸರಕಾರವೇ ಭರಿಸಬೇಕೆಂಬುದು ಟ್ರಂಪ್ ಇರಾದೆ. ಅದು ವಿಫಲ ಎಂದು ಕಂಡುಬಂದಾಗ ಅಮೆರಿಕದ ಬಜೆಟ್‌ನಿಂದ ವಿನಿಯೋಗ ಮಾಡಬೇಕೆಂಬ ನಿರ್ಧಾರಕ್ಕೆ ಬಂದರು. ಉಕ್ಕಿನ ಗೋಡೆ ನಿರ್ಮಿಸಲು ಬೇಕು ಸಾವಿರಾರು ಕೋಟಿ ಡಾಲರುಗಳು. ಟ್ರಂಪ್ ಮಂಡಿಸಿರುವ ಬಜೆಟ್‌ನಲ್ಲಿ ಹಣವೊದಗಿಸಲು ಕಾಂಗ್ರೆಸ್ ಸದನದಲ್ಲಿ ಡೆಮಾಕ್ರಾಟರ ತಕರಾರು. ಗಡಿ ಗೋಡೆಗೆ ಹಣ ಮಂಜೂರು ಮಾಡದಿರುವುದರಿಂದ ಅಮೆರಿಕದ ಆಡಳಿತವೇ ಸ್ಥಗಿತಗೊಂಡಿದೆ. ಟ್ರಂಪ್ ಹಠಮಾರಿತನದಿಂದಾಗಿ ಮೂರು ವಾರ ಕಳೆದರೂ ಫೆಡರಲ್ ಸರಕಾರದ ನೌಕರರಿಗೆ ಮಾಸಿಕ ವೇತನ ದೊರಕದಂತಾಗಿದೆ. ಸರಕಾರಿ ವೇತನವನ್ನೇ ನಂಬಿಕೊಂಡಿರುವ ೮೦೦,೦೦೦ ಫೆಡರಲ್ ನೌಕರರು ಫಜೀತಿಗೆ ಸಿಲುಕಿದ್ದಾರೆ. ಅಭಿವೃದ್ಧಿ ಯೋಜನೆಗಳೆಲ್ಲ ಸ್ಥಗಿತಗೊಂಡಿವೆ. ಟ್ರಂಪ್ 'ತುರ್ತು ಪರಿಸ್ಥಿತಿ' ಹೇರುವ ಬೆದರಿಕೆ ಹಾಕುತ್ತಿದ್ದಾರೆ. ಮೊಂಡುತನಕ್ಕೆ ಪ್ರತೀಕವಾಗಿರುವ ಟ್ರಂಪ್ ಯಾವುದಕ್ಕೂ ಸಿದ್ಧ. ತುರ್ತುಪರಿಸ್ಥಿತಿ ಘೋಷಣೆಯಾದರೂ ಆದೀತು.

**ಸೀಯಾರ್ಕೆ**
'ಸೂರ್ಯ ರೆಸಿಡೆನ್ಸಿ', ಫ್ಲಾಟ್ ೧, ನಂ. ೩೧೩೩, ೩ನೇ ಅಡ್ಡರಸ್ತೆ
ಗಿರಿನಗರ ೪ನೇ ಫೇಸ್, ಬೆಂಗಳೂರು – ೫೬೦ ೦೮೫



# ಭಾರತದ ಉನ್ನತ ಶಿಕ್ಷಣ ಹಾಗೂ ಉದ್ಯೋಗ ನಿರ್ವಹಣಾ ಸಾಮರ್ಥ್ಯ

**ಸುಮಾರು ಎರಡು ದಶಕಗಳ ಪೂರ್ವದಲ್ಲಿ ಉದ್ಯೋಗ ನಿರ್ವಹಣಾ ಸಾಮರ್ಥ್ಯವೆಂಬ ಪರಿಕಲ್ಪನೆ ಇಷ್ಟೊಂದು ಮಹತ್ವವನ್ನು ಪಡೆದಿರಲಿಲ್ಲ. ಕಾರಣ ಆ ಸಮಯದಲ್ಲಿ ಪದವೀಧರರ ಪ್ರಮಾಣ ಹಾಗೂ ಉದ್ಯೋಗಾವಕಾಶಗಳ ಲಭ್ಯತೆ ನಡುವಿನ ಅಂತರ ಕಡಿಮೆಯಾಗಿದ್ದು, ವಿಜ್ಞಾನ ಹಾಗೂ ತಂತ್ರಜ್ಞಾನವು ಈಗಿನಷ್ಟು ಬೆಳೆದಿರಲಿಲ್ಲ. ಮಾರುಕಟ್ಟೆಯಲ್ಲಿ ವಸ್ತುವು ತನ್ನ ಅಸ್ತಿತ್ವವನ್ನು ಉಳಿಸಿಕೊಂಡು ಹೆಚ್ಚು ಜನತೆಯ ಕೈಸೇರಿ ಉದ್ದಿಮೆದಾರನ ಮೂಲ ಗುರಿಯನ್ನು ಸಾಧಿಸಬೇಕಾದರೆ ಅದು ಖಂಡಿತವಾಗಿಯೂ ಉತ್ತಮ ಗುಣಮಟ್ಟದ್ದು, ಆಕರ್ಷಕ, ಬಾಳಿಕೆದಾಯಕ, ವಿಶಿಷ್ಟ ಹಾಗೂ ಗ್ರಾಹಕನಿಗೆ ತೃಪ್ತಿಯನ್ನು ಕೊಡುವಂತಹದ್ದಾಗಿರಬೇಕು. ಹಾಗೆಯೇ ಒಬ್ಬ ಪದವೀಧರ ಉದ್ಯೋಗ ಮಾರುಕಟ್ಟೆಯಲ್ಲಿ ತನ್ನ ಪದವಿಗೆ ಅನುಗುಣವಾಗಿ ಉದ್ಯೋಗ ಹೊಂದಿ, ಅದನ್ನು ನಿರ್ವಹಿಸಿಕೊಂಡು ಹೋಗಬೇಕಾದರೆ ಆತನು ಉತ್ತಮ ಗುಣಮಟ್ಟದ ಶಿಕ್ಷಣದ ಜೊತೆಗೆ ಅತಿ ಅವಶ್ಯಕ ಕೌಶಲ್ಯಗಳಾದ ಸಂವಹನ ಕೌಶಲ್ಯ, ವ್ಯಾವಹಾರಿಕ ಕೌಶಲ್ಯ, ಸಂದರ್ಶನ ಕೌಶಲ್ಯ, ಸಮಯ ನಿರ್ವಹಣಾ ಕೌಶಲ್ಯ, ಪರಿಕಲ್ಪನಾ ಕೌಶಲ್ಯ, ವಿಶ್ಲೇಷಣಾ ಕೌಶಲ್ಯ, ಶಾಬ್ದಿಕ ಕೌಶಲ್ಯ, ಒತ್ತಡ ನಿರ್ವಹಣಾ ಕೌಶಲ್ಯ, ತಾಂತ್ರಿಕ ಕೌಶಲ್ಯ ಹಾಗೂ ಅಂತರ ವ್ಯಕ್ತಿತ್ವ ಕೌಶಲ್ಯಗಳನ್ನು ಕರಗತ ಮಾಡಿಕೊಳ್ಳಬೇಕು.**

**ಡಾ॥ ಎಂ. ಎನ್. ಸಿದ್ಧಲಿಂಗಪ್ಪನವರ್**

**ಒಂದು** ದೇಶದ ಆರ್ಥಿಕ ಅಭಿವೃದ್ಧಿಯು ಅಲ್ಲಿನ ನೈಸರ್ಗಿಕ ಸಂಪನ್ಮೂಲ, ಬಂಡವಾಳ ಸಂಪನ್ಮೂಲ ಹಾಗೂ ಮಾನವ ಸಂಪನ್ಮೂಲಗಳನ್ನು ಅವಲಂಬಿಸಿರುವುದು ಸರ್ವೇಸಾಮಾನ್ಯ ಸಂಗತಿ. ಆದರೆ ಗುಣಾತ್ಮಕ, ನುರಿತ, ದಕ್ಷ ಮಾನವ ಶಕ್ತಿಯ ಅವಶ್ಯಕತೆಯಿದ್ದು ಗುಣಾತ್ಮಕ ಹಾಗೂ ದಕ್ಷ ಮಾನವ ಶಕ್ತಿಯ ಲಭ್ಯತೆಯು ದೇಶದಲ್ಲಿರುವ ಉತ್ತಮವಾದ ಶಿಕ್ಷಣ, ಆರೋಗ್ಯ, ಪೌಷ್ಟಿಕ ಆಹಾರ ಮುಂತಾದ ಮೂಲಭೂತ ಅಂಶಗಳ ಜೊತೆಗೆ ರಾಜಕೀಯ ಇಚ್ಛಾಶಕ್ತಿ ಮತ್ತು ಸದೃಢತೆಯನ್ನು ಅವಲಂಬಿಸಿರುತ್ತದೆ. ನಿಖರವಾಗಿ ಹೇಳುವುದಾದರೆ ದೇಶದಲ್ಲಿನ ಶಿಕ್ಷಣ ವ್ಯವಸ್ಥೆಯು ಗುಣಾತ್ಮಕ, ಕೌಶಲ್ಯಭರಿತ ಮಾನವ ಸಂಪನ್ಮೂಲವನ್ನು ಸೃಷ್ಟಿಸಿ ವಿವಿಧ ವಲಯಗಳಲ್ಲಿ ಸಮರ್ಪಕವಾಗಿ ಹಂಚುವಲ್ಲಿ ಪ್ರಮುಖ ಪಾತ್ರವಹಿಸುತ್ತದೆ. ಇದು ದೇಶದ ಆರ್ಥಿಕ ಅಭಿವೃದ್ಧಿಗೆ ಪೂರಕವಾಗುತ್ತದೆ. ಜಾಗತಿಕ ಚಿತ್ರಣವನ್ನು ನೋಡಿದಾಗ ಅಭಿವೃದ್ಧಿ ಹೊಂದಿದ ರಾಷ್ಟ್ರಗಳಾದ ಅಮೆರಿಕಾ, ಇಂಗ್ಲೆಂಡ್ ಮತ್ತು ಆಸ್ಟ್ರೇಲಿಯಗಳಲ್ಲಿ ಸುಶಿಕ್ಷಿತರ ಪ್ರಮಾಣವು ಹೆಚ್ಚಿದ್ದು, ಅವುಗಳಲ್ಲಿ ಉನ್ನತ ಶಿಕ್ಷಣ ಪಡೆದಂತಹ ಜನಸಂಖ್ಯೆಯನ್ನು ಕಾಣಬಹುದು. ಇಂತಹ ಸುಶಿಕ್ಷಿತ ಜನಸಂಖ್ಯೆ ಪ್ರಜ್ಞಾವಂತ ಸಮಾಜ ನಿರ್ಮಾಣಕ್ಕೆ ಸಹಾಯಕಾರಿಯಾಗುವದಲ್ಲದೆ ದೇಶದ ಆರ್ಥಿಕ ಅಭಿವೃದ್ಧಿಗೆ ಮಹತ್ವದ ಕೊಡುಗೆಯನ್ನು ಸಲ್ಲಿಸುತ್ತದೆ.

ಪ್ರಪಂಚದಲ್ಲಿ ಅಮೆರಿಕಾ ಹಾಗೂ ಚೀನಾ ದೇಶಗಳ ನಂತರ ಭಾರತವು ಪದವೀಧರರನ್ನು ಸೃಷ್ಟಿಸುವಲ್ಲಿ ಮೂರನೇ ಸ್ಥಾನದಲ್ಲಿದ್ದು, ಅದರಲ್ಲಿ ಕೇವಲ ಶೇಕಡಾ ೧ರಷ್ಟು ವಿದ್ಯಾರ್ಥಿಗಳು ಮಾತ್ರ ಗುಣಮಟ್ಟದ ಶಿಕ್ಷಣವನ್ನು ಪಡೆಯುತ್ತಿದ್ದಾರೆ. ಭಾರತವು ಗುಣಮಟ್ಟದ ಶಿಕ್ಷಣವನ್ನು ಒದಗಿಸುವಲ್ಲಿ ಹಿನ್ನಡೆಯನ್ನು ಎದುರಿಸುತ್ತಿರುವುದು ಆತಂಕಕಾರಿ ಸಂಗತಿಯಾಗಿದೆ. ಇದನ್ನು ಸರಿಪಡಿಸುವುದು ಅತ್ಯವಶ್ಯವಾಗಿದೆ. ಪ್ರಸ್ತುತ ದೇಶದ ಶಿಕ್ಷಣ ವ್ಯವಸ್ಥೆಯಲ್ಲಿ ಮುಖ್ಯವಾಗಿ ಉನ್ನತ ಶಿಕ್ಷಣದಲ್ಲಿ ಆಂತರಿಕ ಸುಧಾರಣೆಗಳನ್ನು ಪರಿಚಯಿಸಿ ಹಲವು ವರ್ಷಗಳು ಗತಿಸಿದ್ದರೂ ಶಿಕ್ಷಣ ಕ್ಷೇತ್ರದ ಸಮಸ್ಯೆಗಳು ನಿವಾರಣೆಯಾಗದೆ ಇರುವುದು ವಿಷಾದಕರ ಸಂಗತಿ.

ಭಾರತವು ಶೇಕಡಾ ೭೪.೪ರಷ್ಟು ಸಾಕ್ಷರತೆಯನ್ನು ಹೊಂದಿದ್ದು, ಕೇವಲ ಶೇಕಡಾ ೧೯.೦೪ರಷ್ಟು ಜನರು ಮಾತ್ರ ಉನ್ನತ ಶಿಕ್ಷಣ ಹೊಂದಿದ್ದಾರೆ. ಅದನ್ನು ೨೦೨೧-೨೨ಕ್ಕೆ ಶೇಕಡಾ ೩೨.೦೦ರಷ್ಟು ಹೆಚ್ಚಿಸುವ ಗುರಿಯನ್ನು ಸರಕಾರ ಹೊಂದಿದೆ. ಉನ್ನತ ಶಿಕ್ಷಣ ಪಡೆದ ಪದವೀಧರರಲ್ಲಿ ಉದ್ಯೋಗ ನಿರ್ವಹಣಾ



ಸಾಮರ್ಥ್ಯವನ್ನು ವೃದ್ಧಿಸುವುದು ಸದ್ಯದ ಸವಾಲಾಗಿದೆ. ನಾಸ್ಕೋಮ್ ಹಾಗೂ ಮೆಕಿನ್‌ಸೆ ಸಮೀಕ್ಷೆಯ ಪ್ರಕಾರ ಶೇಕಡಾ ೭೫ರಷ್ಟು ತಾಂತ್ರಿಕ ಹಾಗೂ ಎಂಜಿನಿಯರಿಂಗ್ ಪದವೀಧರರು ಉದ್ಯೋಗ ನಿರ್ವಹಿಸಲು ಅಸಮರ್ಥರಾಗಿದ್ದಾರೆ; ಕೇವಲ ಶೇಕಡಾ ೫ರಷ್ಟು ಪದವೀಧರರು ಉದ್ಯೋಗಕ್ಕಾಗಿ ಯೋಗ್ಯತೆ ಹೊಂದಿದ್ದಾರೆಂದು ವರದಿಯಾಗಿದೆ. ಉದ್ಯೋಗ ನಿರ್ವಹಣಾ ಸಾಮರ್ಥ್ಯದ ಕೊರತೆ ಸಾಮಾನ್ಯ ಪದವೀಧರರಲ್ಲಿ ಇನ್ನೂ ಗಂಭೀರವಾಗಿರುವುದನ್ನು ಅಲ್ಲಗಳೆಯುವಂತಿಲ್ಲ.

ಪ್ರಸ್ತುತ, ಉನ್ನತ ಶಿಕ್ಷಣ ವ್ಯವಸ್ಥೆಯಲ್ಲಿ ವ್ಯಾಸಂಗ ಮುಗಿಸಿದ ಪದವೀಧರರಲ್ಲಿ "ಉದ್ಯೋಗ ನಿರ್ವಹಣಾ ಸಾಮರ್ಥ್ಯದ" ಕೊರತೆಯಿಂದಾಗಿ ಬಹಳಷ್ಟು ಪದವೀಧರರು ನಿರುದ್ಯೋಗಿಗಳಾಗಿ ಹಾಗೂ ತಡವಾಗಿ ಉದ್ಯೋಗ ಪಡೆಯುವುದು ಕಂಡುಬರುತ್ತಿದೆ. ಇದರೊಂದಿಗೆ ಪದವೀಧರರು ಹಾಗೂ ಉದ್ಯೋಗಾವಕಾಶಗಳ ಪ್ರಮಾಣದ ಅಂತರ, ಆರ್ಥಿಕ ಚಟುವಟಿಕೆಗಳ ಏರಿಳಿತಗಳು ಮುಂತಾದ ಸಂಗತಿಗಳು ನಿರುದ್ಯೋಗಿಗಳನ್ನು ಸೃಷ್ಟಿಸುತ್ತಿವೆ. ಪದವೀಧರನು ಅವಶ್ಯಕ ಪದವಿಯನ್ನು ಪಡೆದು ಉದ್ಯೋಗ ನಿರ್ವಹಿಸಲು ಬೇಕಾದ ಕೌಶಲ್ಯಗಳ ಕೊರತೆಯಿಂದಾಗಿ ಉದ್ಯೋಗಾವಕಾಶದಿಂದ ವಂಚಿತನಾಗಿರುವ ಸನ್ನಿವೇಶ ಗಂಭೀರವಾಗಿದೆ. ಇದಕ್ಕೆ ಮುಖ್ಯ ಕಾರಣ ವಿದ್ಯಾರ್ಥಿಯು ವ್ಯಾಸಂಗದಲ್ಲಿ ಪಡೆದಂತಹ ಜ್ಞಾನವು ವಾಸ್ತವಿಕವಾಗಿ ಉದ್ಯೋಗ ನಿರ್ವಹಿಸಲು ಪೂರಕವಾಗಿಲ್ಲ. ಇದನ್ನು ಸರಿಪಡಿಸಲು ವಿದ್ಯಾರ್ಥಿಗಳಿಗೆ ಅವರ ಕಲಿಕೆಯ ಹಂತದಲ್ಲಿಯೇ ಉದ್ದಿಮೆ ಮತ್ತು ಉದ್ಯೋಗ ಮಾರುಕಟ್ಟೆ ಬಯಸುವಂತಹ ಕೌಶಲ್ಯಗಳನ್ನು ಒದಗಿಸಿದರೆ ಪದವೀಧರನಲ್ಲಿರುವ ಉದ್ಯೋಗ ನಿರ್ವಹಣಾ ಸಾಮರ್ಥ್ಯದ ಕೊರತೆಯನ್ನು ನಿಯಂತ್ರಿಸಬಹುದು.

ಸುಮಾರು ಎರಡು ದಶಕಗಳ ಪೂರ್ವದಲ್ಲಿ ಉದ್ಯೋಗ ನಿರ್ವಹಣಾ ಸಾಮರ್ಥ್ಯವೆಂಬ ಪರಿಕಲ್ಪನೆ ಇಷ್ಟೊಂದು ಮಹತ್ವವನ್ನು ಪಡೆದಿರಲಿಲ್ಲ. ಕಾರಣ ಆ ಸಮಯದಲ್ಲಿ ಪದವೀಧರರ ಪ್ರಮಾಣ ಹಾಗೂ ಉದ್ಯೋಗಾವಕಾಶಗಳ ಲಭ್ಯತೆ ನಡುವಿನ ಅಂತರ ಕಡಿಮೆಯಾಗಿದ್ದು, ವಿಜ್ಞಾನ ಹಾಗೂ ತಂತ್ರಜ್ಞಾನವು ಈಗಿನಷ್ಟು ಬೆಳೆದಿರಲಿಲ್ಲ. ಮಾರುಕಟ್ಟೆಯಲ್ಲಿ ವಸ್ತುವು ತನ್ನ ಅಸ್ತಿತ್ವವನ್ನು ಉಳಿಸಿಕೊಂಡು ಹೆಚ್ಚು ಜನತೆಯ ಕೈಸೇರಿ ಉದ್ದಿಮೆದಾರನ ಮೂಲ ಗುರಿಯನ್ನು ಸಾಧಿಸಬೇಕಾದರೆ ಅದು ಖಂಡಿತವಾಗಿಯೂ ಉತ್ತಮ ಗುಣಮಟ್ಟದ್ದು, ಆಕರ್ಷಕ, ಬಾಳಿಕೆದಾಯಕ, ವಿಶಿಷ್ಟ ಹಾಗೂ ಗ್ರಾಹಕನಿಗೆ ತೃಪ್ತಿಯನ್ನು ಕೊಡುವಂತಹದ್ದಾಗಿರಬೇಕು. ಹಾಗೆಯೇ ಒಬ್ಬ ಪದವೀಧರ ಉದ್ಯೋಗ ಮಾರುಕಟ್ಟೆಯಲ್ಲಿ ತನ್ನ ಪದವಿಗೆ ಅನುಗುಣವಾಗಿ ಉದ್ಯೋಗ ಹೊಂದಿ, ಅದನ್ನು ನಿರ್ವಹಿಸಿಕೊಂಡು ಹೋಗಬೇಕಾದರೆ ಆತನು ಉತ್ತಮ ಗುಣಮಟ್ಟದ ಶಿಕ್ಷಣದ ಜೊತೆಗೆ ಅತಿ ಅವಶ್ಯಕ ಕೌಶಲ್ಯಗಳಾದ ಸಂವಹನ ಕೌಶಲ್ಯ, ವ್ಯಾವಹಾರಿಕ ಕೌಶಲ್ಯ, ಸಂದರ್ಶನ ಕೌಶಲ್ಯ, ಸಮಯ ನಿರ್ವಹಣಾ ಕೌಶಲ್ಯ, ಪರಿಕಲ್ಪನಾ ಕೌಶಲ್ಯ, ವಿಶ್ಲೇಷಣಾ ಕೌಶಲ್ಯ, ಶಾಬ್ದಿಕ ಕೌಶಲ್ಯ, ಒತ್ತಡ ನಿರ್ವಹಣಾ ಕೌಶಲ್ಯ, ತಾಂತ್ರಿಕ ಕೌಶಲ್ಯ ಹಾಗೂ ಅಂತರ ವ್ಯಕ್ತಿತ್ವ ಕೌಶಲ್ಯಗಳನ್ನು ಕರಗತ ಮಾಡಿಕೊಳ್ಳಬೇಕು. ಈ ಎಲ್ಲಾ ಕೌಶಲ್ಯಗಳ ಸಮ್ಮಿಲನದ ಸಮಗ್ರ ಪರಿಕಲ್ಪನೆ ಉದ್ಯೋಗ ನಿರ್ವಹಣಾ ಸಾಮರ್ಥ್ಯವಾಗಿದೆ. ಅಂದರೆ ಪದವೀಧರ ತನ್ನ ಪದವಿಗೆ ಅನುಗುಣವಾಗಿ ಪದವಿ ಪಡೆಯಲು ವ್ಯಯಮಾಡಿದ ಶ್ರಮ, ಸಮಯ ಹಾಗೂ ಹಣಕ್ಕೆ ತಕ್ಕಂತೆ ಪದವಿ ಪಡೆದ ನಂತರ ಕೂಡಲೇ ಆತನು ಉದ್ಯೋಗಸ್ಥನಾಗಿ ಅದನ್ನು ಸಮರ್ಥವಾಗಿ ನಿರ್ವಹಿಸುವ ಸಾಮರ್ಥ್ಯವೇ ಉದ್ಯೋಗ ನಿರ್ವಹಣಾ ಸಾಮರ್ಥ್ಯವಾಗಿದೆ.

**ಪ್ರಸ್ತುತ ವ್ಯವಸ್ಥೆಯಲ್ಲಿನ ಕೊರತೆಗಳು :**

ಪದವೀಧರರಲ್ಲಿ ಉದ್ಯೋಗ ನಿರ್ವಹಣಾ ಸಾಮರ್ಥ್ಯದ ಕೊರತೆಗೆ ಶಿಕ್ಷಣ ವ್ಯವಸ್ಥೆಯ ಪಾಲುದಾರರಾದ ಸರಕಾರ, ವಿಶ್ವವಿದ್ಯಾಲಯಗಳು, ಶೈಕ್ಷಣಿಕ ಸಂಸ್ಥೆಗಳು, ಶಿಕ್ಷಕ ಸಮೂಹ, ವಿದ್ಯಾರ್ಥಿ ಸಮೂಹ, ಪಾಲಕರು ಹಾಗೂ ಸಮಾಜ ಇವರೆಲ್ಲರೂ ಜವಾಬ್ದಾರರಾಗಿರುವುದನ್ನು ಕೆಳಗಿನ ಸಂಗತಿಗಳು ಸ್ಪಷ್ಟಪಡಿಸುತ್ತವೆ:

✶ ಪ್ರಸ್ತುತ, ಶೈಕ್ಷಣಿಕ ಪದವಿ ವಿಷಯಗಳ ಪಠ್ಯಕ್ರಮಗಳ ಜೊತೆಗೆ ವಾಸ್ತವಿಕ ಜ್ಞಾನ ಬೋಧನೆಯ ಕೊರತೆ ಕಂಡುಬರುತ್ತಿದೆ. ಕಾರಣ ಅನುಸರಿಸುತ್ತಿರುವ ಪಠ್ಯಕ್ರಮ ಪುರಾತನ ಹಾಗೂ ಅಪ್ರಚಲಿತವಾಗಿದೆ. ಪಠ್ಯಕ್ರಮ ಹಾಗೂ ಬೋಧನಾ ವಿಧಾನಗಳ ಪುನರ್ ನಿರೂಪಣೆಯಾಗಿಲ್ಲ. ಇದು ಉದ್ಯೋಗ ಮಾರುಕಟ್ಟೆ ಬಯಸುವ ಪದವೀಧರನನ್ನು ಸೃಷ್ಟಿಸುವಲ್ಲಿ ಹಿನ್ನಡೆಯನ್ನುಂಟುಮಾಡಿದೆ.

✶ ಶೈಕ್ಷಣಿಕ ವಿಶ್ವವಿದ್ಯಾಲಯಗಳು / ಸಂಸ್ಥೆಗಳು ಮತ್ತು ಉದ್ದಿಮೆಗಳ ನಡುವೆಯೂ ಸಹ ಒಪ್ಪಂದದ ಕೊರತೆ, ಪರಸ್ಪರ ಶೈಕ್ಷಣಿಕ ಹಾಗೂ ಪ್ರಾಯೋಗಿಕ ಒಡಂಬಡಿಕೆಯ ಕಾರ್ಯಾಚರಣೆಯ ಕೊರತೆ ಕಂಡುಬರುತ್ತಿದೆ. ಇದರಿಂದ ವಿದ್ಯಾರ್ಥಿಗಳು ವ್ಯಾಸಂಗದ ಹಂತದಲ್ಲಿ ಉದ್ದಿಮೆಯಲ್ಲಿನ ವಾಸ್ತವಿಕ ಕೆಲಸದ ಅನುಭವ ಪಡೆಯಲು ವಿಫಲರಾಗುತ್ತಿದ್ದಾರೆ.

✶ ವಿಶ್ವವಿದ್ಯಾಲಯಗಳು / ಶೈಕ್ಷಣಿಕ ಸಂಸ್ಥೆಗಳು ಹಾಗೂ ಉದ್ದಿಮೆಗಳು ಸಮನ್ವಯದಿಂದ, ಸಹಭಾಗಿತ್ವದಲ್ಲಿ ನಿಯೋಜನೆ ಮತ್ತು ಸಂಶೋಧನೆಗಳನ್ನು ಹೆಚ್ಚಿನ ಪ್ರಮಾಣದಲ್ಲಿ ಹಮ್ಮಿಕೊಳ್ಳುತ್ತಿಲ್ಲ. ಸಹಭಾಗಿತ್ವದ ಕಾರ್ಯಗಳಿಗೆ ಪ್ರೋತ್ಸಾಹ, ಹಣಕಾಸಿನ ನೆರವು, ಮೂಲಭೂತ ಸೌಕರ್ಯಗಳ ಕೊರತೆ ಹಿನ್ನಡೆಯನ್ನು ಉಂಟುಮಾಡಿವೆ.

✶ ಶಿಕ್ಷಣ ವ್ಯವಸ್ಥೆಯಲ್ಲಿ ಆದರ್ಶ ಶಿಕ್ಷಕ (ಉಪನ್ಯಾಸಕ) – ವಿದ್ಯಾರ್ಥಿ ಅನುಪಾತದ ಕೊರತೆಯಿಂದಾಗಿ; ವಿದ್ಯಾರ್ಥಿಗಳ ವೈಯಕ್ತಿಕ ಕಾಳಜಿ, ಮಾರ್ಗದರ್ಶನ ಹಾಗೂ ಸರ್ವತೋಮುಖ ಬೆಳವಣಿಗೆ ಸಾಧಿಸಲು ಹಿನ್ನಡೆಯಾಗಿದೆ.

✶ ಬಹುತೇಕ ಶೈಕ್ಷಣಿಕ ಸಂಸ್ಥೆಗಳಲ್ಲಿನ ವಿದ್ಯಾರ್ಥಿಗಳು, ಕಲ್ಯಾಣ ಹಾಗೂ ಉದ್ಯೋಗ ಮಾಹಿತಿ ಅಧಿಕಾರಿ ಸಮರ್ಪಕವಾಗಿ ಕಾರ್ಯ ನಿರ್ವಹಿಸಲು ಸಾಧ್ಯವಾಗುತ್ತಿಲ್ಲ; ಕಾರಣ ಅತಿಯಾದ ಕಾರ್ಯದ ಒತ್ತಡ ಹಾಗೂ ಅವಶ್ಯಕ ಸೌಲಭ್ಯಗಳ ಕೊರತೆಯಿಂದಾಗಿ ಅಧಿಕಾರಿಯ ಕಾರ್ಯದಕ್ಷತೆಯು ಕುಗ್ಗಿ ವಿದ್ಯಾರ್ಥಿಯ ವೈಯಕ್ತಿಕ ಕಾಳಜಿ, ಸಮಾಲೋಚನೆ, ಮಾರ್ಗದರ್ಶನ, ಭವಿಷ್ಯತ್ತಿನ ಯೋಜನೆಯ ರಚನೆ ಹಾಗೂ ಅದನ್ನು ಅನುಷ್ಠಾನಗೊಳಿಸಲು ಹಿನ್ನಡೆಯುಂಟಾಗಿದೆ.

✶ ಉನ್ನತ ಶಿಕ್ಷಣ ಸಂಸ್ಥೆಗಳ ಸಂಖ್ಯೆಯಲ್ಲಿನ ವೇಗದ ಹೆಚ್ಚಳ, ಅರ್ಹ ಉಪನ್ಯಾಸಕರ ಕೊರತೆ, ವೃತ್ತಿ ಭದ್ರತೆ ಇಲ್ಲದಿರುವುದು, ಕಡಿಮೆ ವೇತನ, ತರಬೇತಿಯ ಕೊರತೆ ಮತ್ತು ಮೂಲ ಸೌಕರ್ಯಗಳ ಅಭಾವ ಮುಂತಾದ ಸಂಗತಿಗಳು ಬೋಧಕರ ಕಾರ್ಯಕ್ಷಮತೆಯ ಮೇಲೆ ಪರಿಣಾಮ ಬೀರುತ್ತಿರುವ ಸಂಗತಿಯನ್ನು ಕಾಣಬಹುದಾಗಿದೆ.

✶ ವಿದ್ಯಾರ್ಥಿಗಳಲ್ಲಿ ವಿದ್ಯಾಭ್ಯಾಸದ ಬಗ್ಗೆ ಕಾಳಜಿ, ಪ್ರಾಮಾಣಿಕತೆ, ತಾಳ್ಮೆ, ಆಸಕ್ತಿ, ಶ್ರದ್ಧೆ, ಭದ್ರತೆ ಮುಂತಾದವುಗಳನ್ನು ಕಾಣದೆ ಇರುವುದು ಅವರ ಉದ್ಯೋಗ ನಿರ್ವಹಣಾ ಸಾಮರ್ಥ್ಯವು ಕುಂಠಿತವಾಗಲು ಕಾರಣಗಳಾಗಿವೆ.

✶ ಶೈಕ್ಷಣಿಕ ಸಂಸ್ಥೆಗಳ ಆವರಣ ಸಂದರ್ಶನಗಳು, ಉದ್ಯೋಗ ಜಾತ್ರೆಗಳು ಹಾಗೂ ಉದ್ದಿಮೆ/ಉದ್ಯೋಗ ಪ್ರದರ್ಶನಗಳು ಇತ್ತೀಚೆಗೆ ಹೆಚ್ಚಿನ ಸಂಖ್ಯೆಯಲ್ಲಿ ಜರುಗುತ್ತಿದ್ದರೂ ಇವುಗಳಲ್ಲಿ ಆಯ್ಕೆಯಾಗುವ ಪದವೀಧರರು ಅರೆ–ದಕ್ಷರು ಹಾಗೂ ಅರೆ–ಉದ್ಯೋಗ ನಿರ್ವಹಣಾ ಸಾಮರ್ಥ್ಯವನ್ನು ಹೊಂದಿರುವುದು ಕಂಡುಬರುತ್ತಿದೆ. ಹೀಗಾಗಿ ಪದವೀಧರರನ್ನು ಆಯ್ಕೆ ಮಾಡಿದಂತಹ (ಕಂಪನಿಗಳು) ಉದ್ದಿಮೆಗಳು ಅವರಿಗೆ ನಿರ್ವಹಣಾ ಸಾಮರ್ಥ್ಯಗಳನ್ನು ನೀಡಲು ಮತ್ತು ಕೆಲವು ತಿಂಗಳುಗಳವರೆಗೆ ತರಬೇತಿಗಾಗಿ ಲಕ್ಷಾಂತರ ರೂಪಾಯಿಗಳನ್ನು ವ್ಯಯಮಾಡುತ್ತಿವೆ. ಇದು ಉದ್ದಿಮೆಗಳಿಗೆ ಹೆಚ್ಚಿನ ಹೊರೆಯಲ್ಲವೇ ?

✶ ಉದ್ಯೋಗಾವಕಾಶಗಳ ಲಭ್ಯತೆ ಹಾಗೂ ಉದ್ಯೋಗಾಕಾಂಕ್ಷಿಗಳ ನಡುವಿನ ಪ್ರಮಾಣದಲ್ಲಿನ ಅಂತರದ ಹೆಚ್ಚಳದಿಂದಾಗಿ ಉದ್ಯೋಗ ನಿರ್ವಹಣಾ ಸಾಮರ್ಥ್ಯದ ಪರಿಕಲ್ಪನೆ ಉನ್ನತ ಶಿಕ್ಷಣ ವ್ಯವಸ್ಥೆಯಲ್ಲಿ ಹೆಚ್ಚಿನ ಮಹತ್ವ ಪಡೆಯುತ್ತಿದೆ. ನಾಸ್ಕೋಮ್ – ಮೆಕಿನ್‌ಸೆ ಒಂದು ಅಧ್ಯಯನದ ವರದಿ ಪ್ರಕಾರ ಭಾರತವು ಎಂಜಿನಿಯರ್ ಹಾಗೂ ತಾಂತ್ರಿಕ ಪದವೀಧರರ ಸೃಷ್ಟಿಯಲ್ಲಿ ಜಾಗತಿಕವಾಗಿ ಎರಡನೆಯ ಸ್ಥಾನದಲ್ಲಿದೆ. ಪ್ರತಿವರ್ಷ ಸುಮಾರು ೫೦,೦೦೦ ವಿದ್ಯಾರ್ಥಿಗಳು ತಾಂತ್ರಿಕ ಪದವಿಯನ್ನು ಪಡೆಯುತ್ತಿದ್ದಾರೆ. ಇವರಲ್ಲಿ ಶೇಕಡಾ ೭೫ರಷ್ಟು ಪದವೀಧರರು ಉದ್ಯೋಗ ನಿರ್ವಹಿಸಲು ಅಸಮರ್ಥರಾಗಿದ್ದು, ಶೇಕಡಾ ೩೦ರಷ್ಟು

ಪದವೀಧರರು ಯಾವ ತರಬೇತಿಯೂ ಇಲ್ಲದೆ ನೇರವಾಗಿ ಉದ್ಯೋಗ ಪಡೆಯಲು ಯೋಗ್ಯರಿದ್ದಾರೆ. ಉಳಿದಂತೆ ಶೇಕಡಾ ೫೦ರಷ್ಟು ಪದವೀಧರರು ತರಬೇತಿಯ ಮೂಲಕ ಉದ್ಯೋಗವನ್ನು ಪಡೆಯುವ ಯೋಗ್ಯತೆ ಹೊಂದಿದ್ದಾರೆಂದು ತಿಳಿದುಬಂದಿದೆ.




**ಉದ್ಯೋಗ ನಿರ್ವಹಣಾ ಸಾಮರ್ಥ್ಯವನ್ನು ಹೆಚ್ಚಿಸಲು ಅನುಸರಿಸುವ ಕ್ರಮಗಳು :**

✴ ಉದ್ದಿಮೆಯು ದೇಶದ ಉನ್ನತ ಶಿಕ್ಷಣ ವ್ಯವಸ್ಥೆಯಲ್ಲಿನ ವಿಷಯಗಳ ಪಠ್ಯಕ್ರಮ, ಬೋಧನಾ ವಿಧಾನಗಳಲ್ಲಿ ಬದಲಾವಣೆಗಳನ್ನು ತರಬೇಕಾಗಿದೆ. ವಿಷಯಗಳ ಪಠ್ಯಕ್ರಮದ ರಚನೆಯ ಸಂದರ್ಭದಲ್ಲಿ ಹಾಗೂ ಉದ್ಯೋಗ ಮಾರುಕಟ್ಟೆಯ ಪರಿಣತರ, ತಜ್ಞರ, ಉದ್ಯಮಶೀಲರ ಸಲಹೆ–ಸೂಚನೆಗಳನ್ನು ಪರಿಗಣಿಸಿ, ಪದವೀಧರರಲ್ಲಿ ನಿರೀಕ್ಷಿಸುವ ಅವಶ್ಯಕ ಕೌಶಲ್ಯಗಳ ವೃದ್ಧಿಯ ಸಂಗತಿಗಳನ್ನು ಅಳವಡಿಸಿ ಪಠ್ಯಕ್ರಮ ಹಾಗೂ ಬೋಧನಾ ವಿಧಾನದಲ್ಲಿ ಬದಲಾವಣೆಯಾಗಬೇಕಾಗಿದೆ.

✴ ಪದವೀಧರರಿಗೆ ಕಲಿಕೆಯ ಹಂತದಲ್ಲೇ ವಿಷಯಗಳಿಗೆ ಅನುಗುಣವಾಗಿ ಉದ್ದಿಮೆ ಸಂಸ್ಥೆಯಲ್ಲಿ ಕನಿಷ್ಠ ಸೇವೆ ಕಲಿಕಾ ಅವಧಿಯನ್ನು ಕಡ್ಡಾಯಗೊಳಿಸಬೇಕು. ಇದು ಪದವೀಧರರು ಉತ್ತಮ ಉದ್ಯೋಗ ನಿರ್ವಹಣಾ ಸಾಮರ್ಥ್ಯ ಹೊಂದಲು ಸಹಾಯಕಾರಿಯಾಗುತ್ತದೆ. ಕಾರಣ ಕನಿಷ್ಠ ಸೇವೆ ಕಲಿಕಾ ಅವಧಿಯು ಪದವೀಧರನಿಗೆ ಉದ್ದಿಮೆ/ಉದ್ಯೋಗ ಮಾರುಕಟ್ಟೆ ವಾತಾವರಣ ಪರಿಚಯಿಸುವುದರ ಜೊತೆಗೆ ಸೇವಾ ಅನುಭವವನ್ನು ಕಲಿಯಲು ಪ್ರೋತ್ಸಾಹಿಸುತ್ತದೆ. ಈ ಕಾರ್ಯಕ್ರಮದ ಅನುಷ್ಠಾನವು ಉನ್ನತ ಶಿಕ್ಷಣ ವ್ಯವಸ್ಥೆ – ಪದವೀಧರ – ಉದ್ದಿಮೆ ವಲಯಗಳ ನಡುವೆ ಪರಸ್ಪರ ಗೆಲುವಿನ ಪರಿಸರವನ್ನು ಸೃಷ್ಟಿಸುತ್ತದೆ. ಶಿಕ್ಷಣ ಸಂಸ್ಥೆ ಹಾಗೂ ಉದ್ದಿಮೆಗಳು ಸಹಭಾಗಿತ್ವದಲ್ಲಿ ಸಂಶೋಧನೆಗಳನ್ನು ಕೈಗೊಳ್ಳಲು ಉತ್ತಮ ಸಂಬಂಧ ವೃದ್ಧಿಗೆ ಈ ಕಾರ್ಯಕ್ರಮ ಸಹಾಯಕವಾಗುತ್ತದೆ.

✴ಉನ್ನತ ಶಿಕ್ಷಣ ವ್ಯವಸ್ಥೆಯಲ್ಲಿ ಉಪನ್ಯಾಸಕ ವರ್ಗದವರಿಗೆ ವೃತ್ತಿ ಭದ್ರತೆ, ಹೆಚ್ಚಿನ ವೇತನ, ಶೈಕ್ಷಣಿಕ ಸ್ವಾತಂತ್ರ್ಯವನ್ನು ಒದಗಿಸಬೇಕು; ಆಚರಣೆಯಲ್ಲಿ ಇರುವಂತಹ ತಾತ್ಕಾಲಿಕ / ಒಪ್ಪಂದದ / ಗೌರವ /ಅರೆಕಾಲಿಕ ಮುಂತಾದ ಉಪನ್ಯಾಸಕ ಸೇವೆಗಳನ್ನು ಕೊನೆಗೊಳಿಸಿ ಖಾಯಂ ನೇಮಕಾತಿಗಳನ್ನು ಜಾರಿಗೆ ತರಬೇಕಾಗಿದೆ. ಇದು ಆಂತರಿಕ ಶೈಕ್ಷಣಿಕ ಸುಧಾರಣೆಗಳನ್ನು ತರಲು ಅನುವು ಮಾಡಿಕೊಡುತ್ತದೆ.

✴ಉಪನ್ಯಾಸಕ ಸಮೂಹವು ವಿದ್ಯಾರ್ಥಿಗಳಿಗೆ ಪಠ್ಯ ವಿಷಯಗಳ ಬೋಧನೆಯ ಜೊತೆಗೆ ವೃತ್ತಿ ಕೌಶಲ್ಯಗಳು, ಮೃದು ಕೌಶಲ್ಯಗಳು ಹಾಗೂ ಜೀವನ ಕೌಶಲ್ಯಗಳನ್ನು ಪರಿಚಯಿಸುವುದು ಹಾಗೂ ವೃದ್ಧಿಪಡಿಸಲು ವಿವಿಧ ನಿದರ್ಶನಗಳನ್ನು, ಕಾರ್ಯಕ್ರಮಗಳನ್ನು ನೀಡುವ ವ್ಯವಸ್ಥೆಯನ್ನು ಜಾರಿಗೆ ತರಬೇಕಾಗಿದೆ. ವಿದ್ಯಾರ್ಥಿಗಳಿಗೆ ಪಠ್ಯೇತರ ಚಟುವಟಿಕೆಗಳಾದ ಎನ್.ಸಿ.ಸಿ, ಎನ್.ಎಸ್.ಎಸ್, ರೆಡ್ ಕ್ರಾಸ್, ಸ್ಕೌಟ್ ಮತ್ತು ಗೈಡ್ಸ್, ಕ್ರೀಡೆ ಹಾಗೂ ಇತರ ಸಾಂಸ್ಕೃತಿಕ ಚಟುವಟಿಕೆಗಳಲ್ಲಿ ಭಾಗವಹಿಸಲು ಪ್ರೋತ್ಸಾಹ, ಕಾಲಾವಕಾಶ, ಮಾರ್ಗದರ್ಶನಗಳನ್ನು ನೀಡಬೇಕಾಗಿದೆ. ಈ ಸಂಗತಿಗಳು ಪದವೀಧರರು ಕಲಿಕಾ ಹಂತದಲ್ಲಿ ತಮ್ಮ ಉದ್ಯೋಗ ನಿರ್ವಹಣಾ ಸಾಮರ್ಥ್ಯವನ್ನು ಹೆಚ್ಚಿಸಿಕೊಳ್ಳಲು ಪೂರಕವಾಗಿರುತ್ತವೆ.

✴ ಉನ್ನತ ಶಿಕ್ಷಣ ಸಂಸ್ಥೆಗಳು ಕಡ್ಡಾಯವಾಗಿ ಉದ್ಯೋಗ ಮಾಹಿತಿ ಮತ್ತು ಸಲಹಾ ಅಧಿಕಾರಿಯನ್ನು ನೇಮಿಸಿ ಅವಶ್ಯವಿರುವಂತಹ ಸ್ವಾತಂತ್ರ್ಯ ಮತ್ತು ಸೌಲಭ್ಯಗಳನ್ನು ಒದಗಿಸಬೇಕು. ಇದು ಅಧಿಕಾರಿಗಳು ಉದ್ಯೋಗ ಮಾರುಕಟ್ಟೆ ಬೇಡಿಕೆ / ಸ್ವರೂಪ ಲಭ್ಯವಿರುವ ಅವಕಾಶಗಳು ತರಬೇತಿ ಮತ್ತು ಮಾರ್ಗದರ್ಶನ ಮುಂತಾದವುಗಳನ್ನು ಸಮರ್ಪಕವಾಗಿ ವಿದ್ಯಾರ್ಥಿಗಳಿಗೆ ತಲುಪಿಸಲು ಸಹಾಯವಾಗುತ್ತದೆ.

✴ ಉನ್ನತ ಶಿಕ್ಷಣ ಸಂಸ್ಥೆಗಳು ಹಳೆಯ ಪದವೀಧರ ಸಂಘವನ್ನು ಸ್ಥಾಪಿಸಬೇಕು. ಹಳೆಯ ವಿದ್ಯಾರ್ಥಿಗಳ ಅಂಕಿಸಂಖ್ಯೆಗಳ ಸಂಗ್ರಹ ಪಡೆದುಕೊಳ್ಳಬೇಕು ಮತ್ತು ಅವರ ಸಂಪರ್ಕವನ್ನು ಹೊಂದುವ ಮೂಲಕ ಯಶಸ್ವಿಯಾಗಿ ವಿವಿಧ ಕ್ಷೇತ್ರಗಳಲ್ಲಿ ಕೆಲಸದಲ್ಲಿ ನಿರತರಾದ ಪದವೀಧರರ ಸಲಹೆ, ಸೂಚನೆ, ಮಾರ್ಗದರ್ಶನ ಮುಂತಾದ ನೆರವನ್ನು ಪಡೆದುಕೊಳ್ಳಬೇಕು.

**ಭಾರತಕ್ಕಿರುವ ಸದವಕಾಶಗಳು :**

ಜಾಗತಿಕವಾಗಿ ಕೆಲವು ಅಭಿವೃದ್ಧಿ ಹೊಂದಿದ ಅರ್ಥವ್ಯವಸ್ಥೆಗಳಲ್ಲಿ ದುಡಿಯುವ, ಜನಶಕ್ತಿ ಕ್ಷೀಣಿಸುತ್ತಿರುವ, ಜೊತೆಗೆ ಅಲ್ಲಿನ ಯುವ ಜನತೆಯ ಪ್ರಮಾಣವು ಕಡಿಮೆ ಇರುವುದು ವರದಿಯಾಗಿದೆ. ಇಂಥ ರಾಷ್ಟ್ರಗಳು ವಯಸ್ಸಾಗುತ್ತಿರುವ ದುಡಿಯುವ ಜನಶಕ್ತಿಯನ್ನು ಉದ್ಯೋಗ ನಿರ್ವಹಣೆಯಲ್ಲಿ ಮುಂದುವರಿಸಿದರೆ ಅಲ್ಲಿನ ಸರ್ಕಾರಗಳು ಅವರ ಆರೋಗ್ಯ ರಕ್ಷಣೆಯ ಮೇಲೆ ಅಪಾರ ಹಣವನ್ನು ವ್ಯಯಿಸುವುದು ಅನಿವಾರ್ಯವಾಗುತ್ತದೆ. ಆದರೆ ಭಾರತವು ಇಂಥ ಸನ್ನಿವೇಶದಿಂದ ಭಿನ್ನವಾಗಿದ್ದು, ಸಾಕಷ್ಟು ದುಡಿಯುವ ಜನಶಕ್ತಿಯನ್ನು ಒಳಗೊಂಡ "ಯುವರಾಷ್ಟ್ರ"ವೆಂದು ಕರೆಯಲ್ಪಡುತ್ತಿದೆ. ಸುಮಾರು ೨೦೨೦ನೇ ಇಸ್ವಿಗೆ ಅಭಿವೃದ್ಧಿ ಹೊಂದಿದ ಅರ್ಥವ್ಯವಸ್ಥೆಗಳಾದ ಚೀನಾ ಮತ್ತು ಅಮೆರಿಕಾದಲ್ಲಿ ಸರಾಸರಿ ೩೭ ವಯಸ್ಸಿನ ಜನಸಂಖ್ಯೆ, ಪಶ್ಚಿಮ ಯೂರೋಪಿನಲ್ಲಿ ಸರಾಸರಿ ೪೫ ವಯಸ್ಸಿನ ಜನಸಂಖ್ಯೆ, ಜಪಾನಿನಲ್ಲಿ ಸರಾಸರಿ ೪೮ ವಯಸ್ಸಿನ ಜನಸಂಖ್ಯೆ ಕಂಡುಬಂದರೆ ಭಾರತದಲ್ಲಿ ಕೇವಲ ಸರಾಸರಿ ೨೯ ವಯಸ್ಸಿನ ಭಾರತೀಯರು ಲಭ್ಯವಿರುತ್ತಾರೆಂಬ ಸಂಗತಿಯು ನಮ್ಮ ಮುಂದಿದೆ. ಈ ಒಂದು ಸದವಕಾಶವನ್ನು ಸಮರ್ಪಕವಾಗಿ ಉಪಯೋಗಿಸಲು ಭಾರತವು ಹೆಚ್ಚುತ್ತಿರುವಂತಹ ಯುವಶಕ್ತಿಗೆ ಅವಶ್ಯವಿರುವ ಉತ್ತಮ ಗುಣಮಟ್ಟದ ಉನ್ನತ ಶಿಕ್ಷಣ ಸೌಲಭ್ಯ, ತರಬೇತಿ ಹಾಗೂ ಉದ್ಯೋಗ ನಿರ್ವಹಣಾ ಸಾಮರ್ಥ್ಯಗಳನ್ನು ಒದಗಿಸಿ "ಜನಾಂಗೀಯ ಲಾಭಲ್ಯ"ವನ್ನು ಪಡೆಯಬೇಕಾಗಿದೆ.

ಅಷ್ಟೇ ಅಲ್ಲದೆ ಭಾರತವು ಯುವಶಕ್ತಿಯನ್ನು ಕೌಶಲ್ಯಯುಕ್ತವಾಗಿ ಪರಿವರ್ತಿಸುವುದರ ಜೊತೆಗೆ ಸದೃಢವಾದ ಮಾಹಿತಿ ತಂತ್ರಜ್ಞಾನ, ಜೈವಿಕ ಹಾಗೂ ನ್ಯಾನೋ ತಂತ್ರಜ್ಞಾನಗಳ ಸಮರ್ಪಕ ಬಳಕೆಯೊಂದಿಗೆ ವಿದೇಶಿ ವ್ಯಾಪಾರ, ವ್ಯವಹಾರಗಳ ಹೊರಗುತ್ತಿಗೆಯಲ್ಲಿ ಅಪಾರ ಪ್ರಮಾಣದ ಉದ್ಯೋಗಗಳ ಅವಕಾಶಗಳು, ವಿದೇಶಿ ವಿನಿಮಯದ ಗಳಿಕೆಯನ್ನು ಮಾಡಲು ಸಾಧ್ಯವಾಗುತ್ತದೆ. ೨೦೨೦ರ ವೇಳೆಗೆ ವ್ಯಾಪಾರ, ವ್ಯವಹಾರಗಳ ಹೊರಗುತ್ತಿಗೆ ಕ್ಷೇತ್ರವು ಸುಮಾರು ೧೭೫ ಬಿಲಿಯನ್ ಅಮೆರಿಕನ್ ಡಾಲರ್‌ನಷ್ಟು ಆದಾಯವನ್ನು ಭಾರತಕ್ಕೆ ತಂದುಕೊಡಲಿದೆಯೆಂದು ತಿಳಿದುಬಂದಿದೆ. ಈ ನಿಟ್ಟಿನಲ್ಲಿ ಲಭ್ಯವಿರುವ ಸದವಕಾಶಗಳನ್ನು ಸಂಪೂರ್ಣವಾಗಿ ಬಳಸಿಕೊಳ್ಳಲು ಭಾರತವು ತನ್ನ ಉನ್ನತ ಶಿಕ್ಷಣ ವ್ಯವಸ್ಥೆ, ಯುವಶಕ್ತಿಯನ್ನು ಉಪಯೋಗಿಸಿಕೊಳ್ಳಬೇಕು. ಇದಕ್ಕಾಗಿ ಹೆಚ್ಚುತ್ತಿರುವ ಯುವಶಕ್ತಿಗೆ ಉತ್ತಮ ಗುಣಮಟ್ಟದ ಶಿಕ್ಷಣ, ಉದ್ಯೋಗ ಮಾರುಕಟ್ಟೆ ಬಯಸುವ ಕೌಶಲ್ಯಗಳನ್ನು ಪೂರೈಸಿ ಉತ್ಪಾದಕ ಮಾನವ ಸಂಪತ್ತಾಗಿ ಪರಿವರ್ತಿಸುವುದು ಅತೀ ಅವಶ್ಯ. ಇದು ಸ್ಪರ್ಧಾತ್ಮಕ ವಾತಾವರಣ ನಿರ್ಮಿಸುವಲ್ಲಿ, ಬಂಡವಾಳ ಹೂಡಿಕೆ ದೇಶದಲ್ಲಿ ಹೆಚ್ಚಿಸುವಲ್ಲಿ ಸಹಾಯಕವಾಗುವುದರೊಂದಿಗೆ ಆರ್ಥಿಕ ಅಭಿವೃದ್ಧಿಗೆ ಪ್ರೇರಣೆಯನ್ನು ನೀಡುತ್ತದೆ. ವಿಶ್ವ ಅಭಿವೃದ್ಧಿ ವರದಿಯ ಪ್ರಕಾರ "ಭಾರತದ ಹೆಚ್ಚುತ್ತಿರುವ ಯುವಶಕ್ತಿಯು ದೇಶದಲ್ಲಿನ ಬಡತನ ಪ್ರಮಾಣವನ್ನು ಕಡಿಮೆ ಮಾಡಿ ಆರ್ಥಿಕ ಬೆಳವಣಿಗೆಯನ್ನು ಹೆಚ್ಚಿಸಲು ಸಾಕಷ್ಟು ಅವಕಾಶಗಳನ್ನು ಒದಗಿಸುತ್ತದೆ." ದೇಶದಲ್ಲಿನ ಬಡತನ, ನಿರುದ್ಯೋಗ, ಸೋಮಾರಿತನ ಮುಂತಾದ ಅನಿಷ್ಟಗಳನ್ನು ಹೊಡೆದೋಡಿಸಲು ಉತ್ತಮ ಗುಣಮಟ್ಟದ ಉನ್ನತ ಶಿಕ್ಷಣ ವ್ಯವಸ್ಥೆಯನ್ನು ದೇಶದ ಎಲ್ಲಾ ಮೂಲೆಗಳಲ್ಲಿನ ಯುವ ಜನತೆಗೆ (ವಿದ್ಯಾರ್ಥಿಗಳಿಗೆ) ತಲುಪಿಸುವಂತಹ ಕಾರ್ಯ ನಡೆಯಬೇಕಾಗಿದೆ.

**ಡಾ॥ ಎಂ. ಎನ್. ಸಿದ್ಧಲಿಂಗಪ್ಪನವರ್**
ಸಹಾಯಕ ಅರ್ಥಶಾಸ್ತ್ರ ಉಪನ್ಯಾಸಕರು, ಸರಕಾರಿ ಮೊದಲ ದರ್ಜೆ ಕಾಲೇಜು
ನವನಗರ, ಬಾಗಲಕೋಟೆ – ೫೮೭ ೧೦೩



## ಧರ್ಮಸಂತಾನ ಭಕ್ತಿ ಭಂಡಾರಿ ಬಸವಣ್ಣ

*ಆಗುಂಬೆ ಎಸ್. ನಟರಾಜ್*

**ಪುಟ : ೪೧೯**

**ಬೆಲೆ : ರೂ. ೩೫೦**

**ಆಗುಂಬೆ ಎಸ್. ನಟರಾಜ್**
೯೪೭, ೩ನೇ ಮುಖ್ಯರಸ್ತೆ
ವಿಜಯನಗರ
ಬೆಂಗಳೂರು – ೪೦

*ಬಸವಣ್ಣನವರ ಜೀವನ ವನ್ನು ಅವರ ಸಾಮಾಜಿಕ ಧಾರ್ಮಿಕ ಸುಧಾರಣೆಗಳನ್ನು ಬಸವಣ್ಣನವರಿಗಿಂತ ಮೊದಲೇ ಪ್ರಚುರದಲ್ಲಿದ್ದ ವಿವಿಧ ಧರ್ಮದ ನೆಲೆಗಟ್ಟಿನಲ್ಲಿ ತೌಲನಿಕವಾಗಿ ಪರೀಕ್ಷೆಗೊಳಪಡಿಸಿರುವ ಕೃತಿಯೇ ಧರ್ಮಸಂತಾನ. ವಚನಗಳ ಸಾರವನ್ನು ಅವುಗಳ ರಚನೆಗೆ ಮೂಲ ಕಾರಣಗಳನ್ನು ಸಂಶೋಧಿಸಿ ಕೃತಿಯಲ್ಲಿ ಸವಿಸ್ತಾರವಾಗಿ ಚರ್ಚಿಸಿದ್ದಾರೆ. ಕೃತಿಯಲ್ಲಿ ೧೯ ಅಧ್ಯಾಯಗಳಿದ್ದು ವೇದಗಳು, ಉಪನಿಷತ್, ಭಗವದ್ಗೀತೆ, ಬುದ್ಧ, ಮಹಾವೀರ, ಅದ್ವೈತ, ಶ್ರೀ ವೈಷ್ಣವ ಮತ, ಸ್ಮೃತಿಗಳು ಹಾಗೂ ಬಿಜ್ಜಳ ಸಮಕಾಲೀನರುಗಳ ಜೀವನದ ಜೊತೆ ಬಸವಣ್ಣನವರ ಜೀವನ ಮತ್ತು ವಚನಗಳ ವೈಶಿಷ್ಟ್ಯಗಳನ್ನು ಚರ್ಚಿಸಿದ್ದಾರೆ. 'ಏಕಂ ಸತ್ ವಿಪ್ರಾಃ ಬಹುಧಾ ವದಂತಿ' ಎಂಬ ವೇದದ ಮಾತು 'ದೇವನೊಬ್ಬ ನಾಮ ಹಲವು' ಎಂಬ ವಚನದಲ್ಲಿ ಪ್ರತಿಫಲಿಸಿರುವುದನ್ನು ತಿಳಿಸುತ್ತಾ ಇಂತಹ ನೂರಾರು ಸಹವರ್ತಿ ಯಾಗುವ ಉದಾಹರಣೆಗಳನ್ನು ಸಫದಾಹರಣವಾಗಿ ಉಲ್ಲೇಖಿಸುತ್ತಾರೆ. ಜಾತಿ ನಿರ್ಮೂಲನೆಯೇ ಮುಖ್ಯವಾಗಿ ಅದಕ್ಕೆ ಜೊತೆಯಾದಂತೆ ಲಿಂಗ ಸಮಾನತೆ, ಕಾಯಕ ಸಮಾನತೆ, ಏಕ ದೇವೋಪಾಸನೆ, ಆಡುನುಡಿಯಲ್ಲಿ ಪ್ರಾರ್ಥನೆ ಭಕ್ತಿ ಸೇವೆ ಅಷ್ಟಾವರಣ, ಪಂಚಾಚಾರಗಳ ತಾತ್ವಿಕತೆಯ ಮೂಲಕ ಸರ್ವ ಸಮಾನತೆಯುಳ್ಳ ಜಾತಿ ಲಿಂಗ, ವರ್ಣ, ವರ್ಗ, ಕರ್ಮರಹಿತ ಸಮಾಜವನ್ನ ನಿರ್ಮಿಸುವುದೇ ಬಸವಣ್ಣನವರ ಜೀವನದ ಗುರಿಯಾಗಿತ್ತು ಎಂಬುದನ್ನು ಬಹುಶ್ರುತ ಅಧ್ಯಯನದ ಮೂಲಕ ಆಗುಂಬೆ ನಟರಾಜರವರು 'ತಮ್ಮ ಭಕ್ತಿ ಭಂಡಾರಿ ಬಸವಣ್ಣ'ರವರ ಕೃತಿಯಲ್ಲಿ ಸಾಬೀತು ಮಾಡಿದ್ದಾರೆ.*

## ಸ್ಮೋಕಿಂಗ್ ಝೋನ್

*ಆರತಿ ಎಚ್. ಎನ್.*

**ಪುಟ : ೮೦** **ಬೆಲೆ : ರೂ. ೮೦**

**ಬಹುರೂಪಿ ಪ್ರಕಾಶನ,** ಬೆಂಗಳೂರು

*"ಹೇಳುವಷ್ಟು ಹೇಳಿದ್ದೇನೆ. ಹೇಳಲಾಗದ್ದು ಬೇಕಾದಷ್ಟಿದೆ. ಹಾಗಾಗಿ ಹೇಳಲು ಇನ್ನೂ ಎಷ್ಟೋ ಉಳಿಸಿಕೊಂಡಿದ್ದೇನೆ" ಎಂದು ವಿನಯದಿಂದ ಹೇಳುವ ಎಚ್. ಎನ್. ಆರತಿಯ ಆರನೆಯ ಕೃತಿ ಇದು. ಇಲ್ಲಿನ ಪ್ರತಿಯೊಂದು ಕವನವೂ ನಿಧಾನವಾಗಿ ತಾಳ್ಮೆಯಿಂದ ಹೆಣ್ಣಿನ ಮನಸ್ಸನ್ನು, ಅದರ ವಿವಿಧ ಪದರಗಳನ್ನು ಬಿಚ್ಚಿಡುತ್ತದೆ. "ಈ ಕವಿತೆಗಳ ಕೇಂದ್ರ ಪ್ರಜ್ಞೆಯಲ್ಲಿ ವರ್ತಮಾನದ ಹೆಣ್ಣು ಬದುಕಿದೆ. ಪುಟ್ಟಪೂರಾ ಬದಲಿದಂತೆ ಕಾಣುವ ವಿದ್ಯಮಾನಗಳ ಅಸಲಿಯತ್ತನ್ನ ನಾಜೂಕಾಗಿ ಹರಿಗಡಿಯದಂತೆ ಎಬ್ಬಿ ತಂದು ಎದುರಿಡುವ ತಾಕತ್ತಿದೆ. ಅತಿ ನಾಗರಿಕ ಜಗತ್ತಿನಲ್ಲಿ ವ್ಯಕ್ತಿಗಳ ಸೌಖ್ಯವನ್ನಳೆವ ಪ್ಯಾರಾಮೀಟರಿನ ಕಂಪನಾಂಕವನ್ನು ಆ ಪರಿಭಾಷೆಯಲ್ಲೇ ದಾಖಲಿಸಲಾಗಿದೆ" ಎನ್ನುವ ಡಾ॥ ವಿನಯಾ ಅವರ ಮಾತುಗಳು ಈ ಸಂಕಲನದ ಕವಿತೆಗಳ ಒಟ್ಟಂದವನ್ನು ಸಾರರೂಪದಲ್ಲಿ ಹೇಳುತ್ತದೆ. ಸಂಪ್ರದಾಯದ ಹೊರೆಯ ಗಡಿರೇಖೆಗಳನ್ನು ದಾಟಿ ಹಿಂದೆ ನೋಡದೆ ಮುಂದೆ ಸಾಗುವುದು ಮುತ್ತೈದೆ ಪತಿವ್ರತೆಗೆ ಎಷ್ಟೊಂದು ಕಷ್ಟ ಎಂಬುದನ್ನು ಹೇಳುವ "ಹೊರಡಬೇಕಿದೆ ಎಲ್ಲ ಬಿಟ್ಟು" ಕವನ ವರ್ತಮಾನದ ಹೆಣ್ಣಿಗಿರುವ ಸಂಕಟವನ್ನು ಸಮರ್ಥವಾಗಿ ಹೇಳುತ್ತದೆ. 'ಮುರಿಯಲೇಬೇಕು' ಕವನ ಹೆಣ್ಣಿನ ಅಸಂದಿಗ್ಧ ಮನಸ್ಸಿನ ಹಲವು ಎಳೆಗಳನ್ನು ಬಿಚ್ಚಿಡುತ್ತದೆ. ಒಳಗೆ ಹರಿಯುವ ಗುಪ್ತಗಾಮಿನಿ ಪ್ರೀತಿಗೆ ಅಂಗಸಂಗಕ್ಕೆ ಲಿಂಗ ಬೇಕಿದೆ. ಆದರೆ, ಲಿಂಗ ರಾಜಕೀಯದಲ್ಲಿ ಮುರಿದು ಕಟ್ಟುವ, ಕಟ್ಟಿ ಮುರಿಯುವ ಹೆಣ್ಣು–ಗಂಡುಗಳ ಆಸೆ–ಭಾಷೆ, ಕನಸು–ಮನಸುಗಳ ಪರಿಗೆ ಎಚ್ಚರಿಕೆಯೂ ಇರಬೇಕೆಂದು ಹೇಳುತ್ತಿದೆ. ಮೂವತ್ತೊಂಭತ್ತು ಕವನಗಳ ಕಂತೆಯಾದ 'ಸ್ಮೋಕಿಂಗ್ ಝೋನ್' ಹೆಣ್ಣಿನ ವಿಶಾಲ ಅನುಭವಗಳ ಝೋನ್‌ಅನ್ನು ಪರಿಚಯ ಮಾಡಿಕೊಡುವಲ್ಲಿ ಯಶಸ್ವಿಯಾಗಿದೆ.*

## ಅನುದಿನದ ದಂದುಗ

*ವಿನಯಾ ಒಕ್ಕುಂದ*

**ಪುಟ : ೨೨೦** **ಬೆಲೆ : ರೂ. ೧೭೦**

**ಪ್ರಗತಿ ಪ್ರಕಾಶನ,** ಮೈಸೂರು

*ಕನ್ನಡದ ಪ್ರಸಿದ್ಧ ಕವಯಿತ್ರಿ, ಕತೆಗಾರ್ತಿ ಮತ್ತು ವಿಮರ್ಶಕಿ ವಿನಯಾ ಒಕ್ಕುಂದ ಅವರು ವಿಜಯಾ ಕರ್ನಾಟಕ ಪತ್ರಿಕೆಯಲ್ಲಿ ಬರೆಯುತ್ತಿದ್ದ ಅಂಕಣ ಲೇಖನಗಳ ಸಂಗ್ರಹವಿದು. ಇದರಲ್ಲಿ ಒಟ್ಟು 51 ಲೇಖನಗಳಿವೆ. "ಬಂಡವಾಳವಾದವು ಪುರೋಹಿತಶಾಹಿಯ ಪುನರುಜ್ಜೀವನದ ಮೀಟುಗೋಲಾದ ಬಗೆಯನ್ನೂ, ಮೇಲ್ನೋಟಕ್ಕೆ ದುರ್ಬಲವರ್ಗಕ್ಕೆ ಸ್ವಾಭಿಮಾನ ತುಂಬುವ ಪ್ರಯತ್ನಗಳೂ ಆಳದಲ್ಲಿ ವ್ಯವಸ್ಥೆಯನ್ನು ಗಟ್ಟಿಗೊಳಿಸುವ ಮೆಟ್ಟುಗಲ್ಲಾಗುವ ವ್ಯಂಗ್ಯವನ್ನು ಪರಿಣಾಮಕಾರಿಯಾಗಿ ಗುರುತಿಸಿದ್ದಾರೆ" ಎನ್ನುವ ಪ್ರಸಿದ್ಧ ಪತ್ರಕರ್ತ ಮತ್ತು ಅಂಕಣಗಾರ ಡಿ. ಉಮಾಪತಿಯವರು ಮೌಲಿಕ ಮುನ್ನುಡಿಯಲ್ಲಿ ಹೇಳಿರುವ ಮಾತುಗಳು ಈ ಸಂಕಲನದ ಲೇಖನಗಳ ಸ್ವರೂಪವನ್ನು ಪರಿಣಾಮಕಾರಿಯಾಗಿ ಪರಿಚಯಿಸುತ್ತದೆ. ವಿನಯಾ ಅವರ ಸೂಕ್ಷ್ಮ ಮನಸ್ಸಿನ ಲೇಖನಿಗೆ ಇಲ್ಲಿ ದಕ್ಕಿರುವ ವಿಷಯ ವೈವಿಧ್ಯ ಬೆರಗು ಹುಟ್ಟಿಸುತ್ತದೆ. ಅತ್ಯಾಚಾರಿಗಳಾಗುವ ಮಕ್ಕಳು, ಚುನಾವಣೆ, ಯುವಜನರ ಪ್ರೀತಿ, ಪ್ರೇಮ ಪ್ರಕರಣಗಳು, ಆರ್.ಟಿ.ಇ. ಮತ್ತು ಸಾಮಾಜಿಕ ನ್ಯಾಯ, ಸದ್ದಿಲ್ಲದ ಕೊಲೆಗಳು, ಜಾಹೀರಾತುಗಳ ಅವಾಂತರ, ವೃದ್ಧಾಶ್ರಮಗಳಾದ ಊರುಗಳು, ಮಕ್ಕಳ ಮಾರಾಟ, ಮೌಢ್ಯಗಳ ಅನಾಹುತಗಳು, ಲಿಂಗಸೂಕ್ಷ್ಮ ಪಠ್ಯದ ಅಗತ್ಯತೆ, ಮಹಿಳಾ ಕಂಡಕ್ಟರ್, ಗುಜ್ಜರ ಮದುವೆ... ಹೀಗೆ ಹತ್ತು ಹಲವು ವಿಷಯಗಳ ಬಗ್ಗೆ ವಿನಯಾ ಅವರ ವಿವೇಚನೆಯ ಪ್ರತಿಕ್ರಿಯೆಗಳು ಸಮಾಜ ಶಾಸ್ತ್ರಜ್ಞೆಯ ಟಿಪ್ಪಣಿಗಳಂತೆ ನಮಗೆ ಭಾಸವಾಗುತ್ತವೆ. ಹೆಣ್ಣನ್ನು ಭೋಗದ ವಸ್ತುವನ್ನಾಗಿ ಸ್ಥಿರವಾಗಿ ಉಳಿಸಲು ಪುರುಷ ಪ್ರಾಧಾನ್ಯತೆ ಬಂಡವಾಳದೊಂದಿಗೆ ಕೈಜೋಡಿಸಿರುವುದನ್ನು ಗುರುತಿಸುತ್ತಲೇ ಹೆಣ್ಣಿನ ಭಾಷೆಯನ್ನು ಕೇಳಲಾಗದ, ಕೇಳಿದರೂ ತಿಳಿಯಲಾಗದ ಸಂವೇದನಾಹೀನ ಸಮಾಜದ ಬಗ್ಗೆ ಮಿಡಿದ ಲೇಖಕಿಯ ತಳಮಳ ಎದ್ದು ಕಾಣಿಸುತ್ತದೆ.*

– **ಆಶಾ ಎನ್.,** *ಬೆಂಗಳೂರು*

## ನೆನಪಿನ ನಿಕ್ಷೇಪ

*ಡಾ॥ ಎನ್. ಆರ್. ರಮೇಶ್*

**ಪುಟ : ೪೨೨** **ಬೆಲೆ : ರೂ. ೪೫೦**

**ಧರಣಿ ಪ್ರಕಾಶನ,** *ನಂ.೧೦೮, ಧರಣಿ, ೧೯ ನೇ ಅಡ್ಡರಸ್ತೆ, ೭ನೇ ಮುಖ್ಯರಸ್ತೆ, ಬಿ.ಟಿ.ಎಮ್. ೨ನೇ ಹಂತ ಬೆಂಗಳೂರು – ೫೬೦ ೦೭೬*

*ನೆನಪಿನ ನಿಕ್ಷೇಪಕೃತಿ ಶ್ರೀಯುತ ಡಾ॥ ಎನ್. ಆರ್. ರಮೇಶ್‌ರವರ ಆತ್ಮಕಥೆಯಾಗಿದೆ. ಕನ್ನಡದಲ್ಲಿ ಕನ್ನಡಿಗ ಭೂವಿಜ್ಞಾನಿಯೊಬ್ಬರ ವಿಶಿಷ್ಟವಾದ ಆತ್ಮಕಥೆಯಾಗಿದೆ. ಬಹಳ ಉತ್ಸಾಹಿಗಳಾದ ಲೇಖಕರು ತಾವು ಕಂಡುಂಡ ಅನುಭವಗಳನ್ನು ಚಿತ್ರವತ್ತಾಗಿ ಕೃತಿಯಲ್ಲಿ ವರ್ಣಿಸಿದ್ದಾರೆ. ಮತ್ತೆ ಬದುಕಿ ಬಂದ ಜೀವಿ, ತೋಟದಲ್ಲಿ ತುಂಟರ ಕೂಟದಂತ ಅಧ್ಯಾಯಗಳು ಸರೀಸೃಪಗಳ ಒಡನಾಟ, ಹುಲಿಗಳ ಜೊತೆಯ ಸಾಹಸಗಳು ಲೇಖಕರ ಬಾಲ್ಯದ ಸಾಹಸ ಪ್ರವೃತ್ತಿಗಳನ್ನು ಹಾಗೂ ಅವು ಜೀವನದುದ್ದಕ್ಕು ಬೆಳೆದು ಬಂದ ಪರಿಯನ್ನು ಕಟ್ಟಿಕೊಡುತ್ತವೆ. ತ್ರಿಪುರಾದ ಸೆನ್ಸಿಟೀವ್ ಘಟನೆ, ಬರಾಮುರಾಕ್ಯಾಂಪ್ನಲ್ಲಿನ ಘಟನೆ, ಬಿಷಾಲ್ಘರ್ ಫೀಲ್ಡ್‌ನಲ್ಲಿನ ಭೀಕರ ಹತ್ಯೆ, ಚಲೋ ಅರುಣಾಚಲ, ಬ್ರಹ್ಮಪುತ್ರದಲ್ಲಿ ಬ್ರಹ್ಮಗಂಟು ಮುಂತಾದ ಭಾಗಗಳಲ್ಲಿ ಮೈ ರೋಮಾಂಚನಗೊಳಿಸುವ ತಮ್ಮ ಅನುಭವಗಳನ್ನು ಆಕರ್ಷಕ ಪದಗುಚ್ಛಗಳಲ್ಲಿ ಹಿಡಿದಿಟ್ಟಿದ್ದಾರೆ. ಅನ್ವೇಷಣಾಕ್ಷೇತ್ರದಲ್ಲಿ ಕುತೂಹಲಗಳನ್ನು, ವಜ್ರದ ನಿಕ್ಷೇಪಗಳ ಪತ್ತೆ, ಶಿಲಾಯುಗದ ನಾಗರಿಕತೆಯ ಕುರುಹುಗಳು, ಜಲಗಾರರು, ರತ್ನ ಶೋಧಕರ ಜಾಡು ಭಾಗಗಳಲ್ಲಿ ಕಾಣಬಹುದಾಗಿದೆ. ಭೂವಿಜ್ಞಾನ ಹಾಗೂ ಭೂವಿಜ್ಞಾನಿಯೊಬ್ಬರ ಕುರಿತಂತ ಬರೆಹಗಳು ಕನ್ನಡದಲ್ಲಿ ಅಪರೂಪ. ಲೇಖಕರು ತಾವು ಆತ್ಮಕಥೆ ಬರೆಯಲು ಪ್ರಾರಂಭಿಸಿದಾಗ ಅನುಭವಿಸಿದ ಸಂಕಷ್ಟಗಳನ್ನು ತಮ್ಮ ನುಡಿಯಲ್ಲಿ ಭಿನ್ನವಿಸಿಕೊಂಡಿದ್ದಾರೆ. ಕೃತಿಯ ಪುಟಗಳಲ್ಲಿ ಸಾಂದರ್ಭಿಕವಾಗಿ ತಮ್ಮ ಕುಟುಂಬ ವೃತ್ತಿ ಸಂಬಂಧಿ ಫೋಟೋಗಳನ್ನು ಅಚ್ಚು ಹಾಕಿಸಿರುವುದು ಕೃತಿಯ ಮೌಲಿಕತೆಯನ್ನು ಹೆಚ್ಚಿಸಿದೆ. 'ಇದೊಂದು ಕೇವಲ ಆತ್ಮಕಥೆಯಾಗಿರದೆ ಭಾರತದ ಭೂವಿಜ್ಞಾನ ಪರಿಶೋಧನಾ ಇಲಾಖೆಯ ಆತ್ಮಚರಿತ್ರೆಯಾಗಿದೆ' ಎಂಬ ಮುನ್ನುಡಿಕಾರರಾದ ಡಾ॥ ಎನ್. ಆರ್. ಲಲಿತಾಂಬರ ನುಡಿಯು ಅತ್ಯಂತ ಗಮನಾರ್ಹವಾದುದು ಮತ್ತು ಕೃತಿಯ ಮಹತ್ವದ ಸಾರವನ್ನು ಒತ್ತಿ ಹೇಳುವಂತಹುದಾಗಿದೆ. ಕನ್ನಡ ಬರೆಯದೆ ನಲವತ್ತುಕ್ಕೂ ಹೆಚ್ಚು ವರ್ಷ ಭಾರತದ ಮೂಲೆ ಮೂಲೆ ಸುತ್ತಿದ ಭೂವಿಜ್ಞಾನಿ ತಾಯ್ನುಡಿಯಲ್ಲೇ ಆತ್ಮಚರಿತ್ರೆ ಬರೆದು ಕನ್ನಡ ಭಾಷೆಗೆ, ಕನ್ನಡಿಗರಿಗೆ ಅತ್ಯಮೂಲ್ಯ ಕಾಣಿಕೆಯನ್ನು ನೀಡಿದ್ದಾರೆ.*

– **ಉಮೇಶ್ ಟಿ. ಪಿ.,** *ಬೆಂಗಳೂರು*

# ಬಯಲ ಬೆಳಕಿನ ಬೀಜ





ನಾವು ಓದುವ ಪಠ್ಯಗಳಲ್ಲಿ ಪ್ರಾಯಶಃ ಹೆಚ್ಚಿನವು ನಮ್ಮ ಬದುಕಿಗೆ ಬೇಕಾದವುಗಳಲ್ಲ. ಅದರಲ್ಲೂ ನಮ್ಮ ಮಕ್ಕಳು ಉರು ಹೊಡೆಯುವ ಕನ್ನಡ ವ್ಯಾಕರಣ, ಛಂದಸ್ಸು ಮುಂತಾದ ಶಾಸ್ತ್ರಗಳು. ಅಪ್ಪ ಅಮ್ಮಂದಿರು 'ಮಕ್ಕಳು ಓದುತ್ತಿದ್ದಾರೆ' ಎಂದುಕೊಳ್ಳಬೇಕಷ್ಟೇ! ಹಾಗಿದ್ದರೆ ನಿಜಕ್ಕೂ ನಮ್ಮ ಮಕ್ಕಳು ಓದುತ್ತಿರುವುದೇನನ್ನು? ಮಾಧ್ಯಮಿಕ ಶಾಲೆಯಿಂದ ತೊಡಗಿ ಬೋಧಿಸುತ್ತಿರುವ ವ್ಯಾಕರಣ, ಪದವಿ ಹಾಗೂ ಸ್ನಾತಕೋತ್ತರ ಹಂತಗಳಲ್ಲಿ ಕಲಿಸುತ್ತಿರುವ ಕಾವ್ಯ ಮೀಮಾಂಸೆಗಳು ನಮ್ಮ ಉಪಯೋಗಕ್ಕಿಲ್ಲದೆಯೂ ಯಾಕೆ ಅಮರಿಕೊಂಡು ಕೂತುಬಿಟ್ಟಿವೆ? ನಮ್ಮ ಉನ್ನತ ಮಾನವಿಕ ಶಿಕ್ಷಣದ ತೂಕದ ಪಠ್ಯ ಎನ್ನಲಾದ ಕಾವ್ಯ ಮೀಮಾಂಸೆಯ ಮೂಲಕ ಕನ್ನಡ ಕಾವ್ಯ, ಕಾದಂಬರಿ, ನಾಟಕಗಳನ್ನು ಅರ್ಥೈಸಬಹುದೆ? ಹೋಗಲಿ, ಕನ್ನಡದ ಮಕ್ಕಳು ಕನ್ನಡ ಮೀಮಾಂಸೆಯನ್ನಾದರೂ ಓದುತ್ತಿದ್ದಾರೆಯೇ? ಊರಿ ಕುಳಿತ ಈ ಹೆಜ್ಜೆ, ಹಿಮ್ಮಡಿಗಳ ಮಣಭಾರದ ಪರದೇಶಿ ದೇಹದ ತೂಕವನ್ನು ನಾವೇಕೆ ಹೊರಬೇಕು? ನಮ್ಮದೇ ಮನೆಗೆ ಯಾಕೆ ಅಗ್ರಹಾರವನ್ನು ಸುತ್ತಿಕೊಂಡು ಬರಬೇಕು? – ನಮಗೆ ನಾವೇ ಕೇಳಿಕೊಳ್ಳಬೇಕಾದ ಮತ್ತು ಕೇಳಿಸಿಕೊಳ್ಳಬೇಕಾದ, ಆದರೆ ನಾಪತ್ತೆಯಾದ ಪ್ರಶ್ನೆಗಳಿವು. ಖುಷಿಯ ಸಂಗತಿ ಎಂದರೆ ಕನಿಷ್ಠ ಈಗಾದರೂ ಈ ಪ್ರಶ್ನೆಗಳನ್ನು ನಮಗೆ ನಾವೇ ಕೇಳಿಕೊಳ್ಳುತ್ತಿದ್ದೇವೆ. ಹಾಗೆ ಕೇಳಿಕೊಂಡದ್ದರ ಸಾಕ್ಷಿ ಎಂಬಂತೆ ಕನ್ನಡವೆಂಬ ದಕ್ಷಿಣದ ತುದಿಯಲ್ಲಿ ನಿಂತು ಉತ್ತರವನ್ನು ತಡಕಾಡಿದ ಯತ್ನವೊಂದು ನಟರಾಜ ಬೂದಾಳರ 'ಕನ್ನಡ ಕಾವ್ಯ ಮೀಮಾಂಸೆ'ಯ ರೂಪದಲ್ಲಿ ಹಂಪಿ ಕನ್ನಡ ವಿ.ವಿ.ಯಿಂದ ಪ್ರಕಟಗೊಂಡಿದೆ. ಈ ಕೃತಿ ಕನ್ನಡದ ಬಯಲಲ್ಲಿ ಅಲ್ಲಮ, ನಾಗಾರ್ಜುನ, ಸರಹಪಾದ, ಮಂಟೇಸ್ವಾಮಿ, ಜುಂಜಪ್ಪ, ಮಲೆಮಹದೇಶ್ವರ, ಸಿರಿ, ಸಂಕವ್ವೆಯರೊಂದಿಗೆ ಮಾತಿಗೆ ಕೂರುತ್ತದೆ. ಸಂತ, ಶರಣ, ಸೂಫಿ, ತತ್ವಪದ ಹಾಗೂ ಅಚಲ ಪರಂಪರೆಗಳ ಅಮನಸ್ಕಯೋಗವನ್ನು ಆತುಕೊಳ್ಳುತ್ತದೆ. ಅಷ್ಟೇ ಅಲ್ಲ, ಈ ನಡೆ ನುಡಿಯ ಕೂಡುನಡಿಗೆಗೆ ಪಂಪ, ಹರಿಹರ, ರತ್ನಾಕರ, ಚಾಮರಸ, ಕುವೆಂಪು ತನಕದ ಆಕ್ಷರಿಕ ಕನ್ನಡದಲ್ಲಿನ ಕನ್ನಡ ವಿವೇಕವನ್ನೂ ಬೆರೆಸುತ್ತದೆ. ಹೀಗೆ ಕನ್ನಡ ಮನಸ್ಸಲ್ಲಿ ಹದಗೊಂಡ ಲೋಕನಿರೂಪಣೆಯನ್ನು ಮಾಲೆಗಟ್ಟುತ್ತದೆ. ಆತ್ಮದ ತಡಕಾಟವೆಂಬ ವಂಚನೆಗಿಳಿಯದೆ ವರ್ತಮಾನದ ನಿಗಿನಿಗಿ ಎಚ್ಚರವನ್ನೇ ಧ್ಯಾನಿಸುತ್ತದೆ. "ಯಾರೂ ಮುಖ್ಯರಲ್ಲ, ಯಾರೂ ಅಮುಖ್ಯರೂ ಅಲ್ಲ" ಎಂಬ ಈ ಬಹುತ್ವದ ಕಾಲುದಾರಿಯಲ್ಲಿ ಕನ್ನಡಕ್ಕಾಗಿ ಕನ್ನಡದ ಕಣ್ಣು ಹುಡುಕುವ ಹಿರೀಕರ ಯತ್ನಕ್ಕಾದ ಸೇರ್ಪಡೆಯನ್ನು ಸ್ವಾಗತಿಸುತ್ತಾ ಕೃತಿಗೆ ಶರಣೆನ್ನುತ್ತೇನೆ.

ಮೀಮಾಂಸೆಯನ್ನು ಅಸಾಮಾನ್ಯ ತಾತ್ವಿಕ ಪರಿಭಾಷೆಯಾಗಿಯೇ ನೋಡಲಾಗುತ್ತದೆ. 'ಖುಷಿಯಲ್ಲದವನು ಕವಿಯಾಗಲಾರ' ಎನ್ನುವ ಗ್ರಹಿಕೆ ಕಾವ್ಯದೊಂದಿಗೆ ಮೀಮಾಂಸೆಯನ್ನೂ ಅಸಾಮಾನ್ಯರ ಬೌದ್ಧಿಕ ಸ್ವತ್ತಾಗಿಸಿದೆ. ಆದರೆ ಅದು ಮೀಮಾಂಸೆ ಲೋಕವನ್ನು ಕಾಣುವ ಬಗೆ. ಇದು ಲೋಕದ ವಿವರಣೆಯಷ್ಟೇ ಅಲ್ಲ, ಅಧಿಕಾರದೊಂದಿಗಿನ ತಾತ್ವಿಕ ಸಂವಾದ. ಈ ತಾತ್ವಿಕ ಖಚಿತತೆಯಿಲ್ಲದ ಸಮುದಾಯವಾಗಲೀ, ಅದರ ಲೋಕಬದುಕಿಗೆ ಹೊರತಾದ ಕಾವ್ಯವಾಗಲೀ ಪ್ರಾಯಶಃ ಇರಲಾರದು. ಯಾಕೆಂದರೆ ಸಮುದಾಯದ ಲೋಕವಿವರಣೆಯ ತಳಹದಿಯಲ್ಲೇ ಕಾವ್ಯವೂ ಅರಳಿಕೊಳ್ಳುತ್ತದೆ. ಹಾಗಾಗಿ ಮೀಮಾಂಸೆಯು ರಚನೆಯೊಂದರ ಬಾಹ್ಯಸ್ವರೂಪವನ್ನು ಕುರಿತ ಪರಿಭಾಷೆಗಳ ಗುಚ್ಛವಷ್ಟೇ ಅಲ್ಲ, ಅಲ್ಲಿ ಸಾಮಾನ್ಯ ಅಸಾಮಾನ್ಯದ ಪ್ರಶ್ನೆಯೂ ಇಲ್ಲ. ಪ್ರಶ್ನೆ ಇರುವುದು ನಮ್ಮ ಬದುಕನ್ನು ನಿರ್ದೇಶಿಸುತ್ತಿರುವ ಮೀಮಾಂಸೆ ಯಾವುದು? ಅದರೊಂದಿಗೆ ನಮ್ಮ ಸಂಬಂಧವೇನು? ಅದು ನಮ್ಮನ್ನು ಆಳುತ್ತಿದೆಯೇ, ದಾರಿ ತೋರುತ್ತಿದೆಯೇ, ಎಂಬುದಷ್ಟೆ.



ಡಾ|| ಜಯಪ್ರಕಾಶ್ ಶೆಟ್ಟಿ ಹೆಚ್.

# ಮತ್ತೆ ಮತ್ತೆ ರಾಮು



ಈಗೀಗ
ರಾಮನದ್ದೇ ಮಾತು
ಹೇ ರಾಮ್, ಹಾಯ್ ರಾಮ್, ಜೈ ಶ್ರೀ ರಾಮ್
ರಾಮನವಮಿಯೂ ಜೋರು ಗೌಜಿ–ಗದ್ದಲ,
ಜಾಗರಣೆ–ಆಚರಣೆ
ದೇಶವೆಂಬ ಸಂತೆಗಳ ಭರ್ತಿ
ರಾಷ್ಟ್ರವೆಂಬ ಮಾಲ್‌ಗಳ ಪೂರ್ತಿ
ರಾಮನಾಮ

ಹಣ್ಣ ಹಿಡಿದು ಕಾದ ಶಬರಿಗೆ
ಮಣ್ಣ ಋಣವ ತೋರಿದ
ಕಲ್ಲುಗೊಂಡ ಅಹಲ್ಯೆಗೆ
ಸೊಲ್ಲು ನೀಡಿದ, ಪತಿತ ಪಾವನ ಶ್ರೀರಾಮ
ರುಂಡ ರಹಿತ ಶಂಭೂಕ
ವಟು ಜೀವಚೇತನ
ರಾಜ್ಯವಿಡೀ ರಾಮಧ್ಯಾನ – ರಾಘವಗಾನ

ಮಹಾತ್ಮನ ರಾಮಾಯಣದ ಪಾರಾಯಣ
ನೈತಿಕ ಬೆಳಕಿನಲ್ಲಿ ನಳನಳಿಪ ಸೀತಾರಾಮ

ಆಧುನಿಕ ಒಡಕಲು ಪುರಾಣ ಬಿಂಬ
ಪ್ರತಿಬಿಂಬದ
ಮಾತು ಸೋತ ದೇಶದಲ್ಲಿ
ಚಿತ್ರಪಟಗಳಲಿ–ಫ್ಲೆಕ್ಸ್‌ಗಳಲಿ
ರಘುಕುಲಸಂಜಾತನ ಸದ್ಭಕ್ತರು
ನಿಶೆಯ ನಶೆ ತುಂಬಾ ರಾಮಾ ರಾಮಾ
ಅಯ್ಯೋ ರಾಮಾ

ಪಾಪ....
ಪಾಪಿಗಳ ಆಲಿಂಗನ
ಜರ್ಜರಿತ ಒಡಲು, ಬಸಿದ ನೆತ್ತರು
ಹರಿದ ಗರ್ಭ ಪ್ರವೇಶದ್ವಾರ

ಇವನೀಗ ಬಲ ರಾಮ
ಕ್ಷಾತ್ರ ತೇಜ, ನಿರಂತರ ಝೇಂಕಾರ
ಹಾರಾಟ–ಹೋರಾಟ–ಅಟ್ಟಹಾಸಗಳ
ಹಿಡಿದ ರಥಯಾತ್ರೆ

ಮಣ್ಣುಗೊಂಡ ಕಾಯ, ಬಯಲುಗೊಂಡ ಜೀವ
ಬೋಧಿಸತ್ತ್ವ ತಿರುಳ್ಗೊಂಡ ನಾಡಿನಲ್ಲಿ
ಜ್ಞಾನೋದಯದ ಸೂತಕವಿಲ್ಲ,
ನರನ ಪರದಾಟ
ರಾವಣಾರಿಯ ನರಳಾಟ
ತೈಲವೇರಿದ ದರ್ಪಣ ಸುಂದರಿ ರಾಮರಾಜ್ಯಲಕ್ಷ್ಮಿ

ಪುರುಷೋತ್ತಮ ನಿಲ್ಲದ ನಾಡಿನಲ್ಲಿ
ಮಾತು ಮುರಿದ ಮತಿವಂತರು
ಧ್ವನಿ ಉಡುಗಿದ ನಗರ ನಕ್ಸಲರು
ಅರಣ್ಯರೋದನ–ಬಂಧನ,
ನಕ್ಸಲ್‌ವಾದ–ರಾಷ್ಟ್ರವಾದಗಳ ನಡುವೆ
ಕರಕಲಾದ ಸಂವಿಧಾನದ ಪುಟಗಳ
ಬೂದಿ ಬಳಿದ
ಬೆತ್ತಲಾದ ರಾಮರಾಜ್ಯ!

ಮತ್ತೆ ಮತ್ತೆ ರಾಮ
ಅಯ್ಯೋ ರಾಮಾ... ರಾಮಾ...
ಹಪಹಪಿಕೆ, ಕನವರಿಕೆ
ಮತ್ತೊಮ್ಮೆ ಹುತ್ತಗಟ್ಟೀತೇ ಚಿತ್ತ..?

**ಡಾ॥ ದಿನೇಶ್ ನಾಯಕ್ ಕಾರಾಜೆ**
ಸಹಾಯಕ ಪ್ರಾಧ್ಯಾಪಕ, ಕನ್ನಡ ವಿಭಾಗ, ಸಂತ ಅಲೋಶಿಯಸ್
ಪದವಿ ಕಾಲೇಜು (ಸ್ವಾಯತ್ತ), ಅಂಚೆಪೆಟ್ಟಿಗೆ ಸಂ. – ೭೨೦
ಮಂಗಳೂರು – ೫೭೫ ೦೦೩

ಈ ಮೀಮಾಂಸಾ ರಾಜಕಾರಣವೇ ಮುಖ್ಯವಾದ ಪ್ರಸ್ತುತ ಕೃತಿಗೆ ಕಾವ್ಯ ಮೀಮಾಂಸೆಯು ಕಾವ್ಯವನ್ನು ತೂಗುವ ಸಾಧನವಷ್ಟೇ ಅಲ್ಲ. ಬದಲಾಗಿ, ಕನ್ನಡ ಬದುಕು ಮತ್ತು ಕನ್ನಡ ವಿವೇಕವನ್ನು ಕಾಣುವ ಹಾದಿ.

ಲೋಕನಿರೂಪಣೆಯಲ್ಲಿ ಸ್ಥೂಲವಾಗಿ ಇರುವಿಕೆ ಮತ್ತು ಆಗುವಿಕೆ ಎಂಬೆರಡು ಬಗೆ. ಇರುವಿಕೆಯ ಮೀಮಾಂಸೆಗೆ ಲೋಕಸಮಸ್ತವೂ ಸಿದ್ಧವಾಗಿಯೇ ಇದೆ. ಅಲ್ಲಿ ಅರ್ಥವನ್ನು ಕಟ್ಟಬೇಕಾಗಿಲ್ಲ, ಕಾಣಬೇಕಷ್ಟೆ. ಭಾವವಾದಿಯಾದ ಅದು ಆತ್ಮವಾದಿ ಮತ್ತು ಸ್ವಭಾವವಾದಿ. ಆದರೆ ಆಗುವಿಕೆಗೆ ಲೋಕವು ಆದಿ, ಮಧ್ಯ, ತುದಿ ಎಂಬ ಸ್ಥಿತ ಬಿಂದುಗಳಲ್ಲಿ ಹಿಡಿಯಲಾಗದ ಪ್ರವಾಹ. ಸಂಬಂಧದಲ್ಲಿ ಸಾಧ್ಯವಾಗುವ ಉಂಟಾಗುವಿಕೆ. ಪ್ರತೀತ್ಯಸಮುತ್ಪಾದ. ಈ ಭಾವರಹಿತ ಜಗತ್ತಿನಲ್ಲಿ ಸ್ವಭಾವದ ಮಾತಾಗಲೀ, ಆತ್ಮದ ಪ್ರಶ್ನೆಯಾಗಲೀ ಇಲ್ಲ. ನಿಸರ್ಗವಿವೇಕವೇ ಅದರ ಮೂಲಧಾತು. ಆಹ್ವಾನ – ವಿಸರ್ಜನದ ನಿರಂತರತೆಯಲ್ಲಿ 'ಪ್ರಮಾಣಗಳ ಬಂಧನ'ದಿಂದ ಕಳಚಿಕೊಳ್ಳುವ ಅದು ಕುರುಹನ್ನು ದಾಟಿ ಅರಿವನ್ನು ಮುಂದಿಡುತ್ತದೆ. ಪ್ರಸ್ತುತ ಕೃತಿ ಈ ಬಗೆಯ ಪ್ರತೀತ್ಯಸಮುತ್ಪಾದವನ್ನೇ ಕನ್ನಡ ಕಾವ್ಯ ಮೀಮಾಂಸೆಯಾಗಿ ಮುಂದಿಟ್ಟಿದೆ.

ಕನ್ನಡ ಕಾವ್ಯ ಮೀಮಾಂಸೆಯು ಸಾಂಸ್ಥಿಕ ಶಿಕ್ಷಣದ ಕಲಿಕೆಯ ಶಿಸ್ತಾಗಿ ನೆಲೆಗೊಂಡಿಲ್ಲ. ಜೊತೆಗೆ ಕನ್ನಡದ್ದೇ ಆದ ಮೀಮಾಂಸೆ ಇದೆಯೇ ಎಂಬ ಪ್ರಶ್ನೆಯೂ ಇದೆ. ಆದರೆ ಬೂದಾಳರ ಕೃತಿ ಈ ಪ್ರಶ್ನೆಯನ್ನು ಖಚಿತವಾಗಿಯೇ ನಿರಾಕರಿಸಿ, ಕನ್ನಡ ಮೀಮಾಂಸೆಯನ್ನು ಮುಂದಿಡುವಲ್ಲಿ ಎದುರಾಗುವ ತೊಡಕುಗಳನ್ನು ಪ್ರಸ್ತಾಪಿಸಿದೆ. ಮೀಮಾಂಸೆಯಾಗಿ ಕಲಿಸಲಾಗುತ್ತಿರುವ ಪಠ್ಯಗಳು ಕನ್ನಡ ವಿವೇಕದೊಂದಿಗೆ ಆ ವಿವೇಕದ ಪ್ರತಿನಿಧಿಗಳನ್ನೂ ಅಪಹರಿಸಿರುವ ಬಗೆಯನ್ನು ಬಿಡಿಸಿಟ್ಟಿದೆ. ಅಲ್ಲಮ, ನಾಗಾರ್ಜುನ, ಮತ್ಸ್ಯೇಂದ್ರನಾಥ, ಹರಿಹರ ಇವರುಗಳನ್ನು ಬದಿಗೊತ್ತಿ ಕಾಶ್ಮೀರದ ಆನಂದವರ್ಧನ, ಅಭಿನವಗುಪ್ತ, ಭಾಮಹ, ಕುಂತಕ, ವಾಮನ, ಕ್ಷೇಮೇಂದ್ರರನ್ನು ಮುಂದೊತ್ತಿದ ಹಾಗೂ ಜೈನತತ್ವನಿಷ್ಠೆಯನ್ನು ಕೇವಲ ಆಚರಣಾ ನಿಷ್ಠೆಯಾಗಿಸಿ, ಅನೇಕಾಂತವಾದದ ಬದಲಿಗೆ ರಸ–ಧ್ವನಿ–ಅಲಂಕಾರ–ಔಚಿತ್ಯಗಳ ಜೋಗುಳದಲ್ಲೇ ಜೈನಕವಿಗಳ ಕಾವ್ಯವಿಶ್ಲೇಷಣೆ ಮುಗಿಸಿದ 'ಜಾಣ ಓದು'ಗಳಿಂದ ಕನ್ನಡದ ಓದಿಗಾದ 'ಊನ'ವನ್ನು ತೋರಿದೆ. ಹೀಗೆ ಅದು ಈವರೆಗಿನ ವಾಮನ ಪದಾಘಾತದ ಗಾಯಗಳನ್ನು ತೋರುತ್ತಲೇ, ಕನ್ನಡ ವಿವೇಕ ಹಾಗೂ ವಿವೇಕದ ಪ್ರತಿನಿಧಿಗಳನ್ನು ಮುನ್ನೆಲೆಗೆ ತರುವ ಪ್ರತಿ ರಾಜಕಾರಣದಲ್ಲೂ ತೊಡಗಿಕೊಂಡಿದೆ. ಅದಕ್ಕಾಗಿ ಕಾವ್ಯ ಮೀಮಾಂಸೆಯನ್ನು ಕಾವ್ಯಕಟ್ಟುವಿಕೆಯ ಪಂಡಿತೋದ್ಯೋಗಕ್ಕೆ ಸೀಮಿತಗೊಳಿಸದೆ ವಿಶಾಲ ಕನ್ನಡಬದುಕಿಗೆ ಅನ್ವಯಿಸಿಕೊಂಡಿದೆ. ಪ್ರಮಾಣ ಪಠ್ಯಗಳನ್ನೂ ನಿರಾಕರಣೆಯ ಕನ್ನಡತನವನ್ನು ಮುನ್ನೆಲೆಗೆ ತಂದಿದೆ.

ಬೂದಾಳರ ಕೃತಿಯಲ್ಲಿ ಪ್ರವೇಶಿಕೆಯ ಮೊದಲ ಅಧ್ಯಾಯದಿಂದ ಕಾವ್ಯಪ್ರಯೋಜನದ ತನಕ ೮ ಅಧ್ಯಾಯಗಳಿವೆ. ಅವುಗಳಲ್ಲಿ ೩, ೪ ಹಾಗೂ ೬ರಲ್ಲಿ

ಜಡವಾದಿ ಲೋಕವಿವರಣೆ ಹೇರಿದ ಮನೋಕೋಶಗಳನ್ನು ಖಾಲಿಯಾಗಿಸಿಕೊಳ್ಳುವ ಪ್ರಮಾಣ, ಭಿನ್ನಾಭಿನ್ನ, ದ್ವೈತಾದ್ವೈತ ಮತ್ತು ಕಾಲ-ದೇಶ ನಿರಾಕರಣೆಗಳೆಂಬ ನಿರಾಕರಣೆಗಳಿವೆ. ೨ನೆಯ ಅಧ್ಯಾಯದಲ್ಲಿ ಪ್ರಕ್ರಿಯಾಮೀಮಾಂಸೆಯ ಸ್ಥೂಲ ಪರಿಚಯವಿದೆ. ೩ನೇ ಅಧ್ಯಾಯ ದೇಹ-ಶ್ರಮ-ಕಸುಬು-ಅರಿವುಗಳಲ್ಲಿ ರೂಪುಗೊಂಡ ಕನ್ನಡದ ದೇಹಮೀಮಾಂಸೆ ಇದೆ. ೭ನೇ ಅಧ್ಯಾಯವು ಲೋಕಬದುಕಿನ ನಿರಂತರತೆಯೊಂದಿಗೆ ಹೆಜ್ಜೆ ಹಾಕಿಕೊಂಡು ಬಂದ ಕನ್ನಡದ ಬದುಕು ಮತ್ತು ಕಾವ್ಯದಲ್ಲಿನ ಸಹಜಯಾನದ ನಡೆಯನ್ನು ಗುರುತಿಸಿದೆ.

'ನಿನ್ನೆಲ್ಲ ಯೋಚನೆಗಳ ಕೆಳಗಿಟ್ಟು ನೀನಿರುವಂತೆಯೇ ಬಾ' ಎಂದ ಸರಹನಂತೆ ಕನ್ನಡಮೀಮಾಂಸೆಗೂ ಮನೋಕೋಶಗಳ ಬಿಡುಗಡೆಯೇ ಮುಖ್ಯ. ಹಾಗಾಗಿ ನಿರಾಕರಣೆ ಇಲ್ಲಿನ ಮುಖ್ಯ ಪರಿಭಾಷೆ. ಆದರೆ ಇದು ಲೋಕನಿರಾಕರಣೆಯಲ್ಲ. ನಿರಾಕರಿಸಲೇಬೇಕಾದುದರ ನಿರಾಕರಣೆ. ಪ್ರವಾಹ ರೂಪಿ ಲೋಕದ ಸಂಬಂಧಾಧಾರಿತ ಸಾಪೇಕ್ಷ ಅಸ್ತಿತ್ವದ ಪ್ರತಿಪಾದನೆಗಾಗಿ ಭಿನ್ನ, ಅಭಿನ್ನತೆಗಳ ನಿರಾಕರಣೆ. ಹೀಗೆ ಎಲ್ಲವನ್ನೂ ಒಂದು ಎಂದೋ, ಭಿನ್ನ ಭಿನ್ನ ಎಂದೋ ಅಂದುಕೊಳ್ಳುವಲ್ಲೇ ಉಂಟಾಗುವ ಸಂಬಂಧದ ನಿರಾಕರಣೆಯಿಂದ ಪಾರಾಗಲೆಂದು ದಾಟಿದ ಸಾಂಖ್ಯಿಕ ಉಪಾದಿಗಳ ದಾಟಿಕೊಳ್ಳುವಿಕೆ. ಇರುವಂತೆಯೇ ಇರಗೊಡದ ಮನೋಕೋಶಗಳ ಹೇತುವಾದ ಪ್ರಮಾಣಗಳ, ಮುಖ್ಯವಾಗಿ ಶಬ್ದಪ್ರಮಾಣದ ನಿರಾಕರಣೆ. ಆದರೆ ಈ ಇಲ್ಲಿ ಆ ನಿರಾಕರಣೆಗಳು ಕೇವಲ ವಾದವಾಗಿಲ್ಲ. ದಿನಬದುಕಿನ ವಾಗ್ರೂಢಿಯ ಎಳೆಯಿಂದ ತೊಡಗಿ ಅಕ್ಷರರೂಪದ ಮಹಾಕಾವ್ಯಗಳವರೆಗೆ ಕನ್ನಡ ವಿವೇಕವು ವೇದ, ಶಾಸ್ತ್ರ, ಪುರಾಣ ಪ್ರಮಾಣಗಳನ್ನು ಹೊರಗಿಟ್ಟು "ಪ್ರಜಾಪ್ರಭುತ್ವದ ದಾರಿಯಾದ ನಿಜವಾದ ಕವಿರಾಜಮಾರ್ಗ" (ಪು. ೮೪)ವಾಗಿ, "ಬಿಡುಗಡೆಯ ಎಲ್ಲ ದಾರಿಗಳನ್ನು ತೆರೆಯುವ" (ಪು. ೮೩) ಸಹಜ ನಡೆಯನ್ನು ನಡೆದ ಬಗೆಯನ್ನು ಗುರುತಿಸುವಿಕೆಯಾಗಿದೆ. "ಯಾವುದನ್ನು ವರ್ತಮಾನದ ಅಂತರಂಗದ ಬೆಳಕಿನಲ್ಲಿಟ್ಟು ಪರೀಕ್ಷಿಸಿದಾಗ ಅದು ಲೋಕದ ಬದುಕಿಗೆ ಮಂಗಲಕರವಾಗಿರುತ್ತದೋ ಅದನ್ನು ಸತ್ಯವೆಂದು ನಂಬು ಮತ್ತು ಅಂತೆಯೇ ಬಾಳು" (ಪು. ೮೮) ಎಂದ ಬುದ್ಧಮಾರ್ಗದಲ್ಲಿದೆ.

ಭಾವವಾದಿಯಲ್ಲದ ಕನ್ನಡ ಮೀಮಾಂಸೆಗೆ ಆತ್ಮದ ಅಸ್ತಿತ್ವ ಒಪ್ಪಿತವಲ್ಲ. ಆದರೆ ಈ ನಿರಾಕರಣೆ ಲೋಕಸತ್ಯದ ಅರಿವಷ್ಟೇ ಅಲ್ಲ. 'ಸತ್ಯದ ಸಾಮಾನ್ಯರಾಜಕಾರಣ'ದ ವಿರುದ್ಧವಾಗಿರುವ ಪ್ರತಿರಾಜಕಾರಣವೂ ಹೌದು. ಯಾಕೆಂದರೆ ಆತ್ಮತತ್ವವನ್ನಾಧರಿಸಿ ರೂಪುಗೊಂಡ ಸಾಮಾಜಿಕ ಸಿದ್ಧಾಂತವೊಂದು ಇಲ್ಲಿ ನಿರ್ದಿಷ್ಟ ಸಮುದಾಯಕ್ಕೆ ಎಲ್ಲ ಬಗೆಯ ಅಧಿಕಾರವನ್ನೂ ಕೊಟ್ಟಿದೆ. ಬಹುಸಂಖ್ಯಾತರ ಬದುಕನ್ನು ಅಸಹನೀಯವೂ ಆಗಿಸಿದೆ. ಆದರೆ ಆತ್ಮದ ಕಲ್ಪನೆಯನ್ನೇ ನಿರಾಕರಿಸಿದ ಶ್ರಮಣಧಾರೆಗಳು ಮೂರ್ತರೂಪದ ದೇಹವನ್ನು ಅದರೆಲ್ಲಾ ಮಿತಿಗಳೊಡನೆ ಒಪ್ಪಿವೆ ಮತ್ತು ಸಾಮಾನ್ಯಸಮೂಹವನ್ನು ಗೌರವಿಸಿವೆ. ಪ್ರಸ್ತುತ ಕೃತಿ ಕನ್ನಡ ಮೀಮಾಂಸೆಯಾಗಿ ಗುರುತಿಸುವ ನಡೆಯಲ್ಲಿ ಶ್ರಮಣಧಾರೆಗಳ ಈ ಗುಣವಿದೆ. ದೇಹ ಮತ್ತು ಫಲವಂತಿಕೆಯ ಎಲ್ಲ ಆಕರಗಳಿಗೂ ದೊರೆತ ಗೌರವವಿದೆ. ಇಂತಹ ಸಾಂಸ್ಕೃತಿಕ ರಾಜಕಾರಣವನ್ನು ಪರಿಚಯಿಸುವ ಕೃತಿ ಕೇವಲ ಕಾವ್ಯಚರ್ಚೆಯಾಗದೆ ಸಮಾಜೋ ರಾಜಕೀಯವಾದ ತಾತ್ವಿಕ ಸಂಘರ್ಷವೊಂದನ್ನು ಕಟ್ಟಬಯಸುತ್ತದೆ. ಹಾಗಾಗಿ ಇಲ್ಲಿ ಕಾವ್ಯಪ್ರವೇಶವು ರಮ್ಯಾದ್ಭುತ ಲೋಕದ ರೋಮಾಂಚನವಲ್ಲ. ಅದು ಅನ್ನದ ಪ್ರಶ್ನೆ, ದೇಹದ ಪ್ರಶ್ನೆ, ಹುಟ್ಟಿನ ಪ್ರಶ್ನೆ, ಆಯ್ಕೆ-ಪ್ರತ್ಯೇಕೀಕರಣದ ಸಾಮಾಜಿಕ ವಂಚನೆಗಳ ಹೂರಣವನ್ನು ಅಗೆಯುವ ಕಾಯಕ. ಕಾವ್ಯವೂ ಬಿಡುವಿನ ವೇಳೆಯ ಮನೋರಂಜನೆಗಿಂತ ವರ್ತಮಾನದ ನಿಗಿನಿಗಿ ಎಚ್ಚರದಲ್ಲಿ ಲೋಕದ ಮಂಗಳಕ್ಕಾಗಿ ಬದುಕಿನ ಕುರೂಪಗಳೊಂದಿಗಿನ ಮುಖಾಮುಖಿ.

ಕನ್ನಡ ಮೀಮಾಂಸೆ ಬಯಲನ್ನೇ ಧ್ಯಾನಿಸಿದೆ. ಅದು ಏನೂ ಇಲ್ಲದ ಶೂನ್ಯವಲ್ಲ, ಸೃಜನಶೀಲ ಸಾಧ್ಯತೆಯನ್ನು ತನ್ನೊಳಗಿಟ್ಟುಕೊಂಡೇ ಇರುವ ಅವ್ವನ ಬಸಿರಂತೆ. ಇದಕ್ಕೆ ಶರಣರು, ಸಿದ್ಧರಷ್ಟೇ ಅಲ್ಲ ಜನಸಾಮಾನ್ಯರ ಬದುಕಿನಿಂದಲೂ ಸಮರ್ಥನೆ ಒದಗಿಸಿಕೊಳ್ಳುವ ಕೃತಿ ಕನ್ನಡದ ಆರಾಧನಾ ಜಗತ್ತು ಪೂಜಿಸುವ ಗರ್ಭ ಸಂಕೇತಗಳತ್ತ ಗಮನ ಸೆಳೆಯುತ್ತದೆ. ಆಹ್ವಾನ-ವಿಸರ್ಜನ, ಪ್ರತೀತ್ಯಸಮುತ್ಪಾದ, ಭಿನ್ನಾಭಿನ್ನ ನಿರಾಕರಣೆ, ಪ್ರಮಾಣ ನಿರಾಕರಣೆ, ದ್ವೈತಾದ್ವೈತ ನಿರಾಕರಣೆಗಳೆಂಬ ತನ್ನ ಮೀಮಾಂಸಾ ಪರಿಭಾಷೆಗಳನ್ನೂ ಈ ಬಯಲತತ್ವದ ಒಡಲಿಂದಲೇ ಕಟ್ಟಿಕೊಳ್ಳುತ್ತದೆ. ಹೀಗೆ ಜಾನಪದ ಮಹಾಕಾವ್ಯಗಳಿಂದ ತೊಡಗಿ, ಶರಣ, ಸೂಫಿ, ತತ್ವಪದಕಾರ, ಅಚಲಿಗರ ಸಾಧಕಲೋಕವನ್ನೂ ಒಳಗೊಂಡಂತೆ ವಿಶಾಲಹರವಿನ ಜೀವನಪದ್ಧತಿ ಮತ್ತು ಆಚರಣೆಗಳಲ್ಲಿ ಬೆರೆತುಹೋದ ಬಯಲ ಬೆಳಕಿನ ಬೀಜದ ಹುಡುಕಾಟವೇ ಕೃತಿಯ ಧ್ಯಾನವಾಗಿದೆ. ಈ ಧ್ಯಾನದ ಪ್ರಧಾನ ಆಕರಗಳಾಗಿ ಪೂರ್ಣ ಕನ್ನಡ ಬದುಕನ್ನೇ ಬದುಕಿದ ವಚನ ಮತ್ತು ತತ್ವಪದಕಾರರ ರಚನೆಗಳಿಗೆ ವಿಶೇಷ ಒತ್ತು ಸಿಕ್ಕಿದೆ. ಜೊತೆಗೆ ಅನೇಕಾಂತದ ಜಾಲರಿಯಲ್ಲಿಟ್ಟ ಜೈನ ಕಾವ್ಯಗಳೂ, ವಿಶಾಲ ಕನ್ನಡ ಸಮುದಾಯದ ರಸ/ಜಲ ಜಲಪರಂಪರೆಯ ಆಚರಣೆಗಳೊಳಗಿರುವ ಫಲಸಂಪ್ರದಾಯದ ಕಥನಗಳೂ ಪೂರಕ ಸಾಮಗ್ರಿಗಳಾಗಿವೆ. ನೀರನ್ನು ಹೊತ್ತು ಬೆಂಕಿಯನ್ನು ತುಳಿಯುವ; ಆಹ್ವಾನ-ವಿಸರ್ಜನದಲ್ಲಿ ಕುರುಹುಗಳನ್ನು ಕಳೆಯುವ; ಮಡಿ-ಮೈಲಿಗೆಯೇ ಮೊದಲಾದ ಅವಳಿ ವಿರೋಧಗಳನ್ನು ದಾಟಿ ಅಸ್ತಿ-ನಾಸ್ತಿ ಎರಡೂ ಅಲ್ಲದ ಅದ್ವಯವಾದಿಯಾಗಿ ಕನ್ನಡ ಆಚರಣಾ ಜಗತ್ತು ತೋರುವ ಅಗ್ನಿಪರಂಪರೆಯ ಕಡುವಿರೋಧ ಮತ್ತು ಶ್ರಮಮೂಲದ ಸಹಜಶೈವ ಚಹರೆಗಳು ಕೃತಿಯ ಮೀಮಾಂಸಾ ಚರ್ಚೆಯ ಹಂದರವಾಗಿವೆ.

ಈ ಕೃತಿ ಬೌದ್ಧ ಮಾಧ್ಯಮಿಕ ಸಿದ್ಧಾಂತದೊಂದಿಗೆ ಜೈನ ಅನೇಕಾಂತವಾದದ ನೆರವನ್ನೂ ಪಡೆದಿದೆ. ಬೌದ್ಧ ಸಹಜಯಾನದ ತಾತ್ವಿಕ ಪರಿಭಾಷೆಗಳೊಂದಿಗೆ ಕನ್ನಡದ ಸಾಮ್ಯತೆಯನ್ನು ಪರಿಶೀಲಿಸಿದೆ. ಅಂದ ಮಾತ್ರಕ್ಕೆ ಕನ್ನಡ ಮೀಮಾಂಸೆಯನ್ನು ಅನ್ಯಮೂಲದಿಂದಲೇ ಕಟ್ಟುತ್ತದೆ ಎಂದಲ್ಲ. ಬದಲಿಗೆ ಅದು ಸ್ಥಳೀಯತೆಯೊಂದಿಗೆ ಮಾರ್ಗಕಾರ ಹೇಳುವ 'ವಸುಧಾವಲಯ ವಿಲೀನ ವಿಷದ ವಿಷಯ ವಿಶೇಷ'ವಾದ ವೈಶ್ವಿಕ ಚಹರೆಯನ್ನೂ ಒಟ್ಟೊಟ್ಟಿಗೆ ಹಿಡಿಯುತ್ತದೆ. ಅದರ ಜೊತೆಗೆ ಕನ್ನಡ ಮೀಮಾಂಸೆಯನ್ನು ಯಾವುದೇ ಮೀಮಾಂಸೆಯೊಂದರ ಎದುರಾಳಿ ಮೀಮಾಂಸೆಯಾಗಿಸದ ಎಚ್ಚರವನ್ನೂ ಕಾದುಕೊಂಡಿದೆ. ಹಾಗಾಗಿ ಇಲ್ಲಿನ ಮೀಮಾಂಸಾ ಪರಿಭಾಷೆಗಳು ಈಗಾಗಲೇ ನೆಲೆಗೊಂಡು ಆಳುತ್ತಿರುವ ಸಂಸ್ಕೃತಮೀಮಾಂಸೆಯ ಪಡಿಯಚ್ಚುಗಳಲ್ಲ. ಎದುರಾಳಿಯೂ ಅಲ್ಲ. ಬದಲಿಗೆ, ಪ್ರತೀ ಕಸುಬಿನ ಆವರಣವೂ ತನ್ನದೇ ಆದ ಮೀಮಾಂಸಾ ಪರಿಭಾಷೆಯನ್ನು ಸೇರಿಸಬಲ್ಲ ಮುಕ್ತತೆಯೊಂದಿಗೆ ಹೊಸ ತಿಳುವಳಿಕೆಯನ್ನು ಸ್ವೀಕರಿಸುವ ಸದಾಸಿದ್ಧತೆ. ಹಾಗೆಯೇ ನಿರಚನಾವಾದಿ ಆಗುವಿಕೆಯಾಗಿ ವಸ್ತುನಿಷ್ಠವಲ್ಲದ ವ್ಯಕ್ತಿನಿಷ್ಠತೆಯಲ್ಲಿ ಬಹುಸತ್ಯದ ಪರವಾದ ತಾತ್ವಿಕ ಏಕಸೂತ್ರತೆ.

ನಟರಾಜ ಬೂದಾಳರ ಈ ಕೃತಿ ಕನ್ನಡ ಮೀಮಾಂಸೆಗೆ ಬೇಕಾದ ಎಲ್ಲ ಹತಾರಗಳನ್ನು ಒದಗಿಸಿಕೊಡುವ ಆತ್ಯಂತಿಕ ರಚನೆ ಎಂದೇನಲ್ಲ. ಜನ ಬದುಕಿನ ನಡುವಿದ್ದೂ ಸಾಂಸ್ಥಿಕ ಪರಿಭಾಷೆಯಾಗುವ ಅವಕಾಶ ಪಡೆಯದ ಕಾಲುಹಾದಿಯನ್ನು ನೆಲೆಗೊಳಿಸುವುದು ಸುಲಭದ ಮಾತೂ ಅಲ್ಲ. ನಮ್ಮ ವಿವೇಕ ಹಾಗೂ ವಿವೇಕದ ಪ್ರತಿನಿಧಿಗಳನ್ನು ಮಣ್ಣು ಮುಕ್ಕಿಸಿದ ಯಾಜಮಾನ್ಯದ ಎದುರಿನ ಏರುಕಾಯಕ (ಅಪ್‌ಹಿಲ್ಲ್ ಟಾಸ್ಕ್)ಕ್ಕೆ ಪ್ರಾಯಶಃ ಇನ್ನೂ ಹೆಚ್ಚಿನ ವ್ಯವಧಾನ ಮತ್ತು ಹೊಣೆಯ ಅಗತ್ಯವಿದೆ. ಇದರ ಜೊತೆಗೆ ಅಲ್ಲಮನನ್ನು ಆತನ ಅಭಾಷಿಕತೆಯನ್ನು ಕೈಹಿಡಿದು ಸಾಗುವ ಬೂದಾಳರ ಈ ಬರವಣಿಗೆ ಅನೇಕ ಕಡೆ ತಂತು ಕಡಿದಂತೆಯೂ ಭಾಸವಾಗುತ್ತದೆ. ಈ ಕುಪ್ಪಳಿಕೆಯನ್ನು ಸಂಭಾಳಿಸುವ ಜೊತೆಗೆ ವಿಷಯವಸ್ತುವಿನ ಮಂಡನೆಗೆ ಸಂಬಂಧಿಸಿದ ಮತ್ತಷ್ಟು ಪರಿಷ್ಕರಣೆಯೂ ಅಗತ್ಯವಿದೆ. ಇನ್ನು ಕನ್ನಡ ಮೀಮಾಂಸೆಯ ಪರಿಭಾಷೆಗಳ ಸಂಸ್ಕೃತ ಭೂಯಿಷ್ಠತೆ ಉಂಟುಮಾಡಬಹುದಾದ ಗೊಂದಲವನ್ನು ನಿರಾಕರಿಸಲಾಗದು. ಎಲ್ಲಕ್ಕಿಂತ ಮುಖ್ಯವಾಗಿ ಬದಲಾವಣೆಯನ್ನೇ ಒಪ್ಪದ ಜಡ ಅಧ್ಯಾಪಕರನ್ನು ಹರಿತಗೊಳಿಸುವಲ್ಲಿ ಈ ಮೀಮಾಂಸೆ ಇನ್ನೂ ಒಂದಷ್ಟು ತ್ರಾಸದಾಯಕ ದಾರಿಯಲ್ಲೇ ನಡೆಯಬೇಕಿದೆ.

ಈ ಮಿತಿಗಳ ನಡುವೆಯೂ ಇಲ್ಲಿ ಕಾವ್ಯಮೀಮಾಂಸೆಯು ರಸ-ಧ್ವನಿ-ಅಲಂಕಾರ ಎಂಬ ಪರಿಭಾಷೆಗಳಲ್ಲಿ ಕಾವ್ಯದ ಹೊರಾವರಣದ ಚರ್ಚೆಯಾಗಿಲ್ಲ. ಕನ್ನಡದ ತಾತ್ವಿಕಭಿನ್ನತೆಯ ಪ್ರತಿಪಾದನೆಯಲ್ಲಿ ಉಂಟಾಗುವ ಎದುರಾಳಿತನವನ್ನೂ ಮರೆಮಾಚಿಲ್ಲ. ಹಾಗಾಗಿ ಕನ್ನಡ ವಿವೇಕವು ಬಲಗೊಳ್ಳಲು ಬೇಕಾದ ಮೂಲಸತ್ವಗಳನ್ನು ಬತ್ತಿಸಿದ ಓದು ಮತ್ತು ಮೀಮಾಂಸಾ ರಾಜಕಾರಣಕ್ಕೆ ಸ್ಪಷ್ಟ ಎದುರಾಗುವಿಕೆಯಿದೆ. ಎಲ್ಲಕ್ಕಿಂತ ಮುಖ್ಯವಾಗಿ ಕನ್ನಡದ ಮೇಲಾದ ಬಹುಚಕ್ರೀಯ ವಸಾಹತೀಕರಣವನ್ನು ವಿವರಿಸಿ, ಕನ್ನಡಿಗರ ತಲೆಯ ಮೇಲೂರಿ ನಿಂತ ಮೂರಡಿಯವನ ಕಾಲ ಹೊರೆಯಿಂದ ಪಡೆಯುವ ಬಿಡುಗಡೆಯನ್ನೇ 'ಕಾಲದ ಅಗತ್ಯ'ವಾಗಿ ಮುಂದಿಟ್ಟಿದೆ.

**ಡಾ॥ ಜಯಪ್ರಕಾಶ್ ಶೆಟ್ಟಿ ಹೆಚ್.**
ಸಹಪ್ರಾಧ್ಯಾಪಕರು, ಸ. ಪ್ರ. ದ. ಕಾಲೇಜು ಮತ್ತು ಸ್ನಾತಕೋತ್ತರ ಅಧ್ಯಯನ ಕೇಂದ್ರ
ತೆಂಕನಿಡಿಯೂರು, ಉಡುಪಿ ಜಿಲ್ಲೆ




# ಶುಕ್ರ ಶನಿ ಸಮಾಗಮ

**ಮುಂ**ಜಾವಿಗೆ ಸರಿದಿರುವ ಗ್ರಹಗಳ ಓಟದ ಆಟ ಈಗ ನೋಡಲು ಒಳ್ಳೆ ಅವಕಾಶಗಳು ಸಿಗುತ್ತಿವೆ. ಫಳಗುಟ್ಟುತ್ತಿರುವ ಶುಕ್ರ ಎಲ್ಲರ ಗಮನ ಸೆಳೆಯುತ್ತದೆ. ಒಂದನೆಯ ತಾರೀಖು ಶುಕ್ರ ಮತ್ತು ಗುರು ಜೋಡಿಯಾಗುತ್ತವೆ. ಕ್ರಮೇಣ ದೂರ ಸರಿಯುವ ಶುಕ್ರ ೧೯ರ ಹೊತ್ತಿಗೆ ಶನಿಯನ್ನು ಸಮೀಪಿಸುತ್ತದೆ. ಈ ಸಮಾಗಮಗಳನ್ನು ಕ್ಯಾಮೆರಾದಲ್ಲಿ ಸೆರೆಹಿಡಿಯಲು ಪ್ರಯತ್ನಿಸಬಹುದು.

ಗುರು ಗ್ರಹವನ್ನೂ ಮುಂಜಾವಿನಲ್ಲಿ ಕಾಣಬಹುದು. ದಿನೇ ದಿನೇ ಎತ್ತರಕ್ಕೆ ಏರುವ ಇದರ ಪಕ್ಕ ಚಂದ್ರ ೨೭ರಂದು ಹಾದುಹೋಗುತ್ತದೆ. ಹಾಗೆಯೇ ಮುಂದುವರೆದ ಚಂದ್ರ ಶುಕ್ರವನ್ನು ಪುನಃ ಸಮೀಪಿಸುವುದು ಮಾರ್ಚ್ ೩ಕ್ಕೆ. ಬುಧ ಗ್ರಹ ತಿಂಗಳ ಉತ್ತರಾರ್ಧಕ್ಕೆ ಸಂಜೆಯಲ್ಲಿ ಕಾಣಲಿದೆ. ಇದನ್ನು ಗುರುತಿಸುವುದು ಒಳ್ಳೆಯ ಸವಾಲು. ಇದು ಗರಿಷ್ಠ ಎತ್ತರವನ್ನು ಮುಟ್ಟುವ ದಿನದಂದು ಪ್ರಯತ್ನಕ್ಕೆ ಫಲ ಸಿಗುವುದು.

ಮಂಗಳ ಗ್ರಹ ಸಂಜೆಯಲ್ಲಿ ಪಶ್ಚಿಮದಲ್ಲಿ ಕಾಣುವುದು. ಅದರ ಪಕ್ಕ ಚಂದ್ರ ೧೦ರಂದು ಹಾದುಹೋಗುವ ಸಂದರ್ಭ ಉಪಯೋಗಿಸಿಕೊಂಡು ಮಂಗಳ ಮತ್ತು ಅದರ ಪಕ್ಕದ ಕ್ಷೀಣವಾದ ಮೇಷರಾಶಿಯನ್ನು ಗುರುತಿಸಬಹುದು.

ಸಂಜೆಯ ಆಕಾಶದಲ್ಲಿ ಆಕಾಶಗಂಗೆಯ ಒಂದು ಭಾಗ ನೋಡಲು ಸಿಗುತ್ತದೆ. ದಕ್ಷಿಣದ ಅಗಸ್ತ್ಯ ನಕ್ಷತ್ರ ಪ್ರಕಾಶದಲ್ಲಿ ಎರಡನೆಯದು. ಅಲ್ಲಿಂದ ಆರಂಭಿಸಿ ಅತಿ ಪ್ರಕಾಶಮಾನವಾದ ನಕ್ಷತ್ರ ಲುಬ್ಧಕದವರೆಗೆ ಕಣ್ಣು ಹಾಯಿಸಿ. ಮಹಾಶ್ವಾನದ ಸ್ವಲ್ಪ ಉತ್ತರಕ್ಕೆ ಮಹಾವ್ಯಾಧ; ಅದನ್ನು ದಾಟಿ ಉತ್ತರಕ್ಕೆ ಪಾರ್ಥ, ಕುಂತಿ ಮುಂದುವರೆದು ರಾಜಹಂಸದವರೆಗೂ ಈ ನದಿಯ ಹರಿವು. ಚಂದ್ರನ ಬೆಳಕಿಲ್ಲದಾಗ ಗಮನಿಸಿ ನೋಡಿದರೆ ಈ ಭಾಗದಲ್ಲಿ ನಕ್ಷತ್ರಗಳ ದಟ್ಟಣೆ ಹೆಚ್ಚಾಗಿರುವುದು ಕಂಡುಬರುತ್ತದೆ. ಈ ಎಲ್ಲ ನಕ್ಷತ್ರಪುಂಜಗಳನ್ನೂ ಗುರುತಿಸುವುದು ಸುಲಭ; ಅವು ಪ್ರಕಾಶಮಾನವಾದವು. ಮೇಷ, ವೃಷಭ, ಮಿಥುನ ವಿಜಯಸಾರಥಿ – ಈ ರಾಶಿಗಳನ್ನೂ ಪಶ್ಚಿಮದಲ್ಲಿ ನಕುಲವನ್ನು ಗುರುತಿಸಬಹುದು.

ಉ
ಪೂ
ಪ
ದ
ವಿಜಯಸಾರಥಿ
ಕುಂತಿ
ದ್ರೌಪದಿ
ಮಿಥುನ
ಪಾರ್ಥ
ವೃಷಭ
ಮೇಷ
ಮಂಗಳ
ಮೀನ
ಮಹಾವ್ಯಾಧ
ಮಹಾಶ್ವಾನ
ತಿಮಿಂಗಿಲ


೧೯ರ ಮುಂಜಾವು ಶುಕ್ರ – ಶನಿ ಜೋಡಿ*

ನಕುಲ ಎಂಬ ಚೌಕದ ಎರಡು ಪಕ್ಕದಲ್ಲಿ ಎರಡು ಕ್ಷೀಣವಾದ ಮೀನುಗಳಿವೆ. ಪೂರ್ವದಲ್ಲಿ ಉದಯಿಸುತ್ತಿರುವ ಸಿಂಹದ ಮಘ ನಕ್ಷತ್ರ ಪ್ರಕಾಶಮಾನವಾದದ್ದು. ಸಿಂಹ ಮತ್ತು ಮಿಥುನದ ನಡುವೆ ಇರುವ ಕಟಕ ಬಹಳ ಕ್ಷೀಣವಾದದ್ದು. ೧೮ರಂದು ಚಂದ್ರನ ಸ್ಥಾನವನ್ನು ಗುರುತು ಮಾಡಿಕೊಳ್ಳಿ. ಹುಣ್ಣಿಮೆ ಕಳೆದ ಮೇಲೆ ಅದೇ ಭಾಗವನ್ನು ದುರ್ಬೀನಿನಿಂದ ವೀಕ್ಷಿಸಿ. ಅಲ್ಲಿ ಕಟಕ ರಾಶಿಯ ಎರಡು ನಕ್ಷತ್ರಗುಚ್ಛಗಳನ್ನು ಕಾಣಬಹುದು. ಈ ಭಾಗದಲ್ಲಿ ಇರುವ ಕ್ಷೀಣ ನಕ್ಷತ್ರವೇ ಪುಷ್ಯ. ಎರಡು ದಿನಗಳ ನಂತರ ೧೯ರಂದು ಹುಣ್ಣಿಮೆ ಚಂದ್ರ ಮಖ ನಕ್ಷತ್ರದ (ಮಘ ಎಂಬುದು ಸಂಸ್ಕೃತ ಹೆಸರು) ಪಕ್ಕ ಹಾದುಹೋಗುತ್ತದೆ. ಹುಣ್ಣಿಮೆಯ ಚಂದ್ರ ಮಘ ನಕ್ಷತ್ರದ ಪಕ್ಕದಲ್ಲಿರುವುದರಿಂದ ತಿಂಗಳ ಹೆಸರೇ ಮಾಘಮಾಸ. ಒಂದು ಸುತ್ತು ಮುಗಿಸಿ ಚಂದ್ರ ಮುಂದಿನ ತಿಂಗಳು ಇದೇ ನಕ್ಷತ್ರದ ಸಮೀಪಕ್ಕೆ ಹಿಂದಿರುಗುತ್ತದೆ. ಅದೂ ೧೯ರಂದೇ. ಕಳೆದ ತಿಂಗಳು ಚಂದ್ರ ಮಘ ನಕ್ಷತ್ರದ ಪಕ್ಕದಲ್ಲಿ ಕಂಡದ್ದು ೨೩ರಂದು. ಆದರೆ ಈಗ ಎರಡೂ ತಿಂಗಳಲ್ಲಿ ಒಂದೇ ತಾರೀಖಿಗೆ ಮಘ ಪಕ್ಕದಲ್ಲಿ ಕಾಣಲು ಕಾರಣವೇನು? ಸ್ವಲ್ಪ ಯೋಚಿಸಿದರೆ ಉತ್ತರ ಹೊಳೆಯುವುದು.

ಈ ತಿಂಗಳ ಹುಣ್ಣಿಮೆಯ ಚಂದ್ರ ಭೂಮಿಯಿಂದ ಕನಿಷ್ಠ ದೂರದಲ್ಲಿರುತ್ತದೆ; ಆದ್ದರಿಂದ ಅಮಾವಾಸ್ಯೆಯ ಚಂದ್ರ ಗರಿಷ್ಠ ದೂರದಲ್ಲಿರುತ್ತದೆ ಎಂದು ಊಹಿಸಬಹುದು. ಸಾಮಾನ್ಯವಾಗಿ ಅಮಾವಾಸ್ಯೆ – ಹುಣ್ಣಿಮೆಗಳಲ್ಲಿ ಭರತ – ಇಳಿತ ಜೋರು. ಈ ಬಾರಿ ಸಮುದ್ರದ ಗರಿಷ್ಠ ಎತ್ತರಗಳನ್ನು ಈ ಎರಡೂ ದಿನಗಳಂದು ಅಳತೆ ಮಾಡಿದರೆ ಚಂದ್ರನ ದೂರದ ವ್ಯತ್ಯಾಸದ ಪರಿಣಾಮವನ್ನು ನೇರವಾಗಿ ಅಳತೆ ಮಾಡಿದಂತೆಯೇ ಆಗುವುದು.

**ಖಗೋಳ ದಿನಚರಿ**

ಫೆಬ್ರವರಿ ೧ ಚಂದ್ರ – ಶುಕ್ರ ಜೋಡಿ*
೨ ಶನಿ – ಚಂದ್ರ ಜೋಡಿ* (ಆಚ್ಛಾದನೆ ಕಾಣುವುದಿಲ್ಲ)
೫ ಅಮಾವಾಸ್ಯೆ ೦೨:೩೦ಕ್ಕೆ; ಭೂಮಿ – ಚಂದ್ರ ನಡುವೆ ಗರಿಷ್ಠ ದೂರ. ಬುಧ ಗ್ರಹದ ಆಚ್ಛಾದನೆ (ಕಾಣುವುದಿಲ್ಲ)
೧೦ ಮಂಗಳ ಚಂದ್ರ ಜೋಡಿ*
೧೨ ಚಾಂದ್ರಮಾಸದ ಮೊದಲ ಪಾದ
೧೪ ಚಂದ್ರ – ರೋಹಿಣಿ ಜೋಡಿ
೧೯ ಮುಂಜಾವು ಶುಕ್ರ – ಶನಿ ಜೋಡಿ*
೧೯ ಹುಣ್ಣಿಮೆ ; ಚಂದ್ರ –ಮಘ ಜೋಡಿ
೨೬ ಚಾಂದ್ರಮಾಸದ ಕೊನೆಯ ಪಾದ
ಬುಧ ಗ್ರಹದ ಗರಿಷ್ಠ ಕೋನೋನ್ನತಿ*
೨೭ ಗುರು – ಚಂದ್ರ ಜೋಡಿ*
ಮಾರ್ಚ್ ೩ ಚಂದ್ರ ಶುಕ್ರ ಜೋಡಿ
(*ಛಾಯಾಗ್ರಹಣಕ್ಕೆ ಸದವಕಾಶ)

**ಡಾ॥ ಬಿ. ಎಸ್. ಶೈಲಜಾ**
ಜವಾಹರಲಾಲ್ ನೆಹರು ತಾರಾಲಯ, ಹೈಗ್ರೌಂಡ್ಸ್, ಬೆಂಗಳೂರು – ೫೬೦ ೦೦೧

# ಚುಕ್ಕಿ ಕಳಚಿತು

ಬಸ್ಯ ಮತ್ತು ರಾಮಿ ಬಾಲ್ಯದಿಂದ ಆಡುತ್ತ, ಬೆಳೆಯುತ್ತ ಕ್ಲಾಸಮೇಟ್ಸ್ ಆಗಿದ್ದರೂ ರಾಮಿ ಬಸ್ಯನಿಗೆ ಮಾವನ ಮಗಳಾಗುತಿದ್ದಳು. ರಾಮಿ ವಯಸ್ಸಿಗೆ ಬಂದಂತೆ ಕಾಲೇಜಿಗೆ ಹೋದಾಗಿನಿಂದಲೂ ಒಳಗೊಳಗೆ ಪ್ರೀತಿಸುತಿದ್ದ. ಛೇಡಿಸುತಿದ್ದ. ಆದರೆ ರಾಮಿ ಕೈಗೆ ಬಂದಾಗಿನಿಂದ ಒಂದಿನಾನೂ ಮಾತಾಡಿಸಿರಲಿಲ್ಲ. ಅಷ್ಟುಕಷ್ಟೇ ಇದ್ದ. ಆದರೆ ರಾಮಿನ ಪ್ರತಿನಿತ್ಯ ನೋಡುವುದಂತು ಬಿಡುತ್ತಿರಲಿಲ್ಲ. ಬಸ್ಯನಿಗೆ ತಾನು ಕರ್‍ರಗಿದ್ದು, ರೂಪದಲ್ಲಿ ಚೆಂದಿಲ್ಲ ಅನ್ನುವುದು ಬಿಟ್ಟರೆ, ಮನಸಂತೂ ಹಾಲಾಗಿ ಆ ಕಡೆನೇ ಜೋಲಾಡುತಿತ್ತು. 'ಒಂದಲ್ಲ ಒಂದಿನ ರಾಮಿನ ಮದ್ವೆ ಮಾಡಿಕೊಂಡು ಚೆನ್ನಾಗಿ ಸಾಕಿ, ಅವಳ ಇಷ್ಟವಾದ ಬೆಳದಿಂಗಳ ಹಾಲನ್ನ ಉಂಡೇ ಉಣಿಸ್ತಿನಿ...' ಅಂತ ಬಲವಾದ ನಂಬಿಕೆ ಇಟ್ಟುಕೊಂಡಿದ್ದ.

**ನಾಗರಾಜ ಕೋರಿ**

**ಬೆ**ಳಕು ಹರಿದರೆ ನಾಡಿದ್ದು ಸೋಮವಾರ ಸಂತಿ. ಸಂತಿ ಚಿಂತಿಗೆ ಊರಾಗ ಮಂದಿ ಇನ್ನೂ ಮಲಗಿರಲಿಲ್ಲ. 'ಮಳಿಯಿಲ್ಲ ಸುಡುಗಾಡಿಲ್ಲ... ನಾಳೆ ಕೆಲ್ಸಕ ಯಾರು ಕರಿತಾರಂತ' ಕಟ್ಟಿಮ್ಯಾಲ ಕೂತು ಒಬ್ಬರಿಗೊಬ್ಬರು ಮಾತಾಡಿಕೊಳ್ಳುತ್ತಿದ್ದರು. ಈ ಸುದ್ದಿ ಬಂಟದ ಮೇಸ್ತ್ರಿ ಚೆಂದ್ರವ್ವಗ ಅದೆಗೋ ಕೇಳಿಸಿತು. ಅವತ್ತು ಚೆಂದ್ರವ್ವ ಬೇಗನೆ ಊಟ ಮಾಡಿ ಗಂಡ ರುದ್ರನ ಬದಿಗೆ ಮಲಗಿದ್ದಳು. ಗುಣ್ಣೆಲಿದ್ದ ಮೊಬೈಲು "ಶ್ರೀ ಶೈಲ ಯಾತ್ರಿಗಿ ಹೋಗುಣ್ಣಡಿ" ಅಂತ ಮನೆ ನಡುಗಿದಂತೆ ರಿಂಗಾಯ್ತು.
ಚಂದ್ರವ್ವ ಎಚ್ಚೆತ್ತವಳೇ ರುದ್ರನ ಪಸಕ್ಕನ ಎದೆದಬ್ಬಿ ಕಾಲ್ ಎತ್ತಿದಳು. 'ಹಲೋ... ಹೇಳಾಯ... ಹೂಂ... ಹೂಂ... ಆಯ್ತಯ್ಯ ನಾಳೆ ಕರ್‌ಕಂಡು ಬರ್‍ತಿನಿ ತಗಯ್ಯ' ಅಂತ ದುರುಗುಟ್ಟಿ ನೋಡುವ ರುದ್ರಗ 'ಕೊಂಡರೆಡ್ಡೆಯ್ಯನ ಮಗ ಚೆನ್ನರಾಜು ಫೋನು ಮಾಡಿದ್ದು ಹಂಗ್ಯಾಕ ನೋಡ್ತಿ' ಅಂತ ದಿಗಿದಿಗಿ ಉರಿಯುವ ದೀಗಿ ಸಣ್ಣದು ಮಾಡಿ ಕಾವೇರಿದ ರುದ್ರಗ ಅನುವು ಮಾಡಿದಳು. ಕೊನಿಗೆ ಎಲ್ಲಾ ಆದ ಮೇಲೆ ಹೊರಬಂದು 'ಕೊಂಡರೆಡ್ಡಿ ಮಗ ಚೆನ್ನರಾಜು ಸಸಿ ಹಚ್ಚಾಕ ಕರೆಕತ್ತ್ಯಾನ ಹೋಗಾಮ್ರ ಹೆಂಗಪಾ....? ಅಂತ ಕೇಳಿದಳು. ಇದನ್ನು ಕೇಳಿ ಪುದಗ್ಗನ ಎದ್ದುಬಂದ ಲಚ್ಚಿ 'ಈ ಬರಗಾಲದಾಗ ಯಾರು ಬುಡ್ತಾರಂಗೆ ಕೆಲ್ಸ...... ನಾಡದ ಸಂತಿಗೆನ ಆಗತೈತಿ ಹೋಗುಣ್ ನಡ್ರಿ....' ಅಂತ ನಾಳೆ ಕೆಲ್ಸ ಸಿಗುವ ಭರವಸೆಯ ಮೇಲೆ ತಣ್ಣಗ ಉಸಿರಾಡಿಸಿದಳು. ಈ ಲಚ್ಚಿಯ ಶ್ಯಾಣೆತನದ ಮಾತಿಗೆ ಹಾಳುಗೋಡೆಗೆ ಮೈಯಾನಿಸಿ ಕೂತಿದ್ದ ಲಚ್ಚಿ ಗಂಡ ದುರುಗಣ್ಣ, 'ಇಲ್ಲಿಗೆ ಎರ್‍ಡು ಸಾಗಾದ್ವು ಒಬ್ನಿಗೆ ಕೂಲಿ ಕೊಟ್ಟಿಲ್ಲ... ಇನ್ನ ಗುಂಪಿನ್ಯಾಗ ಬಿಡ್ತಾನ... ಬೇಸು ಗುಮ್ಮುತನ ತಗಾ... ನಂದೇನು ಗಂಟು ಹೋಗೈತಿ ಹೋಗಾನ ಹೋಗ್ರಿ... ಡಾನ ಬಿಡ್ರಿ...' ಅಂತ ಬೇಕಾಬಿಟ್ಟಿ ಮಾತಾಡಿದ. ಇದನ್ನು ಕೇಳಿ ಸಿಡಿಮಿಡಿಗೊಂಡ ಚೆಂದ್ರವ್ವ ದುರುಗಣ್ಣನ ತಾರಮಾರ ನೋಡಿ 'ಒಡಕು ಬಾಯನೊ... ಹೆಂಗ ಮಾತಾಡ್‌ತನ ದಿಮ್ಯಾಕಿನೊನು...' ಅಂತ ಬೈದು ಅಷ್ಟು ಮಂದ್ಯಾಗ ಕಾಲು ತಡವರಿಸುತ್ತ ಸಾಗಿದಳು. ಅಲ್ಲಿದ್ದವರು ಚೆಂದ್ರವ್ವನ ಕಡಿಂದಾದ್ರು 'ನಾಳೆ ಮುಂಜಾನೆ ಕೆಲ್ಸನಾದ್ರು ಸಿಕ್ಕಿತಲ್ಲ...' ಅಂತ ಉಮೇದಿಯಿಂದ ಒಳಗೊಳಗೆ ಸಂತಸ ಚಿಗುರೊಡೆಯತೊಡಗಿತ್ತು.

ಚೆಂದ್ರವ್ವ ರುದ್ರನ ಕಟ್ಟಿಕೊಂಡಾಗಿನಿಂದ



ಸಣ್ಣಕ, ಎತ್ತರಕ, ಬೆಳ್ಳಗ ಮೈಕೈ ತುಂಬಿಕೊಂಡಿದ್ದಳು. ಹೀಗೆ ಮೈಕೈ ತುಂಬಿಕೊಂಡ ಚೆಂದ್ರವ್ವ ಸುತ್ತಮುತ್ತ ಆಂಧ್ರದಿಂದ ಬಂದ ಸಾಕಷ್ಟು ಭೂಮಿ ಹೊಂದಿದ ರೆಡ್ಡಿಗಳನ್ನು ಪರಿಚಯ ಮಾಡಿಕೊಂಡಿದ್ದಳು. ಇವರ ಕೆಲ್ಸಕೆ ಹೋಗಲೆಂದು ಒಂದು ಬಂಟ ಕಟ್ಟಿ ಮೇಸ್ತ್ರಿ ಪಟ್ಟಾನೂ ವಹಿಸಿಕೊಂಡು ಮಂದಿನ ಕೆಲ್ಸಕೆ ಕರೆದುಕೊಂಡು ಹೋಗಲು ಶುರುಮಾಡಿದ್ದಳು.

ಬರುಬರುತ್ತ ಊರಲ್ಲಿ ಟಿ.ವಿ. ಇರೋದು ರೆಡ್ಡೇರು ಮತ್ತು ದೊಡ್ಡವರ ಮನಿಯಾಗಷ್ಟೇ... ಅಂತ ತಿಳಿದುಕೊಂಡ ಮೋಟಮಂದಿಗೆ ಚೆಂದ್ರವ್ವನ ಮನೇಲಿ ಸಿಲ್ವಾರ್ ಗಂಗಾಳ, ಸ್ವಾರಿಗಡಿಗಿ ದಿನೇದಿನೇ ಮಾಯವಾಗಿ ಟಿ.ವಿ., ಫ್ರಿಜ್, ನೆಲಪ್ಯಾನು, ಮೊಬೈಲು, ಇನ್ನಿಷ್ಟು ಅದೆಲ್ಲಿಂದಲೋ ಬಂದು ಬಂದು ಸೇರಿದ್ದವು. ಹೌಹಾರಿದ ಮಂದಿ 'ಇಕಿಗೆ ಯಾರು ಕೊಡುತಿದ್ದಾರು... ಮನ್ಯಾಗ ನಿಧಿಗಿಧಿ ಸಿಕ್ಕಿರಬಹುದೇನು?'- ಅಂತ ಬೆಳಬೆಳತನ ಅನುಮಾನದ ದೆವ್ವ ತಲೆಯೊಳಗೆ ತೂರಿಸಿಕೊಂಡು ಚೆಂದ್ರವ್ವನ ಬಗ್ಗೆ ಹಿಗ್ಗಾಮುಗ್ಗಾ ಒಳಗೊಳಗೆ ಮಾತಾಡಿ ಮುಂಜಾನೆ ಕೊಂಡರೆಡ್ಡಿ ಕೆಲ್ಸಕೆ ದಿಢೀರನೇ ಸಜ್ಜಾದರು.

ಹೈದ್ರಾಬಾದ್‌ನಲ್ಲಿ ಓದಿ ಫೇಲಾಗಿ ಬಂದಿರುವ ಕೊಂಡರೆಡ್ಡಿ ಮಗ ಚೆನ್ನರಾಜು. ಕೆಲ್ಸಕೆ ಕರೆದುಕೊಂಡು ಹೋಗಲು ಬೆಳ್ಳಂಬೆಳಗ್ಗೇನೆ ಅಗಸಿಮುಂದ ಟ್ರ್ಯಾಕ್ಟರ್ ನಿಲ್ಲಿಸಿದ್ದ. ಚೆನ್ನರಾಜು ನೋಡಲಿಕ್ಕೆ ಎತ್ತರಕ, ಗಡುಸಾಗಿದ್ದ. ಕೊಂಡರೆಡ್ಡಿ ಬದಲು ಚೆನ್ನರಾಜು ಬಂದಿದ್ದು ನೋಡಿ ಜನ ಮೇಲೆ ಕೆಳಗೆ ನೋಡಿ 'ದೊಡ್ಡವರ ಸುದ್ದಿ ನಮಗ್ಯಾಕ ಬೇಕೆಂದು ನಾಳೆ ಸಂತಿ ಮಾಡಾಕ ರೊಕ್ಕ ಬಂದ್ರ ಸಾಕು.... ಯಾರ್‌ಗೊಡುವಿ ನಮಗ್ಯಾಕ....' ಅಂತ ಒಬ್ಬರಿಗೊಬ್ಬರು ಟ್ರ್ಯಾಕ್ಟರ್ ಹತ್ತಲು ತರಾತುರಿ ಮಾಡಿದರು. ಶಾಲಾ ಕಾಲೇಜಿನ ಹುಡ್ಗ-ಹುಡ್ಗಿಯರು ರಜೆ ಇರುವುದರಿಂದ ತಾವೂ ಕೆಲ್ಸಕೆ ಹೋಗಲು ಸಜ್ಜಾದರು. ಇದನ್ನು ನೋಡಿದ ಲಚ್ಚಿ ಬಡಬಡ ಕೊಳಕು ಮೈಗೆ ನೀರು ಹುಗ್ಗಿಕೊಂಡು 'ಇವತ್ತು ಐತುವಾರ ಕಾಲೇಜು ಇರಗಲ ನನ್‌ಬದ್ಲು ನೀನೆ ಇವತ್ತಿನಷ್ಟು ಕೆಲ್ಸಕ ಹೋಗು... ಚೆಂದ್ರವ್ವ ಸಸಿ ಹಚ್ಚೋದು ಕಲುಸ್ತಾಳ...' ಅಂತೇಳಿ ಮಗಳಾದ ರಾಮಿಗೆ ಬಚ್ಚಲಕ ದಾರಿ ಮಾಡಿದಳು. ರಾಮಿ ಮೈನೆರೆದು ಇಲ್ಲಿಗೆ ಒಂದು ವರ್ಷವಾಗಿತ್ತು. ದುಂಡುದುಂಡಕೆ ಹಾಲುಗೆನ್ನೆಯ ಚೆಲುವೆ ಆಗಿದ್ಲು. ಬಾಳ ದಿನದಿಂದಲೂ ತನ್ನ ಜೊತೆಯವರ ಕೂಡ ಕೆಲ್ಸಕ ಹೋಗಬೇಕೆಂದು ಕಾಯುತ್ತಿರುವ ರಾಮಿಗೆ ಇಷ್ಟೇ ಬೇಕಾಗಿತ್ತು. ರಾಮಿ ಎಷ್ಟೋ ಸಾರಿ ತನ್ನವ್ವನ ಜೊತಿಗೆ ಕೆಲ್ಸಕ ಹೋಗಿ ತನಗೆ ಬೇಕಾದ ಹೊಸ ಬಟ್ಟೆ, ಪೆನ್ನು, ಪುಸ್ತಕ ತಗಂಡೇ ಶಾಲೆಯಿಂದ ಕಾಲೇಜಿನವರೆಗೆ ಓದುತ್ತ, ಬರೆಯುತ್ತ ವಯಸ್ಸಿಗೆ ಬಂದಿದ್ದಳು. ಆಗಿನಂತೆ ಈಗ ಲಚ್ಚಿ ರಾಮಿಯನ್ನು ಕೆಲ್ಸಕೆ ಕಳಿಸಲು ತುಸು ಹಿಂದಮುಂದ ನೋಡಿದಳು. ತಾನು ದಿನಂಪ್ರತಿ ದುಡಿದು ಮೈಯೆಂಬುದು ಹೆಣವಾಗಿ ಸಾಕಾಗಿರುವುದರಿಂದ ಇವತ್ತಿನಷ್ಟು ಹೋಗ್ಲೆಂದು ಮನಸ್ಸು ಹಗುರಮಾಡಿಕೊಂಡಳು. ಆದರೂ ಮನಸ್ಸು ಕುದಿಯುತಿತ್ತು.

## ಅಭಿನಂದನೆ...

ಕುವೆಂಪು ಭಾಷಾ ಭಾರತಿ ಪ್ರಾಧಿಕಾರದ ೨೦೧೮-೧೯ನೇ ಸಾಲಿನ 'ಗೌರವ ಪ್ರಶಸ್ತಿ'ಯು ಕಾಶೀನಾಥ ಅಂಬಲಗಿ, ಜಿ. ಎಸ್. ಆಮೂರ ಮತ್ತು ವೀಣಾ ಶಾಂತೇಶ್ವರ ಇವರುಗಳಿಗೆ ಲಭಿಸಿದೆ.

ಹಾಗೆಯೇ ನವಕರ್ನಾಟಕ ಪ್ರಕಟಿಸಿರುವ ವೇಂಪಲ್ಲಿ ಶರೀಫ್ ಅವರ 'ಜುಮ್ಮಾ' ಕೃತಿಯ ಅನುವಾದಕ್ಕಾಗಿ ಸೃಜನ್ ಅವರಿಗೆ ೨೦೧೭ರ 'ಪುಸ್ತಕ ಬಹುಮಾನ' ಲಭಿಸಿದೆ. ಎಲ್ಲರಿಗೂ 'ನವಕರ್ನಾಟಕ' ಹಾಗೂ 'ಹೊಸತು'ವಿನ ಅಭಿನಂದನೆಗಳು.

ರಾಮಿ ತಲೆಗೆ ಸೀಗೆಪುಡಿ ಎಣ್ಣೆ ಹಚ್ಚಿ, ಮೈಗೆ ಸೋಪು ಉಜ್ಜಿಕೊಂಡು ಚೆನ್ನಾಗಿ ಜಳಕ ಮಾಡಿದಳು. ಚಿತ್ತಾರದ ಲಂಗ-ದಾವಣಿ ತೊಟ್ಟುಕೊಂಡು ಕೆಲ್ಸಕೆ ಹುರಿಯಾದಳು. ಮಗಳು ಕೆಲ್ಸಕೆ ಹೋಗುವ ಸಂಭ್ರಮವ ಕಂಡು ಲಚ್ಚಿ ಜಗಲಿಗಿದ್ದ ಹತ್ತಾರು ಗ್ರಾಮದೇವತೆಗಳಿಗೆ ಕೈಮುಗಿಯುತ್ತ 'ಇದ ಯಾಕಡೆ ಹೋತೆನು ಮೂಳ...' ಅಂತ ದುರುಗಣ್ಣನ ಬೈದಳು. ರಾಮಿ ಹಸಿಕೂದಲು ಹೂಬಿಸಿಲಿಗೆ ಚಳಮಳ ಒಣಗಿಸಲೆಂದು ಹೊರ ಬಂದಾಕಿ, ಸಿನೆಮಾದ ನಟಿಯರು ಕೂದಲು ಎಗರಿಸಿದಂತೆ ಎಗರಿಸಿ ಅಗಸಿ ಸುತ್ತ ಕಣ್ಣಾಡಿಸಿದಳು. ಅಲ್ಲಿ ಚೆನ್ನರಾಜು ಬಗಲಾಗ ತನ್ನಪ್ಪ ದುರುಗಣ್ಣನ ಕಂಡು 'ಎಪಾ... ಎಪೋ...' ಅಂತ ಕೈಮಾಡಿ ಕೂಗಿದ್ಲು. ಅದೇ ತಾನೆ ಚೆನ್ನರಾಜು ಕೊಡಿಸಿದ ಸಿಗರೇಟನ್ನು ಮುಗಿಲಿಗೆ ಮುಖಮಾಡಿ ಪಕಪಕ ಎಳಿತ ಆನಂದಿಸುತಿದ್ದ. ರಾಮಿ ಕೂಗುವುದು ಲಕ್ಷ್ಯನೇ ಇರಲಿಲ್ಲ. ಅದೆಲ್ಲಿಂದಲೋ ಕೆಲ್ಸಕೆ ಹೋಗಲೆಂದು ಅಗಸಿ ಸಂದ್ಯಾಗಿನಿಂದ ಕರ್ರಗೆ ಬಂದವನೇ ಬಸ್ಯ 'ಏ ಮಾವ ಆಕಿ ಕರಿತಾಳ ನೋಡು...' ಅಂತ ರಾಮಿಕಡೆ ಒಂದು ನವಿರಾದ ಮುಗುಳುನಗೆ ತೇಲಿಸಿ ಟ್ರ್ಯಾಕ್ಟರ್ ಹಿಚ್ಚಿನಮ್ಯಾಲ ನಿಂತ. ಬಸ್ಯನ ಕಂಡ ರಾಮಿಗೆ ಒಮ್ಮೆಲೆ ಮೈ ಉರಿತು. ಅದೇತಾನೆ ಬಂದ ದುರುಗಣ್ಣನ ಜೊತಿಗೆ ಪಸಕ್ಕನ ಮೈ ಮುರಿದು ಮನೆಹೊಕ್ಕಳು.



ಅಲ್ರೀ, ನಿಮಗೆ ಬಂದಿರೋ ರೋಗದಿಂದ ಒಂದೇ ಕಡೆ ನಿಲ್ಲೋದಕ್ಕೂ ಶಕ್ತಿಯಿಲ್ಲ. ಅಂಥಾದ್ರಲ್ಲಿ ನೀವು ಎರಡು ಕಡೆ ನಿಲ್ತೀನಿ ಅಂತಿದೀರಲ್ರೀ?!

ಬಸ್ಯ ಮತ್ತು ರಾಮಿ ಬಾಲ್ಯದಿಂದ ಆಡುತ್ತ, ಬೆಳೆಯುತ್ತ ಒಂದೇ ಕ್ಲಾಸಮೇಟ್ ಆಗಿದ್ದರೂ ರಾಮಿ ಬಸ್ಯನಿಗೆ ಮಾವನ ಮಗಳಾಗುತಿದ್ದಳು. ರಾಮಿ ವಯಸ್ಸಿಗೆ ಬಂದಂತೆ ಕಾಲೇಜಿಗೆ ಹೋದಾಗಿನಿಂದಲೂ ಒಳಗೊಳಗೆ ಪ್ರೀತಿಸುತಿದ್ದ. ಛೇಡಿಸುತಿದ್ದ. ಆದರೆ ರಾಮಿ ಕೈಗೆ ಬಂದಾಗಿನಿಂದ ಒಂದಿನನೂ ಮಾತಾಡಿಸಿರಲಿಲ್ಲ. ಅಷ್ಟುಕಷ್ಟೇ ಇದ್ದ. ಆದರೆ ರಾಮಿನ ಪ್ರತಿನಿತ್ಯ ನೋಡುವುದಂತು ಬಿಡುತ್ತಿರಲಿಲ್ಲ. ಬಸ್ಯನಿಗೆ ತಾನು ಕರ್ರಗಿದ್ದು ರೂಪದಲ್ಲಿ ಚೆಂದಿಲ್ಲ ಅನ್ನುವುದು ಬಿಟ್ಟರೆ, ಮನಸಂತು ಹಾಲಾಗಿ ಆಕಡೆನೇ ಜೋಲಾಡುತಿತ್ತು. 'ಒಂದಲ್ಲ ಒಂದಿನ ರಾಮಿನ ಮದ್ವೆ ಮಾಡಿಕೊಂಡು ಚೆನ್ನಾಗಿ ಸಾಕಿ, ಅವಳ ಇಷ್ಟವಾದ ಬೆಳದಿಂಗಳ ಹಾಲನ್ನ ಉಂಡೇ ಉಣಿಸ್ತಿನಿ...' ಅಂತ ಬಲವಾದ ನಂಬಿಕೆ ಇಟ್ಟುಕೊಂಡಿದ್ದ. ಇದರ ಸಲುವಾಗಿಯಾದರೂ ಸದರ ಬೆಳಿಸಿ ತನ್ನ ಬುಟ್ಟಿಗೆ ಹಾಕಿಕೊಳ್ಳಬೇಕೆಂದು ರಾಮಿ ಕೆಲ್ಸಕ ಹೋಗುವುದು ಗೊತ್ತಾಗಿ, ಮುಂಜಮುಂಜಾನನೆ ಕೆಲ್ಸಕೆ ಕರೆಯಲು ಮೊಂಡು ಧೈರ್ಯ ಮಾಡಿ ರಾಮಿ ಮನೆಕಡೆ ನಡೆದ. ಆದ್ರೆ ಚೆಂದ್ರವ್ವ ತಮ್ಮ ಹಿತ್ತಲಲ್ಲಿ ಬೆಳೆದ ದಾಸವಾಳ ಹೂ ರಾಮಿಗೆ ಕೊಟ್ಟಂತೆ ಮಾಡಿ ಕೆಲ್ಸಕ ಬಾರೆಂದು ಹೇಳಿ ಹೋದ ಮೇಲೆನೆ ಬಸ್ಯ ರಾಮಿ ಮನಿಗೆ ಬಂದಿದ್ದ. ರಾಮಿಗೆ ಬಸ್ಯನ ಹುಚ್ಚಾಟ ಶಾಲಾ-ಕಾಲೇಜಿನಿಂದಲೂ ಗೊತ್ತಿತ್ತು 'ಬಸ್ಯ ಇನ್‌ಮ್ಯಾಲ ನೆವಹೂಡಿ ನಮ್ಮನಿಗೆ ಬರಬಾರದೆಂದು ತನ್ನ ಅಪ್ಪಮ್ಮನ ಮುಂದನೇ ಬಸ್ಯನಿಗೆ ಮಾವ ಎನ್ನದೆ 'ಅಣ್ಣಾ... ನಾನು ಬರ್ತಿನಿ ನಡಿ...' ಅಂತಂದು ಒಣನಗೆ ಬೀರಿದ್ದಳು. ಆಗ ಬಸ್ಯನ ಎದೆ ಚೂರಾಗಿತ್ತು. ಆದರೂ ಕಲ್ಲಿನಂತೆ ನಿಂತಿದ್ದ. ಬಸ್ಯನಿಗೆ ಮಾವ ಅನ್ನೋ ಬದಲು ಅಣ್ಣಾ... ಎಂದಿದ್ದು ಕೇಳಿ ಅವರಪ್ಪಮ್ಮ ಏನೇನೂ ಮಿಸುಕಾಡಲಿಲ್ಲ. ತಮ್ಮಗಳು ಬೆಳ್ಳಗ ಬಂಗಾರದಂಗ ಇರುವುದರಿಂದ ಬಸ್ಯನಿಗೆ ರಾಮಿನ ಕೊಡುವುದು ಎಳ್ಳಷ್ಟು ಇಷ್ಟಿರಲಿಲ್ಲ. ಹೀಗಾಗಿ ತಂದೆ-ತಾಯಿ ರಾಮಿಯ ಪರ ಮೌನವಹಿಸಿ ಕಿವುಡರಂತೆ



ನಿಂತಿದ್ದರು. ಇದು ಬಸ್ಯನಿಗೆ ಗೊತ್ತಾಗಿ ಅವಮಾನದಿಂದ 'ಇನ್ನು ಸಣ್ಣ ಹುಡ್ಗಿದಾಳ... ಅಣ್ಣ್ಯಾರೋ... ಮಾವ್ಯಾರೋ... ಅಂತ ಗೊತ್ತಾಗಲ್ಲಂತ...' ತಾನೇ ಸಂಭಾಳಿಸಿಕೊಂಡು ಬಂದಿದ್ದು ನೆನಪು ಮಾಡಿಕೊಂಡು ಟ್ರ್ಯಾಕ್ಟರ್ ಹಿಚ್ಚಿನ ಮೇಲೆ ಹಾಗೆ ನಿಂತಿದ್ದ.

ಒಂತಾಸು ಕಳೆದಿರಬೇಕು. ರಾಮಿ ಟ್ರ್ಯಾಕ್ಟರ್ ಹತ್ತಿದವಳೆ ಚೆಂದ್ರವ್ವನ ಬದಿಗೆ ಕೂತಳು. ಚೆನ್ನರಾಜು ತನ್ನ ಎಳೆಮೀಸೆ ಮರೆಯಲಿ ನಗುತ್ತ ಟ್ರ್ಯಾಕ್ಟರ್ ಛಾಲೂ ಮಾಡಿದ. ಚೆಂದ್ರವ್ವ ಕೊಟ್ಟ ದಾಸವಾಳ ಹೂ ಮುಡಿದ ರಾಮಿ ಬಸ್ಯನ ಕಣ್ಣಿಗೆ ಬೆಳ್ಳಗೆ ದೇವತೆ ಕಂಡಂತಾದಳು. ಮತ್ತೆಮತ್ತೆ ತಡವರಿಸಿ ನೋಡಲು ಮುಂದಾದ. ಟ್ರ್ಯಾಕ್ಟರ್ ಓಡಲು ಮುಂದಾಯ್ತು. ರಾಮಿ ಕತ್ತೆತ್ತಿಯೂ ನೋಡಲಿಲ್ಲ. ತನ್ನ ಮೈ ತಾನು ನೋಡಿ ನುಲಿದಾಡತೊಡಗಿದಳು.

ರಾಮಿನ ನೋಡುತ್ತ ಮೈಮರೆತು ಟ್ರ್ಯಾಕ್ಟರ್ ಹಿಚ್ಚಿನ ಮೇಲೆ ನಿಂತ ಬಸ್ಯನಿಗೆ, ಎಚ್ಚರಾದಾಗ ಟ್ರ್ಯಾಕ್ಟರ್ ಕೊಂಡರೆಡ್ಡಿ ಗದ್ದೆಗೆ ಬಂದು ನಿಂತಿತ್ತು. ಎಲ್ಲರೂ ಸಸಿ ಹಚ್ಚುವ ಕೆಲ್ಸಕ್ಕೆ ನಿಂತರು. ಹೂಬಿಸಿಲು ಮಾಯವಾಗಿ ರಣರಣ ಬಿಸಿಲು ಹಬ್ಬಿತು. ರಾಮಿ ಚೆಂದ್ರವ್ವನ ಬದಿಗೆ ಮೆಲ್ಲನೆ ಹೊಸ ಕಲಿಕೆಯ ಹೊಸ ತೆರದಲಿ ಸಸಿ ಹಚ್ಚಲು ಮುಂದಾದಳು. ಇನ್ನು ಕೆಲವೊಬ್ಬರು 'ನಾ... ಬಲ ನೀ... ಬಲ' ಅಂತ ಸಸಿ ಹಚ್ಚಲು ಭಾರಿ ತುರ್ತಾದರು. ಬಸ್ಯ ತನಗೆ ಸಸಿ ಹಚ್ಚಲು ಬಾರದ ಕಾರಣವಾಗಿ ರಾಮಿಯ ಹಿಂದಿದೆ ಸಸಿಸೂಡು ತಂದಾಕುವ ಕೆಲ್ಸ ವಹಿಸಿಕೊಂಡ. ಬಸ್ಯ ಹಿಂದಿಂದೆ ಸಸಿಸೂಡು ತಂದಾಕುವುದು ರಾಮಿಗೆ ಏಕೋ ಹುಳ ಕಡಿದಂತೆ ಆಯ್ತು. 'ಏ... ಕರಿಮ್ಯಾ... ಬ್ಯಾರೆಕಡೆ ಸಸಿ ಸೂಡಾಕು... ಹಿಂದಿಂದ ಯಾಕ ಗಂಟು ಬಿದ್ದಿದ್ದಿ ಹಂದಿ ಅಂಥೋನೆ...' ಅಂತ ಅಷ್ಟು ಮಂದ್ಯಾಗ ಬಸ್ಯನ ಸಟಕ್ಕನ ಬೈದು ಚೆಂದ್ರವ್ವನ ಬದಿಗೆ ಮತ್ತಷ್ಟು ಹೊಕ್ಕಳು. ಮಂದಿ ಗಾಬರಿಯಾಗಿ ರಾಮಿನ, ಬಸ್ಯನ ನಿಂತೇ ನೋಡಿದರು. ಬಸ್ಯನ ಮನಸ್ಸಿಗೆ ಛೀ... ಥೂ... ಎನಿಸಿ ಸಿಟ್ಟು, ದುಃಖ, ಸಂಕಟ ಒಮ್ಮೆಲೆ ಒತ್ತರಿಸಿ ಬಂದಿತ್ತಾದರೂ 'ಎಷ್ಟಾದರೂ ಮಾವನ ಮಗಳಲಾ ಇರ್ಲಿಬಿಡು...' ಎಂದು ಬೇರೆಕಡೆ ಸಸಿ ಸೂಡಾಕಲು ಅಣಿಯಾದ.

ಸಸಿ ಹಚ್ಚುವುದರಲ್ಲೇ ಚೆಂದ್ರವ್ವನೇ ಮುಂದಿದ್ದು, ಮಂದಿಗೆ 'ಹಂಗಚ್ರು ಹಿಂಗಚ್ರು...' ಅಂತ ಗತ್ತಿಲೆ ಹೇಳುವುದು ನಡಿದೇ ಇತ್ತು. ಮಂದೆಲ್ಲ 'ಕೊಂಡರೆಡ್ಡಿಗಿಂತ ಈಕೆ ಊರು ಗೌಡ್ತಿ... ಆಗ್ಯಾಳ...' ಅಂತ ಚೆಂದ್ರವ್ವನ ತೆಳಗಮ್ಯಾಗ ನೋಡಿ ಮುಸುನಕ್ಕು ಧಬಾಸಿ ಸಸಿ ಹಚ್ಚಿದರು. ತೋಟದ ಮನೇಲಿ ಕೂತಿದ್ದ ಚೆನ್ನರಾಜು 'ಕೆಲ್ಸ ಮಾಡ್‌ತಾರೋ ಬರಿ ನಕ್ಕಂತ ನಿಂತಾರೊ' ಅಂತ ಬಿಳಿಯಂಗಿ ಬಿಳಿಲುಂಗಿ ತೊಟ್ಟು ಬೆಳ್ಳಗೆ ದಡದಡ ಬಂದವನೇ, ದೂರದಲ್ಲಿ ಬಗ್ಗಿ ಹಚ್ಚುತಿದ್ದ ಚೆಂದ್ರವ್ವನ ಬದಿಗೆ ಗುರಿ ಹೊಂದಿಸಿ ತನ್ನ ಮೊಬೈಲಿಂದ ಸೆಲ್ಫೀ ತೆಗೆದು ಸರಕ್ಕನ ಮನೆಕಡೆ ದಾರಿಬಿಟ್ಟ. ರಾಮಿ ಹೂವಾಗಿ ಅರಳಿ ಸಸಿಹಚ್ಚಲು ಇನ್ನಷ್ಟು ಹುರುಪುಗೊಂಡಳು. ಚೆಂದ್ರವ್ವ ತನ್ನ ಸೆರಗಿನ ಮರೆಯಲಿ ಮುಸುಮುಸು ನಕ್ಕಳು. ಮಂದೆಲ್ಲರಿಗೆ ಸಸಿಸೂಡು ಎಸೆಯುತಿದ್ದ ಬಸ್ಯ. ಚೆನ್ನರಾಜು–ಚೆಂದ್ರವ್ವನ ಕಂತ್ರಾಟ ದೂರದಿಂದಲೇ ನೋಡಿ 'ನಮ್ಮವಕ ಬುದ್ಧಿಲ್ಲ... ಈ ನನ್‌ಮಕ್ಳಿಗೆ ಐಸತ್ತು ಕೊಟ್ಟದಕ ಇಲ್ಲಿಗಿ ಬಂದ್ ನಿಂತೈತಿ...' ಅಂತ ಸಿಟ್ಟಿಲೇ ಎರ್ರಾಬಿರ್ರಿ ಸಸಿಸೂಡು ಎಸೆಯಲು ಮುಂದಾದ. ಅದು ಯಾರಿಗೂ ಗೊತ್ತಾಗಲಿಲ್ಲ. ಆಗಲೇ ಹೊತ್ತು ಇಳಿತಿತ್ತು. ಮಂದೆಲ್ಲ 'ಮನ್ಯಾಗ ಕೂಸುಕುನ್ನಿ ಅಳುತಿರುತಾವು...' ಅಂತ ಮನೆಗೆ ಹೋಗಲು ಆಗಲೆ ಟ್ರ್ಯಾಕ್ಟರ್ ಹತ್ತಿಕೂತರು.

ಚೆಂದ್ರವ್ವ ನಾಳಿನ ಸಂತಿಗೆ ರೊಕ್ಕ ತರಲೆಂದು ಕೊಂಡರೆಡ್ಡಿ ಮನೆಕಡೆ ತಾನೂ ಹೋಗದಲ್ಲದೆ, ಸಾಲಿ ಕಲಿತ ಹುಡ್ಗಿ ಚೆನ್ನಾಗಿ ಲೆಕ್ಕ ಮಾಡ್ತಾಳೆಂದು ರಾಮಿನ ಕರೆದುಕೊಂಡು ಹೋದಳು. ಬಸ್ಯನ ಮನಸ್ಸು ಕಸಿವಿಸಿ ಆತು. 'ರಾಮಿಗೆ ಹೋಗಬ್ಯಾಡೆಂದು...' ಹೇಳಬೇಕೆನಿಸಿತು. ಯಾಕೋ ಬೇಡವೆನಿಸಿ ಹೇಳಲಿಲ್ಲ. ಟ್ರ್ಯಾಕ್ಟರ್ ಊರಿಗೆ ಬಂತು. 'ನಮ್ ರಾಮಿ ಯಾಕ ಬರಲಿಲ್ಲ...?' ಅಂತ ಲಚ್ಚಿ ಮಂದಿನ ಬಡಬಡಸಿ ಕೇಳಿದಳು. 'ಬುಗುಲು ಬುಳಕ ಏನಿಲ್ಲ... ಚಂದ್ರವ್ವನ ಜೊತಿಗಿ ಲೆಕ್ಕಮಾಡಿ ಕೂಲಿರೊಕ್ಕ ತರಾಕ ಹೋಗ್ಯಾಳ... ಚೆನ್ನರಾಜುನ ಸೈಕಲ್ ಮೋಟ್ರುದಾಗ... ಬರ್ತಾಳ ತಗಾ...' ಅಂತ ಸುಂಕವ್ವ ರಾಮಿಯ ಕ್ಯಾರಿಯರ್ ಡಬ್ಬಿಕೊಟ್ಟು ದಡದಡ ಹೋದಳು. 'ಈ ಕೋತಿಗೆ ಯಾಕ್‌ಬೇಕು ಇಲ್ಲದ್ದು ಹಿರೇತನ, ಮಂದಿ ಬಂದಾಗ ಬರಾಕ ಏನಾಗ್ಯೆತಿ ದಾಡಿ...' ಅಂತ ಲಚ್ಚಿ ಹೊಟ್ಟ್ಯಾಗ ಚಿಟುಮುಳ್ಳಾಡತೊಡಗಿತು. 'ಹೀಗ ಬಂದಾರು ಆಗ ಬಂದಾರು...' ಅಂತ ಲಚ್ಚಿ ಹೊರನಿಂತು ಕಾದೇ ಕಾದಳು. ರಾಮಿ ಇನ್ನೂ ಮನೆಕಡೆ ಸುಳಿಯಲಿಲ್ಲ.

ಬಸ್ಯನಿಗೆ ರಾಮಿಯ ನೆನಪಿನಿಂದ ನಿದ್ದೆ ಎಂಬುದು ಸತ್ತು ಹೋಗಿ ಕಣ್ಣುಗಳು ಕೆಂಪಗಾಗಿ ಮೋಡ ನೋಡುತಿದ್ದವು. ಆಗ ಅಮಾಸಿ ಚುಕ್ಕಿ ಎದೆಯ ಮೇಲೆ ಪಳಕ್ಕನ ಹುಚ್ಚಿ ಬಿದ್ದಂತಾಯ್ತು. ಗಡಬಡಸಿ ಎದ್ದುಕೂತ. ಸಮಯ ಮೀರಿತ್ತು. ಎದ್ದವನೇ ಸೀದಾ ಎರೆದಾರಿ ಕಡೆ ಓಡಿದ. ಕತ್ತಲ ದಾರಿಯ ಕಲ್ಲು–ಮುಳ್ಳು ಲೆಕ್ಕಕ್ಕಿರಲಿಲ್ಲ. ಇನ್ನೂ ಗದ್ದೆಮಡಿಯಷ್ಟು ದೂರ ಇರುವ ಕೊಂಡರೆಡ್ಡಿ ಮನೆಮುಂದೆ ಗಕ್ಕನೇ ನಿಂತ. ಚೆಂದ್ರವ್ವ ಅವರ ಮನೆಮುಂದೆ ಕೈ ಹೊಸಿಯುತ್ತ ಒಬ್ಬಳೆ ಕೂತಿದ್ದಳು. ನಾಲ್ಕು ದಿಕ್ಕಿನ ಕಡೆ ಇಬ್ಬರು ಜೊತೆಗೂಡಿ ನಗಾಡುವುದು, ಪಿಸುಗುಡುವುದು ಕೇಳಿಸಿತು. ಅದು 'ಕರಿಮ್ಯಾ... ಕರಿಮ್ಯಾ...' ಅಂತ ಬಸ್ಯನ ಕಿವಿಗೆ ಮುಳ್ಳು ಚುಚ್ಚಿದಂತೆ ಮಾರ್ದನಿಸಿತು. ಒಮ್ಮೆಲೆ ಬಸ್ಯ ನೆಲಕ್ಕೆ ಕುಸಿದು ಏನು ತಿಳಿಯದಂತಾಗಿ ಮತ್ತೆ ಆಕಾಶ ನೋಡಿದ. ಮೇಲೆ ಒಂದು ಚುಕ್ಕಿಯೂ ಕಾಣಿಸಲಿಲ್ಲ. ಅಮಾಸಿ ಕತ್ತಲೇ ಚೆಂದವೆನಿಸಿ ಕಣ್ಣೀರು ದಳದಳ ಉದುರಿಸಿದ.

**ನಾಗರಾಜ ಕೋರಿ**
ಸಂಶೋಧನಾ ವಿದ್ಯಾರ್ಥಿ
ಕನ್ನಡ ಭಾಷಾಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ ಹಂಪಿ. ವಿದ್ಯಾರಣ್ಯ–೫೮೩೨೭೬
ಹೊಸಪೇಟೆ, ತಾಲ್ಲೂಕು, ಬಳ್ಳಾರಿ ಜಿಲ್ಲೆ

# ಅಮರೇಶರ ಹೊಸ ಕಥಾ ಪ್ರಸಂಗ

ಸುಮಾರು ಎರಡು ದಶಕಕ್ಕೂ ಹೆಚ್ಚಿನ ಕಾಲ ತಮ್ಮದೇ ಛಾಪಿನ ಕಥೆಗಳನ್ನು ಓದುಗರಿಗೆ ನೀಡುತ್ತಾ ಬಂದಿರುವ, ಕನ್ನಡದ ಪ್ರಮುಖ ಕತೆಗಾರರಲ್ಲೊಬ್ಬರಾದ ಅಮರೇಶ ನುಗಡೋಣಿ "ಚುಕ್ಕಿ ಮದುವೆ ಪ್ರಸಂಗ" ಎನ್ನುವ ಕತೆಗಳ ಸಂಗ್ರಹವನ್ನು ಇತ್ತೀಚೆಗೆ ಹೊರತಂದಿದ್ದಾರೆ. ಇತರ ಅನೇಕ ಸಾಹಿತ್ಯ ಪ್ರಕಾರದ ಕೃತಿಗಳನ್ನು ಹೊರತುಪಡಿಸಿದಂತೆ, ಇದು ಅವರ ಐದನೇ ಸಣ್ಣ ಕತೆಗಳ ಸಂಕಲನ.

ಅಮರೇಶರನ್ನು ಮೊದಲಿನಿಂದಲೂ ಓದುತ್ತಿರುವವರಿಗೆ ಅವರ ಕತೆಗಳು ಹೇಗೆ ಸಮಕಾಲೀನ ಸಮಸ್ಯೆಗಳಿಗೆ ಸ್ಪಂದಿಸುತ್ತಾ ಬಂದಿವೆ ಎನ್ನುವುದು ಗಮನಕ್ಕೆ ಬರುತ್ತದೆ. ಅವರ ಅನೇಕ ಕತೆಗಳಲ್ಲಿ (ಉದಾಹರಣೆಗೆ: ತಮಂಧದ ಕೇಡು, ಸವಾರಿ) ಊಳಿಗಮಾನ್ಯ ಪದ್ಧತಿಯ ಕ್ರೌರ್ಯದ ಅನಾವರಣವಿದೆ. ಜಮೀನುದಾರಿಕೆಯ ದಬ್ಬಾಳಿಕೆ ಹಾಗೂ ಅಸಹಾಯಕ, ಬಡವರ ಶೋಷಣೆಯ ಹಲವು ಮುಖಗಳನ್ನು ಅವರು ತೋರಿಸಿ ಕೊಟ್ಟಿದ್ದಾರೆ. ಈಗ ಊಳಿಗಮಾನ್ಯ ಪದ್ಧತಿಯೆಂಬುದು ಹಳೆಯ ಪ್ರಮಾಣ ಹಾಗೂ ರೂಪದಲ್ಲಿ ಅಸ್ತಿತ್ವದಲ್ಲಿಲ್ಲ. ಆದರೆ ಶೋಷಣೆ ಹಾಗೂ ಕ್ರೌರ್ಯ ಮಾತ್ರ ಕಡಿಮೆಯಾಗಿಲ್ಲ. 'ಗ್ಲೋಬಲೈಸೇಷನ್'ನ ಮೋಡಿಗೆ ತುತ್ತಾಗಿರುವ ಇಂದಿನ ಕಾಲಘಟ್ಟ, ಆಧುನಿಕತೆ ಹಾಗೂ ನಾಗರಿಕತೆಗೆ ತನ್ನದೇ ವ್ಯಾಖ್ಯೆ ನಿಗದಿಪಡಿಸಿದೆ. ಎಲ್ಲದರ ಮೂಲ ಉದ್ದೇಶ ವ್ಯಾಪಾರೀಕರಣವೇ ಆಗಿದೆ. ಅದು ಗ್ರಾಮೀಣ ಜನರ ಜೀವನವನ್ನು ಇನ್ನಷ್ಟು ದುರ್ಭರಗೊಳಿಸಿದೆ. ಶೋಷಣೆ ಎನ್ನುವುದು ಹೊಸ ದಿರಿಸು ತೊಟ್ಟು ನಮ್ಮೆದುರು ನರ್ತಿಸುತ್ತಿದೆ. ಹೀಗೆ, ಹಳೆಯ ಸಮಸ್ಯೆಗಳನ್ನೇ ಹೊಸ ತಳಹದಿಯ ಮೇಲಿಟ್ಟು ನೋಡುವ, ಅವುಗಳ ಹಲವು ಆಯಾಮ, ಸಂಕೀರ್ಣತೆಗಳನ್ನು ಶೋಧಿಸುವ ಪ್ರಯತ್ನದಂತೆ "ಚುಕ್ಕಿ ಮದುವೆ ಪ್ರಸಂಗ"ದ ಕತೆಗಳು ನಮಗೆ ಗೋಚರಿಸುತ್ತವೆ. "ಇದೇನು ಬಸವಣ್ಣನ ಕಾಲವಾ? ಚಪ್ಪಲಿ ಹೊಲಿಯುವವನ ಕೈಯ್ಯಲ್ಲಿ ಲಿಂಗ ಬರುವುದಕ್ಕೆ?" ಎನ್ನುವ ಅವರ ಹಿಂದಿನ ಕತೆಯೊಂದರ ಸಾಲಲ್ಲೇ ಅವರು ತಮ್ಮ ಕತೆಗಳಲ್ಲೂ

**ಕರ್ಕಿ ಕೃಷ್ಣಮೂರ್ತಿ**

ಕಾಲಚಕ್ರದ ಉರುಳುವಿಕೆಯ ಮುನ್ಸೂಚನೆ ನೀಡಿದ್ದಾರೆ.

ಶಿವನಕೊಳ್ಳ ಎನ್ನುವ ಹಳ್ಳಿಯೊಂದರಲ್ಲಿ ಗಣಿಗಾರಿಕೆ ಎಂಬುದು ಮಲ್ಲಯ್ಯನೆನ್ನುವ ಸಾಮಾನ್ಯ ರೈತನ ಬದುಕನ್ನು ಮೂರಾಬಟ್ಟೆ ಮಾಡಿ ಬಿಸಾಡುವ ಕತೆ "ದಾಳಿ ನಡೆದಾವೋ ಅಣ್ಣಾ." ಆತ ತನ್ನ ಹಸು, ಹೊಲ, ಪರಿಸರ ಹಾಗೂ ಕುಲದೇವರಾದ ಮೈಲಾರಲಿಂಗನೊಡನೆ ಬಾಳುತ್ತಿರುವವನು. ಮಗ ದಾರಿ ತಪ್ಪಿದ ನೋವಿನ ನಡುವೆ, ಮಗಳು ಪಟ್ಟಣದಲ್ಲಿ ಗಂಡನೊಂದಿಗೆ ಸುಖವಾಗಿದ್ದಾಳೆ ಎಂಬ ಸಮಾಧಾನವಿದೆ. ಆದರೆ ದುರಂತವೆಂದರೆ, ಮಗನಿಂದ ಬಹುಕಾಲದಿಂದ ಕಾಪಿಟ್ಟುಕೊಂಡು ಬಂದಿದ್ದ ಜಮೀನನ್ನು ಮಗಳು (ಅಪ್ಪನಿಗೇ ತಿಳಿಯದಂತೆ) ಮಾರಲು ಹೊರಡುತ್ತಾಳೆ. ಆಕೆ ಮೊದಲು ಮಲ್ಲಯ್ಯನ ಜಮೀನು ಮಾರದೆ ಇರುವ ನಿರ್ಧಾರಕ್ಕೆ ಬೆನ್ನೆಲುಬಾಗಿ ನಿಂತಿದ್ದವಳು. ಮೇಲ್ನೋಟಕ್ಕೆ ಆಕೆಯನ್ನು ತಪ್ಪಿತಸ್ಥ ಸ್ಥಾನದಲ್ಲಿ ನಿಲ್ಲಿಸಬಹುದು ಎಂದೆನಿಸಿದರೂ, ನಮಗದು ಸಾಧ್ಯವಾಗುವುದಿಲ್ಲ. ಪರಿಸ್ಥಿತಿಯ ಅನಿವಾರ್ಯತೆಗೆ ನಿರ್ಧಾರಗಳ ಜೊತೆ ಹೇಗೆ ನಂಬಿಕೆಗಳೂ, ಸಂಬಂಧಗಳೂ ಕ್ಷೀಣಿಸುತ್ತಾ ಹೋಗುತ್ತವೆ ಎಂಬುದನ್ನು ಅಮರೇಶರು ಈ ಕತೆಯಲ್ಲಿ ಹೆಣೆದಿರುವ ರೀತಿ ವಿಶಿಷ್ಟವಾಗಿದೆ.

ಊರಿನ ನೆಲದ ಮೇಲೇ ಈಗ ರೆಸಾರ್ಟೊಂದು ತಲೆಯೆತ್ತಿ ನಿಂತಿದೆ. ಆದರೆ ಅಲ್ಲಿ ಊರಿನ ಜನರಿಗೇ ಪ್ರವೇಶವಿಲ್ಲ. ಅಲ್ಲಿ ಕೆಲ ಸ್ಥಳೀಕರು ಕೂಲಿಯವರಾಗಿ ಕೆಲಸ ಮಾಡುತ್ತಿದ್ದಾರಷ್ಟೇ. ಇವೆಲ್ಲ ಬಂಡವಾಳಶಾಹಿ ದಬ್ಬಾಳಿಕೆಯ ಪ್ರತಿಫಲನಗಳೇ. ಹಿಂದೆ ಜಮೀನುದಾರಿಕೆಯಿತ್ತು. ಅಲ್ಲಿಯ ಜಮೀನುದಾರನೊಂದಿಗೆ ಒಂದು ಮುಖಾಮುಖಿಯಿರುತ್ತಿತ್ತು. ಆದರೆ ಈಗ ಹಾಗಲ್ಲ. ಬಂಡವಾಳಶಾಹಿ ವ್ಯವಸ್ಥೆಯ ಹಿಂದಿನ ಸೂತ್ರಧಾರ ನಮಗೆ ಕಾಣುವುದೇ ಇಲ್ಲ. ಆತ ಒಬ್ಬನೇ ವ್ಯಕ್ತಿಯಾಗಿರಬೇಕೆಂದೂ ಇಲ್ಲ. ಆದರೆ ಒಟ್ಟಾರೆಯಾಗಿ ಆ ವ್ಯವಸ್ಥೆಯೊಂದು ಸಮಾಜದಲ್ಲಿ ಹರಡಿರುವ ತಣ್ಣನೆ ಕ್ರೌರ್ಯ ಹಿಂದೆಂದೂ ಇಲ್ಲದ

ನಾನು ಓದಿದ ಪುಸ್ತಕ




ಸಂಪಾದಕರು

**ಡಾ॥ ಅಮರೇಶ ನುಗಡೋಣಿ**

ಪುಟಗಳು : ೧೬೪

ಬೆಲೆ : ರೂ. ೧೫೦/-

ಪ್ರಕಾಶಕರು : **ದೇಸಿ ಪುಸ್ತಕ**

೧೨೧, ೧೩ನೇ ಮುಖ್ಯರಸ್ತೆ

ಎಂ. ಸಿ. ಬಡಾವಣೆ, ವಿಜಯನಗರ

ಬೆಂಗಳೂರು – ೫೬೦೦೪೦

ರೀತಿಯಲ್ಲಿ ಪಸರಿಸುತ್ತಿದೆ. ಆಕ್ರೋಶಗೊಂಡು ಕೊರಳ ಪಟ್ಟಿ ಹಿಡಿದು ಅಲ್ಲಾಡಿಸಲು, ಅಥವಾ ಸೋತು ಸುಣ್ಣವಾಗಿ 'ದುರುಗ'ನಂತೆ (ತಮಂಧದ ಕೇಡು ಕತೆಯ ಮುಖ್ಯ ಪಾತ್ರ) ಕಾಲಿಗೆ ಬೀಳಲು ಆ 'ಒಡೆಯ' ನಮಗಿಂದು ಕೈಗೆ ಸಿಗುವುದೇ ಇಲ್ಲ!

ಈ ಬದಲಾದ ಪರಿಸ್ಥಿತಿಯನ್ನು ಅಷ್ಟೇ ಸಶಕ್ತವಾಗಿ ಅಮರೇಶರು ನಮಗೆ ಕತೆಗಳಲ್ಲಿ ಹಿಡಿದುಕೊಡುತ್ತಾರೆ. ಇಲ್ಲಿ ಹಲವು ಬಗೆಯ ದಾಳಿಗಳಿವೆ. ಗಣಿ ದಾಳಿ ನಡೆದಿದೆ, ರೆಸಾರ್ಟುಗಳ ದಾಳಿ ನಡೆದಿದೆ. ಇವೆಲ್ಲಾ ಭೂಮಿಯ ಮೇಲೆ, ಪರಿಸರದ ಮೇಲೆ ನಡೆದ ದಾಳಿಗಳಾದರೆ, ಮಲ್ಲಯ್ಯನ ಮನದ ಮೇಲೆ ಬೇರೆಯದೇ ರೀತಿಯ ದಾಳಿ ನಡೆದಿದೆ. ಮೊದಲೇ ಕೈಗೆ ಸಿಗದ ಮಗ ಈಗ ಲೋಕವನ್ನೇ ತ್ಯಜಿಸಿದ್ದಾನೆ. ಮಡದಿ ಅಗಲಿದ್ದಾಳೆ. ಕೊನೆಯಲ್ಲಿ ಮಗಳಿಂದಲೇ ದಾಳಿ ನಡೆದಿದೆ. ಹೀಗೆ ಈ ಕತೆಯಲ್ಲಿ 'ದಾಳಿ' ಎಂಬುದನ್ನು ಕೇವಲ ಭೌತಿಕ ಆಕ್ರಮಣಕ್ಕೆ ಸೀಮಿತ ಗೊಳಿಸಲು ಬರುವುದಿಲ್ಲ. ಇದೇ ನುಗಡೋಣಿಯವರ ಕಥೆಗಳ ವೈಶಿಷ್ಟ್ಯ ಅವರು ಶೋಷಿತನ ಬವಣೆಯನ್ನು ವರ್ಣಿಸುತ್ತಲೇ ಇಡೀ ಒಂದು ಶೋಷಣಾ ವ್ಯವಸ್ಥೆಯ ಚಿತ್ರಣವನ್ನೂ ನಮಗೆ ಕಟ್ಟಿಕೊಡುತ್ತಾರೆ.

ರೂಪಕಗಳ ಹದವಾದ ಮಿಶ್ರಣ ಅವರ ಕತೆಗಳ ಮತ್ತೊಂದು ಗಮನಾರ್ಹ ಅಂಶ. ಮಲ್ಲಯ್ಯನಿಗೆ ಶಿವನಕೊಳ್ಳದ ಬೆಟ್ಟ ಮೈಲಾರಲಿಂಗನಂತೆಯೇ ಹಿಂದೆ ಗೋಚರಿಸುತ್ತಿತ್ತು; ಈಗ ಅದು ಆಕಾರ ಕಳೆದು ಕೊಂಡಿದೆ, ಅದರ ನೆತ್ತಿಯ ಮೇಲೆ ಸ್ಫೋಟವಾಗುತ್ತಿದೆ; ಹೆಂಡತಿಯ ಸಮಾಧಿಯ ಮೇಲೆ ಗಣಿಯ ಲಾರಿ ಧೂಳೆಬ್ಬಿಸಿ ಓಡುವ ಸನ್ನಿವೇಶಗಳು ಅದಕ್ಕೆ ಉದಾಹರಣೆ. 'ವಾಹನಗಳ ರಭಸಕ್ಕೆ ಮಲ್ಲಯ್ಯನ ಹೆಜ್ಜೆಗಳು ತಪ್ಪುತ್ತಿದ್ದವು' ಎನ್ನುವ ಸಾಲೊಂದು ಕಟ್ಟಿಕೊಡುವ ಅರ್ಥವ್ಯಾಪ್ತಿ ಅನನ್ಯ. ಈಗ ಶಿವನಕೊಳ್ಳ ಮಲ್ಲಯ್ಯನ ಮನದ ಕಣ್ಣಿಗೆ ಮಾತ್ರ ಕಾಣುತ್ತದೆ ಎನ್ನುವಲ್ಲಿಗೆ ಕತೆ ಮುಗಿಯುತ್ತದೆ. ಆದರೆ, ಕೃಶ ದೇಹದ, ಹರಕು ಬನಿಯನ್ನಿನ, ಕೋಲು ಹಿಡಿದ ಮುದುಕನ ಆಕೃತಿಯೊಂದು ನಮಗೆ ಮತ್ತೆ ಮತ್ತೆ ಕಣ್ಣ ಮುಂದೆ ಬರುವುದು ಸುಳ್ಳಲ್ಲ.

"ಚುಕ್ಕಿ ಮದುವೆ ಪ್ರಸಂಗ" ಅನ್ನುವುದು ಸಂಕಲನದಲ್ಲಿಯ ಒಂದು ಕತೆಯೂ ಹೌದು. ಹೆಸರೇ ಹೇಳುವಂತೆ ಇಲ್ಲಿ ಚುಕ್ಕಿ ಎನ್ನುವ ಹುಡುಗಿಯ ಮದುವೆ ಪ್ರಹಸನವಿದೆ. ಆದರೆ ಮದುವೆ ಎನ್ನುವುದು ಇಲ್ಲಿ ಸಾಂಕೇತಿಕವಷ್ಟೆ. ಮದುವೆಯ ನೆವದಲ್ಲಿ ಹಲವು ವ್ಯಕ್ತಿತ್ವಗಳ ಅನಾವರಣವಾಗುತ್ತದೆ. ಬೇಜವಾಬ್ದಾರಿ ಮಗಳು, ಸೋಮಾರಿ ಅಳಿಯ, ಮೂರ್ಖ ಗಂಡ ಇವರುಗಳ ನಡುವೆ ಹೆಣಗುವ ನರಸವ್ವ ಈ ಕಥೆಯ ನಾಯಕಿ. ಮಠದಲ್ಲಿ ಸಾಮೂಹಿಕ ಮದುವೆಯನ್ನು ಉಚಿತವಾಗಿ ಮಾಡಲಾಗುತ್ತದೆ ಎಂದಾದಾಗ ಆ ಉಚಿತ ಕೊಡುಗೆಗೆ ಊರಿನ ಅನೇಕರೊಡನೆ ಚುಕ್ಕಿಯೂ ಭಾಜನಳಾಗಿಬಿಡುತ್ತಾಳೆ. ಮದುವೆಯಾಗುವವರ ಹೆಸರನ್ನು ಮಠದಲ್ಲಿ ಮೊದಲೇ ರಿಜಿಸ್ಟರ್ ಮಾಡಿಸಬೇಕು. ನರಸವ್ವನ ಗಂಡ ಯಾರಲ್ಲೂ ಸಮಾಲೋಚಿಸದೆ ಏಕಾಏಕಿ ಹೋಗಿ ಶಿವ್ರಾಜ-ಚುಕ್ಕಿಯ ಹೆಸರು ಬರೆಯಿಸಿ ಬಂದುಬಿಡುತ್ತಾನೆ. ಶಿವ್ರಾಜನೋ ಅಪ್ಪಾಪೋಲಿ, ಊರಲ್ಲೆಲ್ಲ ಹೆಸರು ಕೆಡಿಸಿಕೊಂಡವ. ಆತ ಚುಕ್ಕಿಗೆ ಗಂಡು ಎಂದು ತಿಳಿದದ್ದೇ ನರಸವ್ವ ಸಿಡಿದೇಳುತ್ತಾಳೆ. ಬರೆಸಿದ ಹೆಸರನ್ನು ತೆಗೆಸಿ ಬರಲು ಮಠಕ್ಕೆ ಹೋದ ನರಸವ್ವ ಮತ್ತೊಂದು ಸಮಸ್ಯೆ ಹೊತ್ತು ಹಿಂದಿರುಗುತ್ತಾಳೆ.

ಇನ್ನೂ ಶಾಲೆಗೆ ಹೋಗುತ್ತಿರುವ ಚುಕ್ಕಿಯ ಮದುವೆಯೇ ಬೇಡ ಎನ್ನುತ್ತಿದ್ದ ನರಸವ್ವನಿಗೆ ಕೂಡಾ ಪುಕ್ಕಟೆ ಮದುವೆ ಆಗುತ್ತದೆಂದಾದರೆ ಆಗಿ ಬಿಡಲಿ ಎಂದೆನಿಸುತ್ತದೆ. ಆದರೆ ಬೇರೆ ಹುಡುಗನನ್ನು ಹುಡುಕುವುದೆಂದು ನಿರ್ಧರಿಸುತ್ತಾಳೆ. ಬಡತನವೆನ್ನುವುದು ಜನರನ್ನು ಆಡಿಸುವ ರೀತಿ ಇಲ್ಲಿ ನಿಚ್ಚಳವಾಗಿದೆ. ನಂತರ, ಹೆಸರು ಬರೆಸಲು ಶಿವ್ರಾಜ ಹಾಗೂ ಭೀಮೇಶನ ನಡುವೆ ಪೈಪೋಟಿಯೇ ಬೀಳುತ್ತದೆ. ಇಲ್ಲಿ ಕುಟುಂಬ ರಾಜಕೀಯದ ಹಲವು ಪಲಕುಗಳು ತೆರೆದುಕೊಳ್ಳುತ್ತವೆ. ಹಲವರು ಜಿದ್ದಾಜಿದ್ದಿಗಿಳಿದಿದ್ದಾರೆ. ಚುಕ್ಕಿಯನ್ನು ಮದುವೆಯಾಗುವ ಗಂಡಸಿನ ಹೆಸರು ಪದೇ ಪದೇ ಬದಲಾಗುತ್ತಲೇ ಹೋಗುತ್ತದೆ. ಆದರೆ ಈ ಸಂಪೂರ್ಣ ಪ್ರಕ್ರಿಯೆಯಲ್ಲಿ ಚುಕ್ಕಿಗೂ ಅವಳ ಮನಸ್ಸಿಗೂ ಸ್ಥಾನವೇ ಇಲ್ಲ!

ಯಾವುದಾದರೂ ರಂಗಪ್ರಯೋಗಕ್ಕೆ ಸಮರ್ಥವಾಗಿ ಅಳವಡಿಸಿಕೊಂಡರೆ ಒಂದು ಒಳ್ಳೆಯ ದೃಶ್ಯಕಾವ್ಯವಾಗ ಬಹುದಾದ ಈ ಕತೆ ಮೇಲ್ನೋಟದ ತಮಾಷೆಯೊಳಗೇ ಹುದುಗಿರುವ ಗಾಢ ವಿಷಾದದಿಂದ ಮನಸೆಳೆಯುತ್ತದೆ. ಕೊನೆಯ ಭಾಗದಲ್ಲಿ ಬರುವ ಮದುವೆ ಮಂಟಪದ ಸನ್ನಿವೇಶಗಳು ತುಸು ನಾಟಕೀಯ ಅನ್ನಿಸಿದರೂ, ಲೇಖಕ ಘಟನೆಗಳ ಕಟ್ಟೋಣದಲ್ಲಿ ಸಾಧಿಸಿರುವ ಸಮತೋಲನ ಇಲ್ಲಿ ಪ್ರಸಂಶನೀಯ. ಇಡೀ ಪ್ರಹಸನ ನಮ್ಮೆದುರಿಗೇ ನಡೆದಿರಬಹುದಾದ ಸಂಗತಿಯಂತೆ ಕನ್‌ವಿನ್ಸಿಂಗ್ ಅನ್ನಿಸುವುದು ಈ ಕತೆಯ ಗೆಲುವು.

ಸ್ತ್ರೀ ಪಾತ್ರಗಳ ಸಶಕ್ತ ಗ್ರಹಿಕೆ ಅಮರೇಶರ ಕತೆಗಳ ವಿಶೇಷತೆಗಳಲ್ಲೊಂದು. "ಚುಕ್ಕಿ..." ಕತೆಯ ನರಸವ್ವ, "ಅರಿವು ಮರಳಿದ ವೇಳೆ"ಯ ದೇವಮ್ಮ, "ಒಂದು ಚಿತ್ರ"ದ ಆಕೆ, "ತುಳಸಿ"ಯಲ್ಲಿಯ ತುಳಸಿ... ಹೀಗೆ ಪ್ರತಿಯೊಬ್ಬರೂ ತಮ್ಮದೇ ವಿಭಿನ್ನ ವ್ಯಕ್ತಿತ್ವಗಳಿಂದ, ಆಯಾ ರೀತಿಯಿಂದ ಸಮಾಜವನ್ನು ಎದುರಿಸುವ ಖದರಿನಲ್ಲಿ ಇಷ್ಟವಾಗುತ್ತಾರೆ. ಈ ತುಳಸಿಯದೂ ಒಂಥರಾ ಮದುವೆ ಪ್ರಸಂಗದ ಕಥೆಯೇ. ಆದರೆ ಚುಕ್ಕಿಯಂತೆ ಆಕೆ ಚಿಕ್ಕ ಪ್ರಾಯದವಳಲ್ಲ. ಪಿಎಚ್‌ಡಿ ಪದವೀಧರೆ. ಪ್ರಬುದ್ಧೆ. ಆದರೆ ಶೋಷಣೆಯ ಮಜಲುಗಳನ್ನು ನೋಡಿ, ಅದು ಯಾರನ್ನೂ ಬಿಟ್ಟಿಲ್ಲ. ಚುಕ್ಕಿ ಹಾಗೂ ತುಳಸಿಯ ಎರಡು ವಿಭಿನ್ನ ವಿಷಯಗಳನ್ನು ಅಮರೇಶರು ನಿರ್ವಹಿಸಿದ ರೀತಿಯನ್ನು ನಾವು ಗಮನಿಸಬೇಕು. ಹಳ್ಳಿಯ ಗಲ್ಲಿಯ ಸ್ತ್ರೀ ಶೋಷಣೆ ಹಾಗೂ ಯುನಿವರ್ಸಿಟಿ ಕ್ಯಾಂಪಸ್ಸಿನಲ್ಲಿಯ ಶೋಷಣೆಗೂ ಬಳಸಲ್ಪಡುತ್ತಿರುವ ಸಾಧನ ಬೇರೆ ಇರಬಹುದು: ಅಲ್ಲಿಯ ಹಿನ್ನೆಲೆ, ವೇಷ, ವ್ಯಕ್ತಿಗಳು ಬೇರೆ ಇರಬಹುದು. ಆದರೆ ಅವುಗಳ ಉದ್ದೇಶ ಹಾಗೂ ಪರಿಣಾಮದಲ್ಲಿ ಯಾವುದೇ ಬದಲಾವಣೆಯಿಲ್ಲ. ಬಾಹ್ಯ ಬದಲಾವಣೆಯಿಂದ ಕಲುಷಿತ ಅಂತರಂಗ ತಿಳಿಯಾಗುವುದಿಲ್ಲ ಎನ್ನುವುದನ್ನು ನುಗಡೋಣಿ ಅಷ್ಟೇ ಸೂಕ್ಷ್ಮವಾಗಿ ತೋರಿಸಿ ಕೊಡುತ್ತಾರೆ. 'ಲೈಂಗಿಕತೆಯನ್ನು ಪ್ರತಿಬಿಂಬಿಸುವ ಶಿಲ್ಪಕಲೆಯನ್ನು ಗಂಡಸರು ಮಾತ್ರ ಯಾಕೆ ರಚಿಸುತ್ತಾರೆ?' ಅನ್ನುವ ತುಳಸಿಯ ಪ್ರಶ್ನೆ ಹಲವು ಉತ್ತರಗಳನ್ನು ಹುಟ್ಟುಹಾಕಬಲ್ಲದು. ಅಂತಹುದೇ ಶಿಲ್ಪವೊಂದು ತಮ್ಮ ಹಿಂದಿದೆ ಎಂದು ಗಮನಿಸದೇ ನಿಂತಿರುವ ಹೆಂಗಳೆಯರನ್ನು 'ಒಳ್ಳೆ ಶಿಲ್ಪವನ್ನೇ ಆರಿಸಿ ಎದುರು ನಿಂತಿದ್ದೀರಿ' ಎಂದು ಹೇಳುವ ಪ್ರೊಫೆಸರ್, ಶಿಕ್ಷಣ ಅನ್ನುವುದು ಮನಸಿನ ಖಾಯಿಲೆ ಗುಣಪಡಿಸುವುದಿಲ್ಲ ಎಂಬುದಕ್ಕೆ ನಿದರ್ಶನ. ಈ ಸಣ್ಣ ಸಂಗತಿಯ ಹಿಂದೆ ಅಡಗಿರುವ 'ಲೈಂಗಿಕ ಕಿರುಕುಳ'ದ ಬಗೆಯನ್ನೇ ನೋಡಿ. ಇಂತಹ ಬದುಕಿನ ಅಸ್ಫುಟ ವಿವರಗಳಿಗೆ ಭೂತಕನ್ನಡಿ ಹಿಡಿದು ತೋರಿಸುವ ಕಥಾಕುಸುರಿಯನ್ನು ನುಗಡೋಣಿಯವರ ಹಲವು ಕತೆಗಳಲ್ಲಿ ಕಾಣಬಹುದು.

ಸಂಘರ್ಷ, ಶೋಷಣೆ ಇತ್ಯಾದಿ ತಿರುಳುಳ್ಳ ಹಲವು ಕತೆಗಳು ಕನ್ನಡದಲ್ಲಿ ಬಂದಿವೆ. ಇವೆಲ್ಲ ಕೇವಲ ಇಬ್ಬರು ವ್ಯಕ್ತಿಗಳಿಗೆ, ಊರು-ಕೇರಿ, ಕೋಮು-ಜಾತಿಗಳಿಗಷ್ಟೇ ಸೀಮಿತವಾಗಿರಬೇಕಿಲ್ಲ. ಒಂದು ಸಂಪೂರ್ಣ ದೃಷ್ಟಿಕೋನ ಯಾ ಪರಿಸರವೇ ಈ ತಾರತಮ್ಯವನ್ನೂ, ದಬ್ಬಾಳಿಕೆಯನ್ನೂ ಒಳಗೊಂಡಿರ ಬಹುದಾದ ಸಾಧ್ಯತೆಯನ್ನು ಅಮರೇಶರ ಕತೆಗಳು ತೋರಿಸಿಕೊಡುತ್ತವೆ. ಇದನ್ನು ಹೇಳಲು ಅವರು "ತುಳಸಿ" ಕತೆಯನ್ನು ಬಳಸಿಕೊಂಡಿರುವ ರೀತಿಯನ್ನೇ ಗಮನಿಸಬಹುದು. ಈ ಕತೆ ಎರಡು ಫೋಲ್ಡ್‌ಗಳಲ್ಲಿ ತೆರೆದುಕೊಳ್ಳುತ್ತದೆ. ಮೊದಲನೆಯದು ಆಕೆಯ



ನಮ್ಮ ಮನಸ್ಸೊಂದು ಮಾತಾಡುವ ಗಿಳಿ.
ಶುಭ ಎನ್ನಿ ಅದು ಶುಭ ಎನ್ನುತ್ತದೆ.
ಜಯ ಎನ್ನಿ ಅದು ಜಯ ಎನ್ನುತ್ತದೆ.
ಅಶುಭ, ಅಪಜಯ ಎನ್ನಿ ಅದೂ ಹಾಗೇ ಹೇಳುತ್ತದೆ!
ಮನಸ್ಸಿನಂತೆ ಮಹಾದೇವ!
ಯೋಚಿಸಿದಂತೆ ನಾವಾಗುತ್ತೇವೆ!

ಡಾ॥ ಸಿ. ಆರ್. ಚಂದ್ರಶೇಖರ್
ಬೆಂಗಳೂರು

ಹಿನ್ನೆಲೆ. ಗ್ರಾಮೀಣ ಪ್ರದೇಶದ ಎಲ್ಲಾ ಬವಣೆಗಳನ್ನೂ ಒಳಗೊಂಡೇ ಬೆಳೆದು ಬಂದವಳು ತುಳಸಿ. 'ಗೌಡನ ಸೂಳೆಯ ಮಗಳು' ಎಂದೇ ಪ್ರಖ್ಯಾತಳು. ಇಂಥವಳ ಬದುಕಿನ ಎರಡನೇ ಪದರ ಹೇಗಿದೆ? ಉನ್ನತ ಶಿಕ್ಷಣ ಈಗಷ್ಟೇ ಪೂರೈಸಿರುವ ಆಕೆಯ ಮುಖಾಮುಖಿ, 'ಸಫೊಸ್ಟಿಕೇಟೆಡ್' ಎಂದು ಕರೆಯಲ್ಪಡುವ ಸಮಾಜದೊಡನೆ ಹೇಗಾಗುತ್ತದೆ? ಈ ಎರಡರಲ್ಲಿನ ವ್ಯತ್ಯಾಸ ಹಾಗೂ ಸಾಮ್ಯತೆಗಳೇನು ಎಂಬುದನ್ನು ಅಮರೇಶರು ತಮ್ಮ ಸಂಯಮದ ಶೈಲಿಯಲ್ಲಿ ಅರುಹುತ್ತಾರೆ. ಅತ್ಯಂತ ಸಜ್ಜನ ಅನ್ನಿಸಿಕೊಂಡ ಪಿಎಚ್‌ಡಿ ಗೈಡು, ತನ್ನ ಅಂಗವಿಕಲ ಮಗನನ್ನು ಮದುವೆಯಾಗು ಎಂದು ತುಳಸಿಯಲ್ಲಿ ಕೋರುವಲ್ಲಿ ನಾಗರಿಕ ಸಂಸ್ಕೃತಿಯ ತಣ್ಣನೆಯ ಕ್ರೌರ್ಯದ ಮುಖವಾಡ ಕಳಚುತ್ತಾರೆ. 'ಗೌಡ ಅಪ್ಪನನ್ನು ಬಳಸಿಕೊಂಡರೆ ಅದು ತಪ್ಪಲ್ಲ, ಅಮ್ಮನನ್ನು ಬಳಸಿಕೊಂಡರೆ ಮಾತ್ರ ತಪ್ಪೇ?' – ಎನ್ನುವುದು ಈ ಕತೆಯಲ್ಲಿ ಕಾಡುವ ಬಹುಮುಖ್ಯ ಪ್ರಶ್ನೆ. ಮನುಷ್ಯನ ಭಾವನೆಯಲ್ಲೇ ಹುದುಗಿರುವ ಅಸಮಾನತೆಯ ಬೀಜವನ್ನು ಕಾಣಗೊಡಿಸುವುದು ಕತೆಯ ಉದ್ದೇಶವೂ ಕೂಡ.

ಭಾರತದಲ್ಲಿ ಅಲ್ಪಸಂಖ್ಯಾತ ಸಮುದಾಯದ ಬದುಕು ಬವಣೆಗಳನ್ನು ತಮ್ಮ ಕತೆಗಳಲ್ಲಿ ಅಮರೇಶರು ಕಾಣಿಸುತ್ತಲೇ ಬಂದಿದ್ದಾರೆ. ಇಲ್ಲಿ ಅವರ ಇತ್ತೀಚಿನ "ಜೂಜು" ನೆನಪಾಗುತ್ತದೆ. (ಈ ಕತೆ ಈ ಸಂಕಲನದಲ್ಲಿ ಇಲ್ಲ) ನೌಕರಿ, ಹೆಂಡತಿ, ಸಂಸಾರ ಹೀಗೆ ಎಲ್ಲ ಕಡೆಯೂ ಎರಡೆರಡರ ನಡುವೆ ಸಿಕ್ಕಿಹಾಕಿಕೊಂಡಿರುವ ನಿಜಾಮ್ ಸಾಬಿ ಎಲ್ಲೂ ಸಲ್ಲದವನಾಗುವ ದುರಂತ ಕತೆ ಅದು. ಆತನ ಜೀವನವೇ ಒಂದು ಜೂಜಾಗಿದೆ ಅಲ್ಲಿ. ಯಾರದೋ ದುರಾಸೆಗೆ ಮತ್ಯಾರದೋ ಪ್ರತಿಷ್ಠೆಗೆ ಮುಗ್ಧನೊಬ್ಬ ಬಲಿಯಾಗುವ ಚಿತ್ರಣವಿದೆ ಅಲ್ಲಿ. ಹಾಗೇ, ಇಲ್ಲಿಯ "ಒಂದು ಚಿತ್ರ" ಅನ್ನುವ ಕತೆಯ ಹಂದರವೂ ಅಂಥದ್ದೇ. ಸಮಾಜದಲ್ಲಿ ಅಸ್ತಿತ್ವದಲ್ಲಿರುವ ಧಾರ್ಮಿಕ ಅಸಹಿಷ್ಣುತೆಯ ವಿವಿಧ ಆಯಾಮಗಳಿಗೆ ಕನ್ನಡಿ ಹಿಡಿಯುವ ಪ್ರಯತ್ನ ಇಲ್ಲಿದೆ. ಈ ಕಥಾ ನಾಯಕಿಗೆ ಹೆಸರಿನ ಹಂಗಿಲ್ಲ. ಆಕೆ ನಮ್ಮದೇ ಅಕ್ಕ, ಗೆಳೆಯನ ತಂಗಿ, ಪಕ್ಕದ ಮನೆ ಪುಟ್ಟಿ ಯಾರೇ ಆಗಿರಬಹುದು. ಈ ಪಾತ್ರಕ್ಕೊಂದು ಹೆಸರು ಕೊಡದೆ, ಕತೆಗೆ 'ಒಂದು ಚಿತ್ರ' ಎನ್ನುವ ಹೆಸರಿಟ್ಟು ಲೇಖಕರು ಆ ಪಾತ್ರದ ವ್ಯಾಪ್ತಿ ಹಾಗೂ ಸಾಧ್ಯತೆಗಳನ್ನು ಅಗಣಿತವಾಗಿ ಹೆಚ್ಚಿಸಿದ್ದಾರೆ.

ಈ ಕಥೆಯಲ್ಲಿ ಸೌಹಾರ್ದದ ಬೀಡೊಂದರಲ್ಲಿ 'ಮುಸ್ತಫಾ' 'ಮುತ್ತಪ್ಪ'ನ್ಯಾಕೆ ಆಗಬಾರದು ಎಂಬ ಪ್ರಶ್ನೆಯನ್ನು ಮುಖಕ್ಕೆ ರಾಚುವಂತೆ ಕೇಳಲಾಗಿದೆ ಇಲ್ಲಿ. ಅಂತೆಯೇ ಆ ಸಾಧ್ಯಾಸಾಧ್ಯತೆಗಳ ಇರುವಿಗೂ ಇಂಬು ನೀಡಲಾಗಿದೆ. ಸರಕಾರೀ ದಾಖಲಾತಿಯಲ್ಲಿ, ಶಾಲಾ ಪ್ರಮಾಣಪತ್ರದಲ್ಲಿ ಆಗಲಾರದ್ದನ್ನು ಶಕ್ಯಗೊಳಿಸುವುದು ನಿಜವಾದ ಪ್ರೀತಿ ಮಾತ್ರ ಎಂಬ ಉತ್ತರವನ್ನು ಕೂಡಾ ಕತೆ ಮಾರ್ಮಿಕವಾಗಿ ನೀಡುತ್ತದೆ. ತಾಯಿ ಹೃದಯವೊಂದು ಮುಸ್ತಫಾ ಹಾಗೂ ಮುತ್ತಪ್ಪನಲ್ಲಿ ಯಾವುದೇ ವ್ಯತ್ಯಾಸ ಕಾಣದಿದ್ದರೆ, ಪ್ರೇಮಿಯ ಹೃದಯವೊಂದು ಇನ್ನೂ ಒಂದು ಹೆಜ್ಜೆ ಮುಂದೆ ಹೋಗಿ ಮುಸ್ತಫನನ್ನು ಮುಸ್ತಫನಾಗೇ ಇರುವಂತೆ ಹೇಳುತ್ತದೆ. ಎರಡನ್ನೂ ಒಂದರಲ್ಲೇ ಲೀನವಾಗಿಸುವ ಸಮಾನತೆಗೂ ಮಿಗಿಲಾದ ಪ್ರಕ್ರಿಯೆಯಿದು. ಸ್ಕೂಟರಿನ ಹಳೆ ಪಾರ್ಟುಗಳನ್ನೆಲ್ಲಾ ಬದಲಾಯಿಸಿ ಹೊಸ ಪಾರ್ಟುಗಳನ್ನು ಹಾಕುವ ಮುಸ್ತಫಾ, ಇನ್ನೊಂದೆಡೆ ಆಕೆಯ ಹೃದಯ ಕವಾಟದ ನಾಳಗಳನ್ನೆಲ್ಲಾ ಅವಳಿಗೇ ಅರಿವಿಲ್ಲದಂತೆ ಬದಲಾಯಿಸಿ ಹೊಸತಾಗಿಸಿದ್ದಾನೆ. ಇನ್ನು ಸ್ಕೂಟರಿಗೂ ರಿಪೇರಿಯ ಅಗತ್ಯವಿಲ್ಲ, ಮನಸ್ಸುಗಳಿಗೂ ಇಲ್ಲ. ಈ ರಿಪೇರಿ ಸಕಲ ಮನುಕುಲಕ್ಕೂ ಆದಾಗ ಎಲ್ಲರೂ 'ಆಕೆ'ಯಾಗಬಹುದು. ಆಗ ಸೌಹಾರ್ದವೆನ್ನುವುದು ಪ್ರಬಂಧದಲ್ಲಿ ಮಾತ್ರ ಉಳಿಯಬೇಕಾಗಿಲ್ಲ ಎಂಬ ಆಶಯ ಸಾರುವ ಕತೆ, ಇಂದಿನ ಸಮಯಕ್ಕೆ ಅತಿ ಸಂಗತ.

ಸಂಕಲನದಲ್ಲಿ "ಶಾಂತಿ ಕುಟೀರ" ವಿಭಿನ್ನವಾಗಿ ಎದ್ದು ನಿಲ್ಲುವ ಕತೆ. ಅದು ನುಗಡೋಣಿಯವರ ಕಥಾವಸ್ತು ಹಾಗೂ ಶೈಲಿಗೂ ಅನ್ವಯ. ಶಾಂತಿ ಕುಟೀರ ಎನ್ನುವ ಹೆಸರುಳ್ಳ ಈ ದೊಡ್ಡ ಮನೆಗೆ ಪಟ್ಟಣದ ವಠಾರಗಳ ಹೋಲಿಕೆಯಿದೆ. ಹಲವು ಬಗೆಯ ಜನರೂ, ಹಲವು ಮನಸ್ಸುಗಳೂ ಅಲ್ಲಿ ವಾಸವಿದ್ದಾವೆ. ಮೊದಲು ಹೊರಗಿದ್ದು, ಊರು ಬೆಳೆದಂತೆ ಊರ ಒಡಲೊಳಗೇ ಸೇರಿಕೊಂಡಿದ್ದರೂ ಈ ಕುಟೀರ ಎಲ್ಲರಿಗೂ ಒಂದು ನಿಗೂಢ ವಿಶ್ವದಂತಿದೆ. ದೇವಮ್ಮನೆಂಬ ಮನೆಗೆಲಸದ ಮಹಿಳೆಯನ್ನು ಕೇಂದ್ರವಾಗಿಸಿಕೊಂಡು ಕುಟುಂಬದ ಎಲ್ಲ ಕುಟುಂಬಗಳನ್ನೂ ಹೆಣೆಯುತ್ತಾ ಹೋಗುವ ಕಥೆಗಾರ ದೇವಮ್ಮನನ್ನು ಎಲ್ಲೂ ರಂಗಸ್ಥಳಕ್ಕೆ ತರುವುದೇ ಇಲ್ಲ. ಆಕೆ ಬರುವುದು ಹೆಣವಾಗಿಯೇ. ಇದು ಕಥನ ತಂತ್ರದ ಒಂದು ಭಾಗ ಎಂದು ಆರಂಭದಲ್ಲಿ ಅನ್ನಿಸಿದರೂ, ಇದಕ್ಕೆ ತಂತ್ರದ ಹೊರತಾಗಿಯೂ ಬೇರೆಯ ಆಯಾಮಗಳಿವೆ ಎಂಬುದು ತಿಳಿಯುತ್ತಾ ಹೋಗುತ್ತದೆ. ದೇವಮ್ಮ ಕ್ರಮೇಣ ಎಲ್ಲರಿಗೂ ಬೇಕಾಗಿದ್ದವಳು. ಆಕೆಯ ಸಾವಿಗೆ ಇಡೀ ಕುಟೀರವೇ ಮರುಗುತ್ತದೆ. ಆದರೆ ಆ ನೋವು ಕ್ಷಣ ಮಾತ್ರದಲ್ಲಿ ಕರಗುತ್ತಾ; ಈ ಈಕೆ ಸತ್ತಿದ್ದೇ ನಮಗೆ ಮುಳುವಾಯಿತು, ಇವತ್ತೇ ಸಾಯಬೇಕಿತ್ತೇ ಎನ್ನುವ ಅಸಹನೆಯಾಗಿ ಪರಿವರ್ತನೆಯಾಗುತ್ತಾ, ಕೊನೆಗೆ ಆಕೆಯ ಹೆಣವನ್ನು ಸಾಗಹಾಕುವ ದುಡ್ಡಿಗಾಗಿ ಚೌಕಾಸಿ ಮಾಡುವ ಹಂತಕ್ಕೆ ಬಂದು ನಿಲ್ಲುತ್ತದೆ. ಹೆಣವಾಗಿ ಯಾರಿಗೂ ಬೇಡವಾದ ದೇವಮ್ಮ, ಪ್ರತಿ ಮನುಷ್ಯನ ಜೀವನದ ಅಂತಿಮ ಸಾರ್ಥಕತೆಯ ಪ್ರತಿಫಲನದಂತೆ ಖಾಯಂ ಆಗಿ ಉಳಿದುಬಿಡುತ್ತಾಳೆ.

ಸಾಮಾಜಿಕ ಕಳಕಳಿಯ, ದಟ್ಟ ಸಮಾಜವಾದೀ ಪ್ರಜ್ಞೆಯ ಅಮರೇಶರು, ನಾನಾ ಸ್ತರಗಳಲ್ಲಿ ಬದುಕುತ್ತಿರುವ ಜನಸಾಮಾನ್ಯರ ದೈನಂದಿನ ಬವಣೆ, ಹೋರಾಟ, ತವಕ ತಲ್ಲಣಗಳನ್ನೆಲ್ಲಾ ಅತಿ ಸೂಕ್ಷ್ಮವಾಗಿ ಗಮನಿಸುತ್ತಾ, ಅವುಗಳನ್ನು ತಮ್ಮ ಅನುಭವದ ಭಾಗವಾಗಿಸಿಕೊಳ್ಳುತ್ತಾ ರಚಿಸಿರುವ ಇಲ್ಲಿಯ ಕತೆಗಳು, ಆ ಅನುಭವವನ್ನು ಓದುಗನಿಗೂ ದಾಟಿಸುವಲ್ಲಿ ಸಫಲವಾಗಿವೆ. ಈ ಕತೆಗಳ ಓದು ನಮ್ಮನ್ನು ಅಲ್ಲಲ್ಲಿ ಆರ್ದ್ರಗೊಳಿಸುತ್ತಾ, ಹಲವು ಪ್ರಶ್ನೆಗಳನ್ನು ಹುಟ್ಟುಹಾಕುತ್ತಾ, ನಮ್ಮದೇ ಒಳನೋಟಗಳನ್ನು ವಿಸ್ತರಿಸಿಕೊಳ್ಳುವಲ್ಲಿ ಸಹಾಯಕಾರಿಯಾಗಿವೆ.

**ಕರ್ಕಿ ಕೃಷ್ಣಮೂರ್ತಿ**
ನಂ. ೧೭, 'ಉನ್ಮಿಲ', ಆನೇ ಅಡ್ಡ ರಸ್ತೆ, ಸಿದ್ದಿವಿನಾಯಕ ಬಡಾವಣೆ, ವಿರುಪಾಕ್ಷಪುರ, ಬೆಂಗಳೂರು – ೫೬೦ ೦೯೭



# ನನ್ನೊಳಗಿನ ಹೆಣ

ನನ್ನೊಳಗಿನ ಹೆಣ
ನಿಮ್ಮೊಂದಿಗೆ ಮಾತಾಡಬೇಕಂತೆ...
ಫ್ರೀ ಇದ್ದೀರಾ?

ಜೀವ
ನನಗೀಗ ಬೇಡವಾಗಿದೆ...
ಕೊಳ್ಳುವಿರಾ?

ಜಾತಿ, ಕೌಟುಂಬಿಕ ಹಿನ್ನೆಲೆ,
ವಿದ್ಯಾರ್ಹತೆ, ಸಂಪಾದಿಸಿದ ಆಸ್ತಿ – ಪಾಸ್ತಿ...
ಎಲ್ಲವನ್ನೂ ನೋಡಿ, ಪರವಾಗಿಲ್ಲ.

ನೋಡಬೇಡಿರೆಂದು
ಫರ್ಮಾನು ಹೊರಡಿಸಿದರೂ
ಕೇಳುವಿರಾ?

ಆದರೆ, ನೋಡಲು ಮರೆಯದಿರಿ...
ಒಡಲ ಮೇಲೆ ಹಾಗೆ ಉಳಿದ
ಗಾಯಗಳನ್ನು,
ಹೆಗಲ ಮೇಲೆ ಹಾಗೆ ಉಳಿದ
ಗೋಡೆ ಉರುಳಿಸಿದ ಗುದ್ದಲಿಯನ್ನು!

ನನ್ನೊರಗಿನ ಜೀವ
ನಿಮ್ಮ ಬಳಿಯೇ ಇರಲಿ.
ನನ್ನೊಳಗಿನ ಹೆಣ ಮಾತ್ರ
ನನ್ನದಾಗಿರಲಿ.

**ಎಚ್. ಕೆ. ಶರತ್**
ಇ/ಮ ಜೆ.ಆರ್. ಕೆಂಚೇಗೌಡ, ನಂ.೩೨
ಡೆಂಟಲ್ ಕಾಲೇಜು ಹಿಂಭಾಗ, ವಿವೇಕಾನಂದ ರಸ್ತೆ
ವಿದ್ಯಾನಗರ, ಹಾಸನ – ೫೭೩೨೦೧

ನಾವು ಹಿಂದಿ ಭಾಷೆಗಿಂತಲೂ ಪ್ರಾಂತೀಯ ಭಾಷೆಗಳು ಮತ್ತು ಸಣ್ಣ, ಸಣ್ಣ ಜನಾಂಗೀಯ ಸಮುದಾಯಗಳ ಉಪಭಾಷೆಗಳನ್ನು ಮನಃಪೂರ್ವಕವಾಗಿ ಬಳಸಬೇಕು. ನಮ್ಮದು ಬಹುಭಾಷೆಗಳ ದೇಶ. ಆದುದರಿಂದ ಸಂವಹನಕ್ಕೆ ಒಂದು ಸಮಾನ ಭಾಷೆ ಅವಶ್ಯ. ಒಳಿತೋ ಅಥವಾ ಕೆಡುಕೋ, ನಮ್ಮಲ್ಲಿ ಆಂಗ್ಲ ಭಾಷೆ ಒಂದು ಸಂಪರ್ಕ ಭಾಷೆಯಾಗಿ ಮುಂದುವರೆದಿದೆ. ಇದು ಅನ್ಯದೇಶದ ಭಾಷೆಯಾದರೂ, ಈಗಲೂ ಭಾರತದ ಎಲ್ಲ ಸಮುದಾಯಗಳ ಭಾಷಿಕರನ್ನು ಬೆಸೆಯುವ ಕೊಂಡಿಯಾಗಿದೆ. ಆದರೆ ಈ ಭಾಷೆಯ ಜ್ಞಾನವಿಲ್ಲದವರು ಪರಾಧೀನರಾಗುತ್ತಿರುವುದು ಕೂಡ ಸತ್ಯ. ಒಬ್ಬ ವ್ಯಕ್ತಿ ಆಂಗ್ಲ ಭಾಷೆಯಲ್ಲಿ ಪರಿಣತನಾಗಿದ್ದರೆ, ಆತನ ಅಭಿವ್ಯಕ್ತಿ ಜನರನ್ನು ತಲುಪದಿದ್ದರೂ ಗೌರವಕ್ಕೆ ಒಳಗಾಗುವ ಸಂದರ್ಭಗಳೇ ಹೆಚ್ಚು.

# ವಿಚಾರವಾದಿಗಳ ಮುಂದಿರುವ ಕರ್ತವ್ಯಗಳು

**ನ**ಮ್ಮ ತತ್ವಶಾಸ್ತ್ರದ ಆಳ, ವಿಸ್ತಾರಗಳದ್ದು ವಿಸ್ಮಯಕರ ಲೋಕ. ಅದರ ಪರಂಪರೆ ವಿಶಿಷ್ಟವಾದದ್ದು. ದೇವರು, ಸ್ವರ್ಗ, ನರಕ, ಮೋಕ್ಷ ಇತ್ಯಾದಿ ಭಾವನಾವಾದಿ ತತ್ವಶಾಸ್ತ್ರದ ಪರಿಕಲ್ಪನೆಗಳ ಜೊತೆಜೊತೆಗೆ ಭೌತವಾದಿ ತತ್ವಶಾಸ್ತ್ರ (ಇದನ್ನು ಪುರಾತನ ತಮಿಳು ಗ್ರಂಥಗಳಲ್ಲಿ ಪ್ರಕೃತಿವಾದ – ಎಲಿಮೆಂಟಲಿಸಂ – ಎಂದು ಗುರುತಿಸಲಾಗಿದೆ) ಕೂಡ ಅಸ್ತಿತ್ವದಲ್ಲಿದೆ. ಗೌತಮ ಬುದ್ಧನ ಕಾಲ ಅಂದರೆ ಕ್ರಿ. ಪೂ. ೫ನೇ ಶತಮಾನಕ್ಕಿಂತಲೂ ಹಿಂದಿನ ಕಾಲದಲ್ಲಿ ಚಿಗುರೊಡೆದ ಚಾರ್ವಾಕ/ಲೋಕಾಯತ ಹಂತ ಹಂತವಾಗಿ ಕ್ರಿ. ಶ. ೧೨ನೇ ಶತಮಾನದವರೆಗೆ ಬೆಳೆದು ಪೂರ್ಣ ಪ್ರಮಾಣದ ದರ್ಶನವಾಗಿ ರೂಪುಗೊಂಡು ಜನಸಾಮಾನ್ಯರ ಮನ್ನಣೆಯನ್ನು ಗಳಿಸಿತ್ತು. ತದನಂತರ ಅವುಗಳ ಮೂಲಗ್ರಂಥಗಳು ಅಂದರೆ ಸೂತ್ರ ಗ್ರಂಥಗಳು, ವ್ಯಾಖ್ಯಾನಗಳು ನಾಮಾವಶೇಷಗೊಂಡವು. ನಾವು ಪಾಶ್ಚಿಮಾತ್ಯ ತತ್ವಶಾಸ್ತ್ರದ ಸಂಪರ್ಕಕ್ಕೆ ಬರುವ ಹಲವು ಶತಮಾನಗಳ ಮುನ್ನವೇ ನಮ್ಮ ಪೂರ್ವಿಕರು ಕರ್ಮಫಲ, ಪುನರ್ಜನ್ಮ, ವೇದಪ್ರಾಮಾಣ್ಯಕ್ಕೆ ಬದ್ಧತೆ ಮುಂತಾದುವುಗಳನ್ನು ಧಿಕ್ಕರಿಸಿ ಭೌತವಾದಿ ತತ್ವಶಾಸ್ತ್ರದ ಪರಿಕಲ್ಪನೆಗಳನ್ನು ಹರಿಬಿಟ್ಟಿದ್ದರು. ಅವರು ಆಸ್ತಿಕವಾದದ ಪೊಳ್ಳು ಹಿರಿಮೆಯನ್ನು, ಪುರೋಹಿತಶಾಹಿಯ ಪಾರಮ್ಯವನ್ನು, ಯಾಗ, ಪೂಜೆಗಳು ಮುಂತಾದ ಮತಧಾರ್ಮಿಕ ಆಚರಣೆಗಳನ್ನು ದಿಟ್ಟತನದಿಂದ ವಿರೋಧಿಸಿದ್ದರು.

ಆದರೆ ಭೌತವಾದಿ ತತ್ವಶಾಸ್ತ್ರದ ವಿರೋಧಿಗಳು ಇದರ ವಿರುದ್ಧ ಇಲ್ಲಸಲ್ಲದ ದೂಷಣೆಗಳನ್ನು ಮಾಡುತ್ತ ಬಂದಿದ್ದಾರೆ. ಅವರು ಅಪ್ಪಟ ಭೌತವಾದಿ ಮತ್ತು ನಾಸ್ತಿಕವಾದಿ ದರ್ಶನವಾದ ಚಾರ್ವಾಕ/ಲೋಕಾಯತವನ್ನು ಭೋಗೈಕವಾದದೊಡನೆ ಸಮೀಕರಿಸುತ್ತ ಬಂದಿದ್ದಾರೆ. 'ಋಣಂ ಕೃತ್ವಾ ಘೃತಂ ಪಿಬೇತ್' (ಸಾಲಮಾಡಿಯಾದರೂ ತುಪ್ಪ ಕುಡಿ) ಎಂಬ ಚಾರ್ವಾಕ/ಲೋಕಾಯತರ ಅರ್ಧ ವಾಕ್ಯವನ್ನು ವಿಕೃತಗೊಳಿಸಿದ್ದಾರೆ. 'ನಾಸ್ತಿ ಮೃತ್ಯೋರ್ ಅಗೋಚರಃ' (ಸಾವಿನ ನಂತರ ಏನೂ ಗೋಚರಿಸುವುದಿಲ್ಲ) ಎಂಬ ಅದರ ಮೂಲ ಅರ್ಧವಾಕ್ಯವನ್ನು ಬೇರ್ಪಡಿಸಿ, ತಿರುಚಿದ್ದಾರೆ. ಇದನ್ನು ಹೇಗೆ ಸಾಧಿಸಲಾಗಿದೆ ಎಂಬುದನ್ನು ರಾಮಕೃಷ್ಣ ಭಟ್ಟಾಚಾರ್ಯರ 'ಚಾರ್ವಾಕ/ಲೋಕಾಯತ ಅಧ್ಯಯನ' ಎಂಬ ಗ್ರಂಥದ ಅಧ್ಯಾಯ ೧೯ರ ಪುಟ ೨೦೧–೨೦೬ರಲ್ಲಿ ವಿವರಿಸಲಾಗಿದೆ. ಪ್ರಸ್ತುತ ನಾವು ಕಾಣುತ್ತಿರುವ ಉಪಭೋಗವಾದದ ಹಿಂದಿನ ಅವತರಣಿಕೆಯಾಗಿ ಚಾರ್ವಾಕ/ಲೋಕಾಯತ ದರ್ಶನ ರೂಪುಗೊಂಡಿರಲಿಲ್ಲ ಎಂಬುದನ್ನು ಮನಗಾಣಬೇಕು. ಗ್ರೀಕ್ ತತ್ವಶಾಸ್ತ್ರಜ್ಞ ಎಪಿಕ್ಯೂರಸ್ ಅನುಭವಿಸಿದಂತೆ, ಚಾರ್ವಾಕ/ಲೋಕಾಯತ ದರ್ಶನ ಬೌದ್ಧಿಕ ನಲಿವನ್ನು ಸಾರಿತ್ತು; ಇಂದ್ರಿಯಸುಖವನ್ನಲ್ಲ. ಹಾಗೆಯೇ ಅದು ಎಲ್ಲ ಆಹಾರ, ಪಾನೀಯಗಳನ್ನು ವರ್ಜಿಸಿ, ಉಪವಾಸವನ್ನು ಮಾಡುತ್ತ ದೇಹವನ್ನು ದಂಡಿಸುವ ಸನ್ಯಾಸತ್ವವನ್ನು ಎತ್ತಿಹಿಡಿಯಲಿಲ್ಲ. ಆದರೆ ಈ ದರ್ಶನ ಪ್ರಸ್ತುತಪಡಿಸಿದ ಜೀವನದ ದರ್ಶನವನ್ನು ವಿರೂಪಗೊಳಿಸಲಾಯಿತು. ಅಂದರೆ ದೈವತಾಕಾರ್ಯಗಳು, ತಪಸ್ಸು, ಉಪವಾಸ ಮುಂತಾದುವುಗಳಿಂದ ವಿಮುಖಗೊಂಡಿದ್ದಕ್ಕೆ ಸೀಮಾತೀತ ಉಪಭೋಗವಾದದ ಜೊತೆ ತಳಕು ಹಾಕಲಾಯಿತು. ಇಂತಹ ವಿರೂಪಗೊಳಿಸುವಿಕೆಯ ಹಿಂದಿರುವ ಷಡ್ಯಂತ್ರಗಳನ್ನು ಖಂಡಿಸಬೇಕು; ಬಟಾಬಯಲುಗೊಳಿಸಬೇಕು.

ಚಾರ್ವಾಕ/ಲೋಕಾಯತರ ವಿರುದ್ಧ ಮಾಡಿರುವ ಇತರ ಕೆಲವು ಆರೋಪಗಳತ್ತ ಗಮನವನ್ನು ಹರಿಸೋಣ. ಅವರು ಇಂದ್ರಿಯಗ್ರಾಹ್ಯವಾದ ಸಂಗತಿಗಳನ್ನು ಮಾತ್ರ ನಂಬುತ್ತಾರೆ. ಆದುದರಿಂದ ವಿಶ್ವದ ಎಲ್ಲ ಸಂಗತಿಗಳನ್ನು ಅವರು ಅರಿಯಲು ಸಾಧ್ಯವಾಗುವುದಿಲ್ಲ. ಇದು ಒಂದು ತತ್ವಶಾಸ್ತ್ರೀಯ ಸಮಸ್ಯೆಯೇ ಸರಿ... ಇತ್ಯಾದಿ... ಆದರೆ ಈ ಆರೋಪಗಳು ಕೂಡ ವಾಸ್ತವತೆಗೆ ಮುಸುಕುಹಾಕುವ ಕ್ರಿಯೆಯೇ ಆಗಿದೆ. ಭಾರತದ ಪ್ರಾಚೀನ ಭೌತವಾದಿಗಳಿಗೆ ಜ್ಞಾನಸಾಧನ ಅಥವಾ ಪ್ರಮಾಣಗಳ ವಿಷಯದಲ್ಲಿ ಪ್ರತ್ಯಕ್ಷವೇ ಪ್ರಧಾನ. ಇಂದ್ರಿಯಗಳ ಅನುಭವಕ್ಕೆ ನಿಲುಕುವ ಸಂಗತಿಗಳಷ್ಟೇ ಸತ್ಯ. ಆದರೆ ನಂತರದ ಕಾಲಾವಧಿಯಲ್ಲಿ ಅರಿವಿಗೆ ತರ್ಕದ ಮೂಲಕ ಸರಿಯೆನಿಸುವ ತೀರ್ಮಾನಗಳು, ಅವು ಮತಧಾರ್ಮಿಕ ಅಥವಾ ದೃಢೀಕರಿಸಲಾಗದ ಮೂಲಗಳನ್ನು ಹೊಂದಿರದಿದ್ದರೆ, ಸ್ವೀಕಾರಾರ್ಹವೆಂದು ಸುಮಾರು ಕ್ರಿ. ಶ. ೮ನೇ ಶತಮಾನದ ಆಸುಪಾಸಿನಲ್ಲಿದ್ದ ಚಾರ್ವಾಕ/ಲೋಕಾಯತ ದರ್ಶನದ ಪ್ರತಿಪಾದಕರ ನಿಲುವಾಗಿತ್ತು. ಈ ಸಂಗತಿಗಳೆಲ್ಲ ಕೆಲವು ಸಂಸ್ಕೃತ ಗ್ರಂಥಗಳಲ್ಲಿವೆ; ಆಂಗ್ಲ ಹಾಗೂ ಇತರ ಭಾರತೀಯ

**ಮೂಲ : ರಾಮಕೃಷ್ಣ ಭಟ್ಟಾಚಾರ್ಯ** ಅನುವಾದ : **ಮ. ಶ್ರೀ. ಮುರಳಿ ಕೃಷ್ಣ**

ಭಾಷೆಗಳಲ್ಲಿ ಅನುವಾದಗೊಂಡಿರುವ ಕೃತಿಗಳಲ್ಲೂ ಲಭ್ಯವಿವೆ. ಆದರೆ ಇವುಗಳನ್ನು ಹೆಚ್ಚಿನ ರೀತಿಯಲ್ಲಿ ಪ್ರಚುರಪಡಿಸಲಾಗಿಲ್ಲ. ಹೀಗಾಗಿ ಭೌತವಾದದ ವಿರೋಧಿಗಳು ಅದರ ಬಗೆಗೆ ಅಪಪ್ರಚಾರಗಳನ್ನು ಮಾಡುತ್ತ, ಸತ್ಯಗಳ ಕತ್ತನ್ನು ಹಿಸುಕುತ್ತಿದ್ದಾರೆ. ಆದರೆ ದೇವಿಪ್ರಸಾದ್ ಚಟ್ಟೋಪಾಧ್ಯಾಯ, ಮೃಣಾಲ್ ಕಾಂತಿ ಗಂಗೋಪಾಧ್ಯಾಯ ಹಾಗೂ ಇತರ ಭೌತವಾದಿಗಳು, ರಿಚರ್ಡ್ ಗಾರ್ಬೆ, ಮೈಸೂರಿನ ಪ್ರೊ॥ ಹಿರಿಯಣ್ಣ, ಸತ್ಕರಿ ಮುಖರ್ಜಿಯವರಂತಹ ಭಾವನಾವಾದಿ ತತ್ವಶಾಸ್ತ್ರಜ್ಞರೂ ಚಾರ್ವಾಕ/ಲೋಕಾಯತ ವಿರೋಧಿ ವಿಮರ್ಶಕರ ತಪ್ಪು ನಿರ್ಣಯಗಳತ್ತ ಗಮನವನ್ನು ಸೆಳೆದಿದ್ದಾರೆ.

ಈ ನಿಟ್ಟಿನಲ್ಲಿ ಭಾರತದ ನಮ್ಮ ವಿಚಾರವಾದದ ಪರಂಪರೆಯತ್ತ ಕ್ಷಕಿರಣವನ್ನು ಬೀರುವಂತಹ ಕೆಲಸಗಳಾಗಬೇಕು. ಬರೆಹಗಳು ಮತ್ತು ಭಾಷಣಗಳ ಮೂಲಕ ಭೌತವಾದವನ್ನು ಬಗ್ಗುಬಡಿಯಲು ಪ್ರಯತ್ನಿಸುತ್ತಲೇ ಇರುವ ಭಿನ್ನ ಮತಧರ್ಮಿಗಳ (ಹಿಂದೂ, ಇಸ್ಲಾಂ, ಕ್ರೈಸ್ತ ಇತ್ಯಾದಿ) ಭಾವನಾವಾದಿಗಳಿಗೆ ತಕ್ಕ ಪ್ರತ್ಯುತ್ತರಗಳನ್ನು ನೀಡಬೇಕು. ಆದರೆ ಈ ಸಂದರ್ಭದಲ್ಲಿ ಒಂದು ಅಂಶವನ್ನು ಗಮನಿಸಬೇಕು. ಅದೇಂದರೆ ಮಾನಸಿಕ ಅಡೆತಡೆಗಳನ್ನು ಸಾವಕಾಶವಾಗಿ ನಿವಾರಿಸುವುದಕ್ಕಿಂತಲೂ ಒಂದು ಪ್ರಹಾರದ ಮೂಲಕ ಏಕಕಾಲದಲ್ಲಿ ಅವುಗಳನ್ನು ಎದುರಿಸಬೇಕು. ಅವು ದೇವರು, ಪವಾಡಗಳು, ಮೌಢ್ಯಾಚರಣೆಗಳಲ್ಲಿ ನಂಬಿಕೆ ಇತ್ಯಾದಿ ವಂಶಪಾರಂಪರ್ಯದ ಮೂಲಕ ಪ್ರವಹಿಸುತ್ತ ಬಂದಿರುವುದೇ ಜಾಸ್ತಿ. ಇಂತಹ ಸಾಂಪ್ರದಾಯಿಕ ಬದುಕಿಗೆ ಪರ್ಯಾಯವಾಗಿ ನಾವು ಒಂದು ತತ್ವಶಾಸ್ತ್ರದ ಸಿದ್ಧಾಂತವನ್ನು ಜನಮಾನಸದ ನಡುವೆ ಮಂಡಿಸಬೇಕಿರುವುದು ನಮ್ಮ ಕರ್ತವ್ಯವಾಗಬೇಕು. ಇದು ಕಷ್ಟಸಾಧ್ಯ. ಈ ದಿಶೆಯಲ್ಲಿ ನಾವು ಹೇಗೆ ಸಾಗಬೇಕೆಂಬುದು ಪ್ರಮುಖ ವಿಷಯವಾಗುತ್ತದೆ. ಏಕೆಂದರೆ ನಮ್ಮಲ್ಲಿ ಸ್ಥಳ, ಪ್ರಾಂತ್ಯ, ಸಾಮಾಜಿಕ ಸ್ತರ, ಕುಟುಂಬಗಳ ನಡುವೆ ಅಗಾಧ ಭಿನ್ನತೆಗಳಿವೆ. ಇದನ್ನು ಗಣನೆಗೆ ತೆಗೆದುಕೊಂಡು ಕಾಲಕ್ಕೆ ಸ್ಪಂದಿಸುವ ಹಾಗೂ ಪರಿಸ್ಥಿತಿ/ವ್ಯಕ್ತಿಗಳಿಗೆ ಅನುಸಾರವಾಗಿ ನಾವು ಕ್ರಿಯಾಶೀಲರಾಗಿ ಮುನ್ನಡೆಯಬೇಕು. ಒಬ್ಬ ಪ್ರವಾದಿ ಅಥವಾ ಪ್ರಚಾರಕನಂತೆ ಫರ್ಮಾನುಗಳನ್ನು ಹೊರಡಿಸಬಾರದು. ನಾವು ವಿನೀತರಾಗಿರಬೇಕು; ವಿಚಾರವಾದವನ್ನು ಸ್ಪಷ್ಟವಾಗಿ ಹಾಗೂ ಗಟ್ಟಿಯಾಗಿ ಮಂಡಿಸಬೇಕು.

ನಾವು ಹಿಂದಿ ಭಾಷೆಗಿಂತಲೂ ಪ್ರಾಂತೀಯ ಭಾಷೆಗಳು ಮತ್ತು ಸಣ್ಣ, ಸಣ್ಣ ಜನಾಂಗೀಯ ಸಮುದಾಯಗಳ ಉಪಭಾಷೆಗಳನ್ನು ಮನಃಪೂರ್ವಕವಾಗಿ ಬಳಸಬೇಕು. ನಮ್ಮದು ಬಹುಭಾಷೆಗಳ ದೇಶ. ಆದುದರಿಂದ ಸಂವಹನಕ್ಕೆ ಒಂದು ಸಮಾನ ಭಾಷೆ ಅವಶ್ಯ. ಒಳಿತೋ ಅಥವಾ ಕೆಡುಕೋ, ನಮ್ಮಲ್ಲಿ ಆಂಗ್ಲ ಭಾಷೆ ಒಂದು ಸಂಪರ್ಕ ಭಾಷೆಯಾಗಿ ಮುಂದುವರೆದಿದೆ. ಇದು ಅನ್ಯದೇಶದ ಭಾಷೆಯಾದರೂ, ಈಗಲೂ ಭಾರತದ ಎಲ್ಲ ಸಮುದಾಯಗಳ ಭಾಷಿಕರನ್ನು ಬೆಸೆಯುವ ಕೊಂಡಿಯಾಗಿದೆ. ಆದರೆ ಈ ಭಾಷೆಯ ಜ್ಞಾನವಿಲ್ಲದವರು ಪರಾಧೀನರಾಗುತ್ತಿರುವುದು ಕೂಡ ಸತ್ಯ. ಒಬ್ಬ ವ್ಯಕ್ತಿ ಆಂಗ್ಲ ಭಾಷೆಯಲ್ಲಿ ಪರಿಣತನಾಗಿದ್ದರೆ, ಆತನ ಅಭಿವ್ಯಕ್ತಿ ಜನರನ್ನು ತಲುಪದಿದ್ದರೂ ಗೌರವಕ್ಕೆ ಒಳಗಾಗುವ ಸಂದರ್ಭಗಳೇ ಹೆಚ್ಚು. ನಾವು ಜನರ ಭಾಷೆಯ ಮೂಲಕ ಸಂವಹನವನ್ನು ನಡೆಸಿದರೆ ಅವರನ್ನು ನೇರವಾಗಿ ತಲುಪಬಹುದು.

ಆದರೆ ಪ್ರಾಂತೀಯ ಭಾಷೆಗಳಲ್ಲಿ ಮಾತನಾಡುವುದು, ಬರೆಯುವುದು ಇತ್ಯಾದಿ ಪ್ರಾರಂಭದ ಹೆಜ್ಜೆಯೇ ಸರಿ. ನಾವು ಜನರ ಮನಸ್ಸನ್ನು ಅರಿಯಬೇಕು. ಹೀಗಾದಾಗ, ನಾವು ನಮ್ಮ ಆಲೋಚನೆಗಳು/ವಿಚಾರಗಳನ್ನು ಅವರಿಗೆ ತಲುಪಿಸಬಹುದು. ಆಲಂಕಾರಿಕ ಶಬ್ದಪ್ರಯೋಗ, ಉದ್ದ ವಾಕ್ಯಗಳು, ಮಬ್ಬುಮಬ್ಬು ಸೂಚನೆಗಳ ಭಾಷಣಗಳು ಹಾಗೂ ಬರಹಗಳಿಗೆ ಕಡಿವಾಣವನ್ನು ಹಾಕಬೇಕು. ಸಾಮಾನ್ಯ ಜನರಿಗಿಂತ ನಾವು ಶ್ರೇಷ್ಠರಲ್ಲ ಎಂಬ ಭಾವನೆ ನಮ್ಮಲ್ಲಿ ನೆಲೆವೂರಬೇಕು. ನಾವು ಸಮಾನಸ್ಕಂದರಾಗಿ ಜನರ ನಡುವೆ ಕೆಲಸವನ್ನು ಮಾಡಬೇಕು. ಈ ವಿಷಯವನ್ನು ಇನ್ನಷ್ಟು ವಿಶದೀಕರಿಸಬೇಕು. ಮಾನವರನ್ನು ವಿಚಾರವಂತ ಪ್ರಾಣಿಗಳು ಎಂದು ಕರೆಯುತ್ತಾರೆ. ಅವರಲ್ಲಿ ವಿವೇಕ ಹಾಸುಹೊಕ್ಕಾಗಿದೆ. ಆದರೂ ಯುಕ್ತಾಯುಕ್ತ ಪರಿಜ್ಞಾನ ಅಥವಾ ವಿವೇಚನೆಯ ಜೊತೆ ಸಹಜ ಪ್ರವೃತ್ತಿಗಳು ಹಾಗೂ ಭಾವನೆಗಳು ಬೇರು ಬಿಟ್ಟಿರುತ್ತವೆ. ಆದುದರಿಂದ ವಿವೇಚನೆಯ ಹಾದಿಯ ತುಂಬ ಎಡರು ತೊಡರುಗಳಿರುತ್ತವೆ. ಭಾವನೆಗಳು, ಸಹಜ ಪ್ರವೃತ್ತಿಯ ಕ್ಷಿಪ್ರ ಪ್ರತಿಕ್ರಿಯೆಗಳು, ಇತ್ಯಾದಿ ವಿವೇಚನೆಯನ್ನು ಆವರಿಸಿಕೊಳ್ಳದಂತೆ ನಾವು ಕ್ರಿಯಾಶೀಲರಾಗಬೇಕು. ಅನುಭವಗಳು, ಸ್ವಪರೀಕ್ಷೆ ಹಾಗೂ ಸ್ವವಿಮರ್ಶೆಯಿಂದ ನಾವು ಕಲಿಯಬೇಕು. ಜನರನ್ನು ಶಿಕ್ಷಿತ/ಪುನರ್ಶಿಕ್ಷಿತರನ್ನಾಗಿಸುವುದರ ಮುನ್ನ ನಾವು ಅಂದರೆ ವಿಚಾರವಾದಿಗಳು ಹಾಗಾಗಬೇಕು.



ನಾನು ವಿಚಾರವಾದಿ ಚಳವಳಿಯ ಯುವ ಕಾರ್ಯಕರ್ತರ ದೃಷ್ಟಿಯಲ್ಲಿ ಒಬ್ಬ ಗುರುವಾಗಲು ಬಯಸುವುದಿಲ್ಲ. ವಯಸ್ಸು ಮತ್ತು ಅನುಭವಗಳು ನನಗೆ ಕೆಲವು ಪಾಠಗಳನ್ನು ಕಲಿಸಿವೆ. ಒಬ್ಬ ಹಿರಿಯ ಕಾರ್ಯಕರ್ತನಾಗಿ ನಾನು ಒಂದು ಕಿವಿಮಾತನ್ನು ಹೇಳಲು ಇಚ್ಛಿಸುತ್ತೇನೆ. ಯುವ ಕಾರ್ಯಕರ್ತರಿಗೆ ಅವಶ್ಯವಾಗಿ ಸಂಯಮ, ಹೆಚ್ಚಿನ ಸಂಯಮವಿರಬೇಕು. ನಾವು ಶೀಘ್ರಗತಿಯ ಓಟಗಾರರಲ್ಲ; ಮ್ಯಾರಥಾನ್ ಓಟಗಾರರು. ವಿವೇಚನೆಯ ಯುಗ ಒಂದು ದಿನದಲ್ಲಿ ಸಾಕಾರಗೊಳ್ಳುವ ಸಂಗತಿಯಲ್ಲ. ಅದಕ್ಕಾಗಿ ಸಾಮಾಜಿಕ, ಆರ್ಥಿಕ ಮತ್ತು ರಾಜಕೀಯ ವಲಯಗಳಲ್ಲಿ ನಾವು ಬದಲಾವಣೆಗಳು ಜರುಗುವಂತಹ ವಾತಾವರಣವನ್ನು ಸೃಷ್ಟಿಸಬೇಕು. ಹಾಗಾದಾಗ ಮಾತ್ರ ನಾವು ನೂತನ ಶಕೆಯ ಮುಂಜಾವನ್ನು ಕಾಣಬಹುದು.

ಈ ಸಮ್ಮೇಳನಕ್ಕೆ ನನ್ನನ್ನು ಮುಖ್ಯ ಅತಿಥಿಯನ್ನಾಗಿ ಆಹ್ವಾನಿಸಿದ್ದಕ್ಕೆ ಧನ್ಯವಾದಗಳು. ನಾನು ಈ ಚಳವಳಿಯ ಭಾರತದ ಮತ್ತು ಇತರ ದೇಶಗಳ ಹುತಾತ್ಮರಿಗೆ ಶ್ರದ್ಧಾಂಜಲಿಯನ್ನು ಅರ್ಪಿಸುತ್ತೇನೆ. ಇತ್ತೀಚಿನ ವರ್ಷಗಳಲ್ಲಿ ಗೋವಿಂದ್ ಪನ್ಸಾರೆ, ಎನ್. ಎ. ದಾಭೋಲ್ಕರ್, ಗೌರಿ ಲಂಕೇಶ್‌ರಂತಹ ವಿಚಾರವಾದಿಗಳು ಗುಂಡಿಗೆ ಬಲಿಯಾಗಿದ್ದಾರೆ. ಅವರು ಮುಕ್ತಚಿಂತನೆಯ ಹಿತದಲ್ಲಿ ತಮ್ಮ ಪ್ರಾಣಾರ್ಪಣೆಯನ್ನು ಮಾಡಿದ್ದಾರೆ. ನಾನು ಮಂಡಿಸಿದ ವಿಚಾರಗಳಿಂದ ನಿಮ್ಮ ಆಲೋಚನೆಗಳಿಗೆ ಒಂದಿಷ್ಟು ಪುಷ್ಟಿ ದೊರೆತರೆ, ಅದೇ ನನಗೆ ದೊಡ್ಡ ಇನಾಮು.

*(ಭಾರತದ ಖ್ಯಾತ ಭೌತವಾದಿ ತತ್ವಶಾಸ್ತ್ರಜ್ಞ ಹಾಗೂ ಕೋಲ್ಕತ್ತದ ಪಾವ್‌ಲೋವ್ ಇನ್‌ಸ್ಟಿಟ್ಯೂಟ್‌ನ ಫೆಲೋ ರಾಮಕೃಷ್ಣ ಭಟ್ಟಾಚಾರ್ಯ ಅವರು ಭಾರತ ವಿಚಾರವಾದಿ ಸಂಘಗಳ ಒಕ್ಕೂಟದ ೧೧ನೇ ರಾಷ್ಟ್ರೀಯ ಸಮ್ಮೇಳನದಲ್ಲಿ ಮಾಡಿದ ಭಾಷಣದ ಭಾವಾನುವಾದ)*


ಮೂಲ : **ರಾಮಕೃಷ್ಣ ಭಟ್ಟಾಚಾರ್ಯ**

ಅನುವಾದ : **ಮ. ಶ್ರೀ. ಮುರಳಿ ಕೃಷ್ಣ**

ನಂ. ೩೮, ೩ನೇ ಕ್ರಾಸ್, ರಾಜಾ ಗಾರ್ಡನಿಯ ಲೇಔಟ್

ತುರಹಳ್ಳಿ, ಸುಬ್ರಹ್ಮಣ್ಯಪುರ ಅಂಚೆ, ಬೆಂಗಳೂರು – ೫೬೦ ೦೬೧







# ಕಲಾವಿದನ ಕಲಾತ್ಮಕತೆ ನೈಪುಣ್ಯತೆಯಲ್ಲಿ ಅರಳಿದ ಕಲಾಕೃತಿಗಳು



ಡಾ॥ ಶ್ರೀಧರ್‌ಮೂರ್ತಿಯವರು ಚಿತ್ರಕಲಾ ಮಹಾವಿದ್ಯಾಲಯದಲ್ಲಿ ಮುದ್ರಣ ವಿಭಾಗದ ಮುಖ್ಯಸ್ಥರಾಗಿ ಸೇವೆ ಸಲ್ಲಿಸುತ್ತಿದ್ದಾರೆ. ಇಂಟಾಗ್ಲಿಯೋ, ವುಡ್ ಕಟ್ಟಿಂಗ್, ಸಿಲ್ಕ್ ಪ್ರಿಂಟ್, ಅಲ್ಯುಮೀನಿಯಂ ಪ್ಲೇಟ್, ಸ್ಟೋನ್ ಕಟ್ಟಿಂಗ್ ಹೀಗೆ ನಮಗೆ ಬೇಕಾದ ರೀತಿಯ ಕಲಾಕೃತಿಗಳನ್ನು ಈ ಮೇಲಿನ ಮಾದರಿಯಲ್ಲಿ ಕೊರೆದು ನಂತರ ಅದಕ್ಕೆ ಬೇಕಾದ ರೀತಿಯಲ್ಲಿ ಇಂಕನ್ನು ತುಂಬಿ ಕಲಾಕೃತಿಯನ್ನು ರಚಿಸುತ್ತಾರೆ. ಇವರು ರಚಿಸಿರುವ ಮಡಿಕೆ, ಗಂಟೆ, ಮರ ಇವೆಲ್ಲವೂ ಇಂಟಾಗ್ಲಿಯೋ ಮಾಧ್ಯಮದಲ್ಲಿ ರಚಿಸಿದ್ದು. ಇಂತಹ ಅದ್ಭುತ ಕಲಾ ಮಾಧ್ಯಮವನ್ನು ಪ್ರತಿಕೆಗಳಲ್ಲಿ ಪಾಂಪ್ಲೆಟ್‌ಗಳ ತಯಾರಿಕೆಯಲ್ಲಿ ಸುಲಭವಾಗಿ ಬಳಸಬಹುದು. ಇವರು ರಚಿಸಿದ ಜಲವರ್ಣ ಚಿತ್ರಗಳು ವಿಭಿನ್ನ ಸಂದೇಶವನ್ನು ನೀಡುವುದಲ್ಲದೇ ಮಾನವನ ಹುಟ್ಟು ಬೆಳವಣಿಗೆ, ಆದಿ-ಅಂತ್ಯವನ್ನು ಸೂಚಿಸುತ್ತವೆ. ಅವರ ವಿವಿಧ ವಿಚಾರಗಳನ್ನು ತಮ್ಮ ಕಲಾಕೃತಿಗಳಲ್ಲಿ ಚಿತ್ರಿಸಿದ್ದಾರೆ. ಹೀಗೆ ಹಲವಾರು ಕಲಾತ್ಮಕ ವಿಷಯಗಳನ್ನು ಡಾ॥ ಶ್ರೀಧರ್‌ಮೂರ್ತಿ ಕಲಾಸಕ್ತರ ಮಡಿಲಿಗೆ ಅರ್ಪಿಸಿರುವುದು ವಿಶೇಷ. ಇವರು ರಾಜ್ಯ ಮತ್ತು ರಾಷ್ಟ್ರ ಮಟ್ಟದಲ್ಲಿ ಪ್ರದರ್ಶನ ಮತ್ತು ಕಾರ್ಯಾಗಾರ ನಡೆಸಿದ್ದಾರೆ.

**– ಬಳಕೂರು ವಿ.ಎಸ್.ನಾಯಕ, ಬೆಂಗಳೂರು, ಮೊಬೈಲ್:9448687636**





Printed & published by Dr. Siddanagouda Patil on behalf of Navakarnataka Publications (P) Ltd., Embassy Centre, Crescent Road, Bengaluru-1 and printed at Sri Vinayaka Printers, No. 738/10, 60th Cross, 5th Block, Rajajinagar, Bengaluru-560 010. Published at Bengaluru. Editor : Dr. Siddanagouda Patil. 

